ಶಾಲಾ ವಾಚ

ಮಾನ್ಯ

“ಕಸ್ತೂರಿ” ಮೈಸೂರು ರಾಜ್ಯ
ಸ್ಕೂಲುಗಳು ಮತ್ತು ಟ್ರೇನಿಂಗ್ ಸಂಸ್ಥೆಗಳ
ಕೊಂಡುಕೊಳ್ಳಲು ಮನ್ನಣೆ ಪಡೆದಿದೆ. ಸರಕಾರವು ಈ ಬಗ್ಗೆ ಕೆಳ
ಗಿನ ಪರಿಪತ್ರ ಹೊರಡಿಸಿದೆ:

OFFICE OF THE DIRECTOR OF PUBLIC INSTRUCTION IN MYSORE, BANGALORE

No. T3. 1761–49/58–9. Dated 9–7–1958

**CIRCULAR**

The Heads of High and Middle Schools (Primary V to VIII Class) and Training Institutions in the state are requested to subscribe for the Kannada magazine “KASTURI” for the Reading Rooms of their Institutions out of their Library and Reading Room funds.

*Place of availability*:– ‘The Editor, Kasturi’
Samyukta Karnatak Press,
Koppikar Road, HUBLI

*Rate of subscription* :– Rs. 8·00 P. A. (including postage)

*Sd/–* **M. C. Muniswamy**
*for* Director

# ಕಸ್ತೂರಿ

ಕನ್ನಡ ಡೈಜೆಸ್ಟ

ಪ್ರತಿತಿಂಗಳ ೧ನೆ ದಿನಾಂಕ
ಪ್ರಕಟವಾಗುವದು.



ಮುಖ್ಯ ಸಂಪಾದಕರು :
ರಂಗನಾಥ ದಿವಾಕರ



ಪ್ರಕಾಶಕರು :
ಲೋಕಶಿಕ್ಷಣ ಟ್ರಸ್ಟ-ಹುಬ್ಬಳ್ಳಿ



ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ



ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ



ಮುಖಪುಟ ಚಿತ್ರ :
ಮಗ್ನೋಲಿಯ ಪುಷ್ಪ
ಪ್ರೊ. ಎಚ್.ಆರ್.ಲದ್ವಾ, ಧಾರವಾಡ



ಚಂದಾ ದರ :

| | | |
|---|---|---|
| ವಾರ್ಷಿಕ (ಅಂಚೆಸೇರಿ) | | ರೂ. ೮.೦೦ |
| ಅರ್ಧ ವರ್ಷ | — | ರೂ. ೪.೫೦ |
| ಬಿಡಿಸಂಚಿಕೆ | — | ರೂ. ೦.೭೫ |

## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತ್ತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ "ಕಸ್ತೂರಿ"ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

---

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೇ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

---

# ಈ ಸಂಚಿಕೆಯಲ್ಲಿ



ಪುಸ್ತಕ ವಿಭಾಗ

Bhaskar V. Kundolkar
Kalaramathi.



# ಕಸ್ತೂರಿ

ವರ್ಷ ೩ ಸಪ್ಟಂಬರ್ ೧೯೫೮ ಸಂಚಿಕೆ ೧

ಶ್ರೀ ರಾಮಕೃಷ್ಣ ಪರಮಹಂಸರ ಒಂದು ಪಾವನ ಪ್ರಸಂಗ

## ಅಂತರಂಗದ ಉದ್ದೇಶ

ಒಮ್ಮೆ ಸ್ವಾಮಿ ರಾಮಕೃಷ್ಣ ಪರಮಹಂಸರು ಈಶಚಿಂತನೆಯಲ್ಲಿ ಮಗ್ನರಾಗಿ ಕುಳಿತಿದ್ದಾಗ ಅವರ ಶಿಷ್ಯರಲ್ಲೊಬ್ಬ ಓಡೋಡುತ್ತ ಬಂದು, "ಸ್ವಾಮೀ, ನೀವು ಕಲಿಸುವ ಸಕಲ ಉದಾತ್ತ ತತ್ತ್ವಗಳನ್ನು ನಾವು ನಿಷ್ಠೆಯಿಂದ ಪಾಲಿಸುತ್ತಿದ್ದೇವೆ. ಆದರೆ ಇಂದು ಮುಂಜಾನೆ ನಾನು ನದೀ ತೀರಕ್ಕೆ ಹೋದಾಗ ಅಲ್ಲಿಯ ಪರ್ಣಕುಟಿಯ ನೆರೆಯಲ್ಲಿ ವಾಸಿಸುವ ಗೃಹಸ್ಥನೊಬ್ಬ ನಿಮ್ಮ ವಿಚಾರದಲ್ಲಿ ಕೆಟ್ಟ ಮಾತುಗಳನ್ನಾಡುವುದನ್ನು ಕೇಳಿದೆ. ನಿಮ್ಮನ್ನು ಬಯ್ಯುದನ್ನು ಕೇಳಿದೆ'' ಎಂದ.

ಸ್ವಾಮೀಜಿಯವರು ಸಿಟ್ಟಿಗೆದ್ದು, "ಮೂರ್ಖಾ, ಗುರುನಿಂದೆಯನ್ನು ಶಾಂತರೀತಿಯಿಂದ ಹೇಗೆ ಕೇಳಿಕೊಂಡೆ? ಅವನ ಕಪಾಳಕ್ಕೊಂದು ಏಟನ್ನೇಕೆ ಬಿಗಿಯಲಿಲ್ಲ?" ಎಂದರು.

"ಹಾಗೆ ಮಾಡಲು ನನ್ನಿಂದಾಗಲಿಲ್ಲ. ಕ್ಷಮಿಸಬೇಕು ಗುರುಗಳೇ," ಎಂದನಾ ಶಿಷ್ಯ.

ಸ್ವಾಮೀಜಿಯವರ ಧ್ಯಾನಸಮಯ ಮುಗಿದೊಡನೆಯೇ ಇನ್ನೊಬ್ಬ ಶಿಷ್ಯ ಅವರ ಎದುರಿಗೆ ಬಂದು ನಮ್ರತೆಯಿಂದ, "ಗುರುಗಳೇ, ಇನ್ನೊಬ್ಬಾತ ಇಂದು ನಿಮ್ಮನ್ನು ಬಯ್ಯುತ್ತಿದ್ದ" ಎಂದ.

"ಆಗ ನೀನೇನು ಮಾಡಿದೆ?" ಪರಮಹಂಸರು ತಟ್ಟನೆ ಕೇಳಿದರು.

"ನಾನು ಅವನ ಕಪಾಳಕ್ಕೆರಡು ಬಿಗಿದೆ" ಶಿಷ್ಯ ಉತ್ತರವಿತ್ತ.

"ಛೆ! ಛೆ! ನೀನು ಇದನ್ನೇನು ಮಾಡಿದೆ? ಯಾರಾದರೂ ನಮ್ಮನ್ನು ನಿಂದಿಸಿದಾಗ ಶಾಂತ ರೀತಿಯಿಂದ ಸಹಿಸಿಕೊಳ್ಳುವುದು ನಮ್ಮ ಧರ್ಮವಾಗಿದೆ. ಪುನಃ ಹೀಗೆ ಮಾಡಬೇಡ," ಎಂದು ವ್ಯಥಿತ ಕಂಠದಲ್ಲಿ ಹೇಳಿದರು.

ಮೊದಲನೆಯ ಶಿಷ್ಯನಿಗೆ ಸ್ವಾಮೀಜಿಯವರು ಮಾಡಿದ್ದ ಉಪದೇಶವನ್ನು ಕೇಳಿದ್ದ ಈ ಎರಡನೆಯ ಶಿಷ್ಯನಿಗೆ ಗುರುಗಳ ಮಾತನ್ನು ಕೇಳಿ ಆಶ್ಚರ್ಯವಾಯಿತು. ಮೊದಲನೆಯ ಶಿಷ್ಯನಿಗೆ ಮತ್ತು ತನಗೆ ಮಾಡಿದ ಉಪದೇಶಗಳಲ್ಲಿಯ ವಿಸಂಗತಿಯನ್ನಾತ ಸ್ವಾಮೀಜಿಯವರ ಗಮನಕ್ಕೆ ತಂದುಕೊಟ್ಟ.

ಆಗ ಸ್ವಾಮೀಜಿ ನಗುತ್ತ ಹೇಳಿದರು: "ಮಗು, ನೀನಿಲ್ಲೇ ತಪ್ಪುತ್ತಿರುವಿ. ನನ್ನ ಅಂತರಂಗದ ಉದ್ದೇಶ–ಶಿಷ್ಯರಿಗೆ ಒಳ್ಳೆಯದಾಗಬೇಕು ಎಂಬುದೊಂದೇ ಆಗಿದೆ. ಹೇಡಿ ಧೀರನಾಗಬೇಕು ಮತ್ತು ಹೊಡೆದಾಟಕ್ಕಿಳಿಯುವವ ಸಮಾಧಾನಿಯಾಗಬೇಕು. ಮನುಷ್ಯನ ನಡತೆಯಲ್ಲಿ ಸಮತೋಲವಿರದಿದ್ದರೆ ಜೀವನಕ್ಕೆ ಏನೂ ಅರ್ಥವಿರುವುದಿಲ್ಲ!"

# ದೇವರು ಇದ್ದಾನೆ

ರಂಗನಾಥ ದಿವಾಕರ

" ಏಕಂ ಸತ್ ವಿಪ್ರಾ ಬಹುಧಾ ವದಂತಿ "

— ಋಗ್ವೇದ

ದೇವರು ಇದ್ದಾನೆಯೆ, ಇದ್ದಾನೆಯೆ, ಇದ್ದಾನೆಯೆ, ಎಂಬ ಪ್ರಶ್ನೆ ಅನಾದಿ ಎಂದೇ ಹೇಳ ಬಹುದು. ಮಾನವನು ಮೃಗಗಳಂತೆ ವನ ಸಂಚಾರಿಯಾಗಿ ತಿರುಗುತ್ತಿರುವಾಗಲೂ ಈ ಪ್ರಶ್ನೆ ಕೇಳುತ್ತಿದ್ದನು ; ಈಗ ವಿಮಾನಾದಿಗಳಲ್ಲಿ ಆಕಾಶ ಸಂಚಾರಿಯಾಗಿರುವಾಗಲೂ ಈ ಪ್ರಶ್ನೆಯನ್ನೆ ಕೇಳುವನು.

ಇದಕ್ಕೆ ಉತ್ತರ, ದೇವರು ಇದ್ದಾನೆ, ಎಂಬುದೇ.

ನಾವು ಕನ್ನಡ ನಾಲ್ಕನೆ ವರ್ಗದಲ್ಲಿದ್ದಾಗ ಒಳ್ಳೇ ಕನ್ನಡ ಗ್ರಂಥಕರ್ತರಾದ ಕೀರ್ತಿಶೇಷ ವೆಂಕಟ ರಂಗೋ ಕಟ್ಟಿ ಎಂಬವರ ಕ್ರಮಿಕ ಪಠ್ಯ ಪುಸ್ತಕ ಗಳನ್ನು ಓದುತಿದ್ದೆವು. ನಾಲ್ಕನೆ ಇಯತ್ತೆಗೆ ನಿಯೋಜಿತವಾದ ಪುಸ್ತಕದಲ್ಲಿ 'ದೇವರು ಇದ್ದಾನೆ' ಎಂಬ ಶೀರ್ಷಕದ ಒಂದು ಪಾಠ ಇತ್ತು. ಅದು ಈಗಲೂ ನನ್ನ ನೆನಪಿಗೆ ಬರುತ್ತಿದೆ; ಅಚ್ಚೊತ್ತಿದಂತೆ, ನನ್ನ ಮಿದುಳಿನಲ್ಲಿ ನೆಲೆಯಾಗಿ ನಿಂತಿದೆ. ದೇವರು ಇದ್ದಾನೆಯೇ, ಎಂಬ ಪ್ರಶ್ನೆ ತಲೆ ಎತ್ತಿದಾಗೆಲ್ಲ, ಅದೇ ಉತ್ತರ ಪ್ರತಿಧ್ವನಿಯಂತೆ ನನ್ನ ಕಿವಿಗೆ ಬೀಳುತ್ತಿದೆ.

'ದೇವರು' ಅಂದರೆ ಏನು, ಆ ಶಬ್ದದ ಅರ್ಥ ವೇನು ? ಅವನ ನಾಮ-ರೂಪ ಹೇಗಿರುವದು ? ಅವನು ಒಬ್ಬ ವ್ಯಕ್ತಿರೂಪನೇ, ಮಾನುಷ ಗುಣ ಗಳಿಂದ ಯುಕ್ತನೇ, ಅವನು ಗುಣಿಯೋ ನಿರ್ಗುಣಿಯೋ, ಅವನು ವ್ಯಕ್ತಿತ್ವರಹಿತವಾದ ಒಂದು ಶಕ್ತಿಯೋ, ಅವನು ಜ್ಞೇಯನೊ ಅಜ್ಞೇಯನೊ ಎಂಬ ಮುಂತಾದ ಪ್ರಶ್ನೆಗಳು ಬೇಕಾದಷ್ಟು ಕೇಳಲಾಗುತ್ತಿವೆ. ಅವುಗಳಿಗೆ ವಿದ್ವಾಂಸರು, ಅನುಭಾವಿಗಳು, ತತ್ವಜ್ಞರು ತಮ್ಮ ತಮ್ಮ ಪರಿ ಯಿಂದ ಹಲವಾರು ವಿವಿಧ ಉತ್ತರಗಳನ್ನೂ ಕೊಡುತ್ತಾ ಬಂದಿದ್ದಾರೆ. ಆ ಉತ್ತರಗಳಲ್ಲಿ ಭಿನ್ನತೆ, ವಿರೋಧ, ವಿರೋಧಾಭಾಸ ಇವು ಕಂಡುಬಂದರೂ ದೇವರ ಬಗ್ಗೆ ಒಂದು ವಿಷಯ ದಲ್ಲಿ ಎಲ್ಲ ಆಸ್ತಿಕ ಮಹಾಶಯರಲ್ಲಿ ಒಮ್ಮತವಿದೆ ಎಂದು ಹೇಳಬಹುದು. ಅದೇನೆಂದರೆ, ದೇವ ರೆಂದರೆ ವಿಶ್ವದಲ್ಲಿಯ ಸರ್ವಶ್ರೇಷ್ಠ ಪರಮಶಕ್ತಿ—ಅದರ ನಾಮ-ರೂಪ ವೈಶಿಷ್ಟ್ಯಾದಿಗಳು ಏನೇ ಇರಲಿ.

ದೇವರೆಂದರೆ ಪರಾತ್ಪರಶಕ್ತಿ, ಎಂಬುದು ಎಲ್ಲರಿಗೂ ಒಪ್ಪುವಂಥ ಸತ್ಯವಿರುವಾಗ, ಹಲವು ದೇವರ ವಿಚಾರ ಹೇಗೆ ಮತ್ತು ಏಕೆ ಹುಟ್ಟಿತು ? ಬೇರೆ ಬೇರೆ ಜನರು ಆ ಶಕ್ತಿಗೆ ಬೇರೆ ಬೇರೆ ಹೆಸ ರನ್ನು ಕಲ್ಪಿಸಿದರು. ಆ ಹಲವು ಹೆಸರುಗಳ ಮೂಲಕ, ದೇವರು ಸಹ ಹಲವು ಎಂಬ ಭ್ರಮೆ ಉಂಟಾಯಿತು. 'ಸಕ್ಕರೆ' ಎಂಬ ಒಂದೇ ವಸ್ತುವಿಗೆ, 'ಸಾಖರ (ಮರಾಠಿ), 'ಶಕ್ಕರ (ಹಿಂದೀ)' 'ಶುಗರ (ಇಂಗ್ಲೀಷ) ಎಂಬ ಹೆಸರು ಇಟ್ಟೊಡನೆ ಅಷ್ಟು ಬೇರೆ ಬೇರೆ ವಸ್ತು ಗಳಿವೆ ಎಂಬ ಆಭಾಸವಾಗುವದು. ಆದರೆ ನಿಜ ಸ್ಥಿತಿ ಹಾಗಿರುವುದಿಲ್ಲ. ಅದೇ ರೀತಿ, ಹೀಗಾಗುವ

ಇನ್ನೊಂದು ಕಾರಣವೇನಂದರೆ, ದೇವರೆಂಬ ಒಂದೇ ವಸ್ತುವಿನಲ್ಲಿ ಬೇರೆ ಬೇರೆ ಜನರು ವಿವಿಧ ಮತ್ತು ವಿಶೇಷ ಗುಣಗಳ ಆರೋಪ ಮಾಡುವು ದರಿಂದ ದೇವರು ಅನೇಕವಿರಬಹುದು ಎಂಬ ಭಾವನೆ ಉಂಟಾಗುವದು. ಇಂಥ ಪ್ರಸಂಗ ಉಂಟಾದಾಗಲೆ ನಮ್ಮ ವೇದಕಾಲದ ಋಷಿಗಳು 'ದೇವರೊಬ್ಬ ಹೆಸರು ಹಲವು' ಎಂಬ ಮಹಾ ಸತ್ಯವನ್ನು ನುಡಿದು ತತ್ವವನ್ನು ಸಾರಿದರು.

ಆಧುನಿಕ ವಿಜ್ಞಾನಿಗಳು 'ದೇವರು' ಎಂಬ ವಸ್ತು ಇಲ್ಲೇ ಇಲ್ಲ ಎಂದು ಹೇಳುವರೋ? ಹಾಗಿಲ್ಲ. ಹಲವು ವಿಜ್ಞಾನಿಗಳು ಹಾಗೆ ಹೇಳು ವರು. ಪುರಾತನಕಾಲದಲ್ಲಿ ಸಹ ದೇವರಿಲ್ಲ, ಎಂದು ಹೇಳುವವರು ಇದ್ದೇ ಇದ್ದರು. ಅವರಲ್ಲಿ 'ಚಾರ್ವಾಕರು' ಎಂಬ ಜಡವಾದಿಗಳು ಪ್ರಮು ಖರು. ಆದರೆ ಆಧುನಿಕ ವಿಜ್ಞಾನಿಗಳರಸನಾದ ಐನ್‌ಸ್ಟಾಯಿನನ ಸ್ಪಷ್ಟ ಅಭಿಪ್ರಾಯವೇನು? ಅವನು ಅಂದದ್ದು— ವಿಶ್ವದ ರಹಸ್ಯಗಳನ್ನು ಕಂಡುಹಿಡಿಯಲು ಪ್ರಯತ್ನ ಮಾಡುತ್ತ ಹೋದಂತೆ ಆ ರಹಸ್ಯಗಳ ಮೂಲದಲ್ಲಿರುವ ಪರಮ ಶಕ್ತಿಯ ಬಗ್ಗೆ ಇದ್ದ ಗೂಢಭಾವವು ಮತ್ತಷ್ಟು ಹೆಚ್ಚುವದು. ಅಗಾಧ, ಅಮೋಘ, ಅನಂತ ಬುದ್ಧಿ ತತ್ವವೊಂದು (ರೀಝುನಿಂಗ ಪಾವರ) ಎಲ್ಲೆಲ್ಲಿಯೂ ಕಾರ್ಯ ಮಾಡುತ್ತಿರುವದೆಂಬುದು ನಮಗೆ ಹೆಜ್ಜೆಜ್ಜೆಗೂ ಪ್ರತೀತಿಗೆ ಬರುವದು. 'ಆ ಬುದಿತತ್ವ-ಆ ಬುದ್ಧಿಶಕ್ತಿ ಅದೇ ನನ್ನ ದೇವರು.'

ದೇವರು ಇದ್ದಾನೆ, ಎಂಬ ಬಗ್ಗೆ ಇದಕ್ಕೂ ಹೆಚ್ಚಿನ ಸಾಕ್ಷಿ ಯಾರದು? ಇದಕ್ಕೂ ಹೆಚ್ಚಿನ ಸಾಕ್ಷಿ ಇದೆ– ನಮ್ಮ ಅಂತಃಕರಣದ ಸಾಕ್ಷಿ, ನಮ್ಮ ಅಂತಃಶಕ್ತಿಯ ಸಾಕ್ಷಿ; ಅದೇ ಪುನಃಪುನಃ ಹೇಳುವದು, ಸಾರುವದು, ಎಲ್ಲವೂ ಇಲ್ಲದಂತಾ ದರೂ 'ಸತ್ಯ' (ಯಾವಾಗಲೂ ಇರುವಂತ ಹದು) ಎಂಬುದು ಅಖಂಡವಾಗಿ, ಅನಂತವಾಗಿ ಇದ್ದೇ ತೀರುವದು. ಅದೇ ದೇವರು– ಆದುದ ರಿಂದಲೆ 'ದೇವರು ಇದ್ದಾನೆ' ಎಂಬುದು ಸ್ವಯಂ ಸಿದ್ಧ.

---

## ಆತನ ಆಸ್ತಿತ್ವದ ಪ್ರಮಾಣಗಳು

ತಾರಾನಿಬಿಡ ಗಗನದ ಅದ್ಭುತಗಳು, ಇರುಳನ್ನು ಬೆಂಬತ್ತುವ ಹಗಲು, ಸತ್ತ ನೆಲಕ್ಕೆ ಜೀವ ಕೊಡುವ ಮಳೆ, ಸಮುದ್ರವನ್ನು ಸೀಳುವ ಹಡಗು, ಹಾರುವ ಹಕ್ಕಿ, ನೆಗೆಯುವ ಕುದುರೆ, ನಿಶ್ಚಲನಾದ ಗುಲಾಬಿ ಮತ್ತು ಅಚಲನಾದ ಕಲ್ಲು, ಗಾಳಿ, ಮೋಡ, ಬೆಂಕಿ, ನೀರು, ರಮಣಿಯ ಕಟಾಕ್ಷ, ಮಗುವಿನ ನಗು, ಬಾಗುವ ತಾಳೆ, ಮಾಗುವ ಖರ್ಜೂರ,—ಓ ವಿಶ್ವಾಸಿಗಳೇ, ಇಲ್ಲಿವೆ ಅಲ್ಲಾನ ಮಹಿಮೆಯ ಪ್ರಮಾಣಗಳು.

ಮರಗಳು ಆತನ ಮಹಿಮೆಯನ್ನೇ ಹಾಡುತ್ತವೆ, ಹೂಗಳು ತಮ್ಮ ಕಂಪನ್ನು ಅವನತ್ತಲೇ ಬೀರುತ್ತವೆ.

ಹೊಂಬೆಳಗಿನ, ಬಿಳಿ ನಡುಹಗಲಿನ ಮತ್ತು ನೀಲ ಸಂಧ್ಯೆಯ ಒಡೆಯ ಆತನೇ.

— ಕುರಾಣ

ಸದ್ಯವೇ
ಭಾರತಕ್ಕೆ
ಭೆಟ್ಟಿಕೊಡಲಿರುವ
ಮಹಾ ತತ್ವಜ್ಞಾನಿ



# ಬರ್ಟ್ರಂಡ್ ರಸೆಲ್

ಮುರಲೀಧರ

ಬರ್ಟ್ರಂಡ್ ರಸೆಲ್ಲರು ಇಂದು ಜೀವಂತರಾಗಿರುವ ಪಾಶ್ಚಾತ್ಯ ತತ್ವಜ್ಞಾನಿಗಳಲ್ಲೆಲ್ಲ ಶ್ರೇಷ್ಠರು; ತರ್ಕಶಾಸ್ತ್ರದಲ್ಲಿ ಅವರು ಅಗಾಧ ಪಂಡಿತರು; ಗಣಿತಶಾಸ್ತ್ರದಲ್ಲಿ ಅವರು ಆಲ್ಫ್ರೆಡ್ ವೈಟ್‌ಹೆಡ್ಡರ ಸಹಕಾರದಿಂದ ಹತ್ತು ವರ್ಷದ ಪರಿಶ್ರಮದಿಂದ ಬರೆದ Principia Mathematica ಗ್ರಂಥವು ಆ ಶಾಸ್ತ್ರದ ಒಂದು ಸೀಮಾಗ್ರಂಥವೆಂದು ಸ್ವೀಕೃತವಾಗಿದೆ. ೧೯೫೦ ರಲ್ಲಿ ಎಂಭತ್ತಕ್ಕೆ ಸಮೀಪವಾಗುತ್ತಿದ್ದ ಅವರಿಗೆ ನೋಬೆಲ್ ಸಾಹಿತ್ಯ ಪಾರಿತೋಷಕವನ್ನು ಕೊಡಲಾಯಿತು. ೬೦ ವರ್ಷಗಳಿಂದ ಜಗತ್ತು ಅನುಪಮವಾದ ಶೈಲಿಯಲ್ಲಿ ಬರೆದ ಅವರ ಗ್ರಂಥಗಳಿಂದ ಸ್ಫೂರ್ತಿ ಪಡೆದಿದೆ; ಅವರ ನಿಶಿತವಾದ ಹಾಸ್ಯದಿಂದ ಉತ್ಸಾಹಿತವಾಗಿದೆ; ಅವರ ಸ್ವತಂತ್ರ ವಿಚಾರಗಳಿಂದ ಉತ್ತೇಜನಗೊಂಡಿದೆ. ಇದೇ ವರ್ಷ ಅವರು ಯುನೆಸ್ಕೋದವರಿತ್ತ ಕಳಿಂಗ ಪಾರಿತೋಷಕಕ್ಕೂ ಪಾತ್ರರಾದರು; ಪ್ರಿಯದರ್ಶಿಯಾದ ಅಶೋಕನ ಸ್ಮರಣಾರ್ಥವಾಗಿ ಭಾರತದ ಶ್ರೀ ಪಾಟನಾಯಕರು ಸ್ಥಾಪಿಸಿದ ಈ ಬಹುಮಾನವನ್ನು, ವಿಜ್ಞಾನವನ್ನು ಜನಪ್ರಿಯವಾಗಿ ಮಾಡಲು ದುಡಿದವರಿಗೆ ವರ್ಷವರ್ಷವೂ ಕೊಡಲಾಗುತ್ತಿದೆ.

ಆದರೆ ಬರ್ಟ್ರಂಡ್ ರಸೆಲ್ಲರು ಸಾಹಿತಿ, ವಿಜ್ಞಾನಿ, ತತ್ವಜ್ಞಾನಿಯಲ್ಲದೆ ಅದಕ್ಕೂ ಹತ್ತಂಗುಲ ಮೀರಿ ನಿಂತವರು. ತತ್ವಜ್ಞಾನದ ಗೂಢ ಗುಹೆಯಲ್ಲಿ ಮೂಗಿನ ತುದಿಯಲ್ಲಿ ಕಣ್ಣು ನಟ್ಟು ಕುಳಿತಿರದೆ ಅವರು ಮಾನವನನ್ನು ಮತ್ತು ಅವನ ಭವಿಷ್ಯವನ್ನು ಹಸನಾಗಿಸುವ ಕನಸು ಕಟ್ಟಿದವರು ; ಮತ್ತು ಕನಸಿನಿಂದ ತೃಪ್ತರಾಗದೆ ತಮ್ಮ ವಿಚಾರಗಳಂತೆ ಬಾಳಲು ಮತ್ತು ಮಾನವನ ಸ್ವಾತಂತ್ರ್ಯ ರಕ್ಷಣೆಗಾಗಿ ಹೋರಾಡಲು ಮುಂದೆ ಬಂದು ನಾನಾ ಕಷ್ಟಗಳನ್ನು ಭೋಗಿಸಿದವರು.

ಬರ್ಟ್ರಂಡ್ ರಸೆಲ್ಲರು ೧೮೭೨ ಮೇ ೧೮ ರಂದು

ಇಂಗ್ಲಂಡಿನ ಆಗರ್ಭ ಶ್ರೀಮಂತ ಕುಲವೊಂದ ರಲ್ಲಿ ಜನಿಸಿದರು. ಆಂಬರ್ಲೆ ವೈಕೌಂಟರ ಎರಡನೇ ಮಗನೂ ಪ್ರಸಿದ್ಧ ಉದಾರ ಮತವಾದಿ ಬ್ರಿಟಿಶ ಪ್ರಧಾನ ಮಂತ್ರಿಗಳಲ್ಲೊಬ್ಬರಾದ ಲಾರ್ಡ್ ಜಾನ್ ರಸೆಲ್ಲರ ಮೊಮ್ಮಗನೂ ಆದ ಅವರು ನಾಲ್ಕನೇ ವಯಸ್ಸಿನಲ್ಲೇ ತಂದೆ ತಾಯಿಗಳಿಬ್ಬರನ್ನೂ ಕಳೆದುಕೊಂಡರು.

ಬರ್ಟ್ರ್ಯಾಂಡ್ ರಸೆಲ್ಲರ ತಂದೆ ವಿಚಾರದಿಂದ ಅಜ್ಞೇಯವಾದಿಯಾಗಿದ್ದರು, ಅಂತೆಯೇ ತಮ್ಮ ಮಗನನ್ನು ತಮ್ಮ ಕೆಲ ಅಜ್ಞೇಯವಾದಿ ಮಿತ್ರರು ಪಾಲಿಸಬೇಕೆಂದು ಅವರು ಉಯಿಲು ಬರೆದು ಹೋಗಿದ್ದರು. ಆದರೆ ಕಡು ಕ್ರೈಸ್ತಮತೀಯರಾದ ಅವರ ಅಜ್ಜ ನ್ಯಾಯಾಲಯಕ್ಕೆಹೋಗಿ ಉಯಿಲನ್ನು ರದ್ದುಪಡಿಸಿ ಬಾಲಕ ರಸೆಲ್ಲರನ್ನು ತಮ್ಮ ಆಶ್ರಯದಲ್ಲಿ ತೆಗೆದುಕೊಂಡರು. ಅಜ್ಜಿಯ ನಿಷ್ಕರ ತರಬೇತಿಯೆಲ್ಲ ನೀರಲ್ಲಿ ಹೋಮವಾಗಿ ಹದಿನೆಂಟನೇ ವಯಸ್ಸಿನಲ್ಲಿ ರಸೆಲ್ಲರು ಕೇಂಬ್ರಿಜ್ ವಿಶ್ವವಿದ್ಯಾಲಯ ಸೇರುವುದರೊಳಗೇ ಕ್ರೈಸ್ತ ಧರ್ಮದಲ್ಲಿ ವಿಶ್ವಾಸವನ್ನು ಸಂಪೂರ್ಣವಾಗಿ ಕಳೆದುಕೊಂಡಿದ್ದರು.

ಅತಿರೇಕ ಶಿಸ್ತಿನ ದೆಸೆಯಿಂದಲೋ ಏನೊ, ಚಿಕ್ಕಂದಿನಿಂದಲೂ ರಸೆಲ್ಲರಲ್ಲಿ ಬಂಡಾಯ ಪ್ರವೃತ್ತಿ ಬೆಳೆದುಬಂದಿತ್ತು. ಪ್ರತಿಯೊಂದಕ್ಕೂ ಪ್ರಮಾಣಗಳು ಬೇಕೆಂದು ಅವರು ಅಪೇಕ್ಷಿಸುತ್ತಿದ್ದರು. ಭೂಮಿ ಗುಂಡಾಗಿದೆ ಎಂದು ಹಿರಿಯರು ಹೇಳಿದಾಗ ಅವರು ಅದನ್ನು ನಂಬಲು ನಿರಾಕರಿಸಿದರು. ಐದು ವರ್ಷದ ಈ ಹುಡುಗನ ಶಂಕೆಯನ್ನು ಸಮಾಧಾನಪಡಿಸಲು ಊರಿನ ಪಾದ್ರಿಯನ್ನು ಕರೆಯಲಾಯಿತು. ಪಾದ್ರಿಯ ಮಾತು ಕೇಳಿದ ಮೇಲೆ ಬರ್ಟ್ರ್ಯಾಂಡ್ ರಸೆಲ್ಲರು ನೆಲವನ್ನು ಅಗೆಯತೊಡಗಿದರು. ಭೂಮಿ ಗುಂಡಾಗಿದ್ದುದಾದರೆ ತೋಡುತ್ತ ತೋಡುತ್ತ ಆಚೆಯ ಬದಿಯನ್ನು ತಲಪಲು ಸಾಧ್ಯವಾಗಬೇಕಲ್ಲ ಎಂದು ಅವರ ತರ್ಕ. ಇದು ಆಗುವ ಹೋಗುವ ಮಾತಲ್ಲ ಎಂದು ಹಿರಿಯರು ಹೇಳಿದಾಗ, "ನನ್ನ ಸಂಶಯ ಮತ್ತೆ ಚಿಗುರಿತು" ಎಂದಿದ್ದಾರೆ ಅವರು ಈ ಬಾಲ್ಯದ ಘಟನೆಯನ್ನು ಕುರಿತು. ಹೀಗಿರುವಾಗ ಪುರಾವೆಗಳಿಲ್ಲದ ಕ್ರೈಸ್ತ-ಅಥವಾ ಯಾವುದೇ-ಧರ್ಮದಲ್ಲಿ ಅವಿಶ್ವಾಸ ಅವರಿಗುಂಟಾದ್ದರಲ್ಲಿ ಆಶ್ಚರ್ಯವಿಲ್ಲ. ಸಂಗಡಲೇ ಅವರ ಹಿರಿಯರಿಗೆ ಒಪ್ಪಿಗೆಯಿಲ್ಲದ ತತ್ವಜ್ಞಾನದ ಮೇಲೆ ಅವರಿಗೆ ಅಪರಿಮಿತ ಆಸಕ್ತಿಯುಂಟಾಯಿತು.

ಸ್ಫುಟವಾದ ವಿಚಾರ ಮತ್ತು ಪ್ರಮಾಣಸಿದ್ಧವಾದ ಜ್ಞಾನ ಇವುಗಳ ಹಂಬಲವು ಕೇಂಬ್ರಿಜ್ಜಿನಲ್ಲಿ ಅವರನ್ನು ಗಣಿತಶಾಸ್ತ್ರದ ಕಡೆ ಸೆಳೆಯಿತು. ನಾವು ಯಾವುದನ್ನು ಜ್ಞಾನವೆಂದು ತಿಳಿಯುವೆವೋ ಅವುಗಳಲ್ಲಿ ಬಹು ಭಾಗ ಸಂಶಯಾಸ್ಪದವೇ ಆಗಿದೆ. ನಿಶ್ಚಿತ ಜ್ಞಾನವು ಎಲ್ಲಿಯಾದರೂ ಇರುವುದಾದಲ್ಲಿ ಅದು ಗಣಿತದಲ್ಲೇ ಇರಬೇಕೆಂದು ಅವರಿಗೆ ತೋರಿತು. ಆಗಿನ ಗಣಿತ ಶಾಸ್ತ್ರವನ್ನು ನೋಡಿದಾಗ ಅದರಲ್ಲಿ ಅನೇಕ ಪೂರ್ವಾಪರ ವಿರೋಧಗಳು ಅವರಿಗೆ ಕಾಣಿಸಿದವು. ಅದರಿಂದ ಆ ಶಾಸ್ತ್ರದ ತಳಹದಿಯನ್ನು ತರ್ಕಶುದ್ಧವಾಗಿ ಮಾಡುವ ಹವ್ಯಾಸಕ್ಕೆ ಅವರಿಳಿದರು. ಅದೇ ಅನೇಕ ಗಣಿತ ಶಾಸ್ತ್ರ ಗ್ರಂಥಗಳನ್ನು ಬರೆಯಲು ಅವರನ್ನು ಪ್ರೇರೇಪಿಸಿದ್ದು ಮತ್ತು ಅದಕ್ಕೆ ಶಿಖರಪ್ರಾಯವಾಗಿ ತಮ್ಮ ಗುರುವಾದ ವ್ಹೈಟ್‌ಹೆಡ್ಡರೊಡನೆ Principia Mathematica ಗ್ರಂಥವನ್ನು ರಚಿಸಲು ಕಾರಣವಾದದ್ದು (೧೯೧೦-೧೩) ಗಣಿತ ಶಾಸ್ತ್ರವನ್ನು ತರ್ಕಶಾಸ್ತ್ರದ ಅಂಗವಾಗಿ ಪ್ರತಿಪಾದಿಸಿದ ಈ ಮೂರು ಸಂಪುಟಗಳ ಪುಸ್ತಕವು ಜಗತ್ತಿನ ೧೦೦ ಸಾರ್ವಕಾಲಿಕ ಶ್ರೇಷ್ಠ ಕೃತಿಗಳಲ್ಲೊಂದೆಂದು ಪರಿಗಣಿಸಲ್ಪಟ್ಟಿದೆ.*

ಸಂಗಡಲೇ ರಸೆಲ್ಲರ ಜೀವನದ ಇನ್ನೊಂದು

---

* ಗಣಿತ ಶಾಸ್ತ್ರದ ತಳ ಕಂಡ ಮೇಲೆ ಆ ಶಾಸ್ತ್ರ ಕೂಡ ಅನೇಕ ಸಂದಿಗ್ಧಗಳಿಂದ ಕೂಡಿದೆಯೆಂದೂ ಅದನ್ನೂ ನೂರಕ್ಕೆ ನೂರು ನಂಬಲಾಗುವುದಿಲ್ಲೆಂದೂ ರಸೆಲ್ಲರು ಮನಗಂಡರು. ಹೀಗಾಗಿ ಜಗತ್ತಿನಲ್ಲಿ ನಿಶ್ಚಿತ ಜ್ಞಾನವೇ ಶಕ್ಯವಿಲ್ಲೆಂಬುದು ಅವರ ತೀರ್ಮಾನವಾಯಿತು.

ಮುಖ ರೂಪುಗೊಳ್ಳುತ್ತಿತ್ತು. ಅವರ ಅಜ್ಜಿ ಕರ್ಮಠಳಾಗಿದ್ದರೂ ಉದಾರ ಮತವಾದಿಯಾಗಿದ್ದಳು. ಮಾನವನ ಆತ್ಮಸಾಕ್ಷಿಯ ಶ್ರೇಷ್ಠತೆಯಲ್ಲಿ ಅವಳಿಗೆ ಅಕ್ಷುಣ್ಣ ವಿಶ್ವಾಸವಿತ್ತು. ಅವಳು ಸಾಮ್ರಾಜ್ಯವಾದದ ಕಡುವಿರೋಧಿಯಾಗಿದ್ದು ಅಯರ್ಲಂಡಿಗೆ ಸ್ವಾತಂತ್ರ್ಯ ಕೊಡಬೇಕೆಂದು ಪ್ರತಿಪಾದಿಸುತ್ತಿದ್ದಳು. ಮಾನವನ ಸುಖದಲ್ಲಿ ಆಸ್ಥೆ ತಾಳಿದ್ದ ಅವಳು ಯುದ್ಧವನ್ನು ವಿರೋಧಿಸುತ್ತಿದ್ದಳು. ಅವಳ ವ್ಯಕ್ತಿತ್ವದ ಈ ಭಾಗ ಎಳೆಯ ರಸೆಲ್ಲರ ಮೇಲೆ ಆಳವಾದ ಪ್ರಭಾವ ಬೀರಿತ್ತು. ಮಾನವನ ವ್ಯಕ್ತಿ ಸ್ವಾತಂತ್ರ್ಯ ಮತ್ತು ಅವನ ಸುಖಕ್ಕಾಗಿ ಅನೇಕ ಹೋರಾಟಗಳನ್ನು ಅವರಿಂದ ಮಾಡಿಸಿದ್ದು ಇದೇ.

ಪ್ರಿನ್ಸಿಪಿಯಾ ಗ್ರಂಥ ಪ್ರಕಟವಾಗುತ್ತಿದ್ದಾಗ ಮಾನವಕುಲದ ಭವಿಷ್ಯದ ಮೇಲೆ ತೀವ್ರ ಪರಿಣಾಮ ಮಾಡುವ ಘಟನೆಗಳು ರೂಪುಗೊಳ್ಳುತ್ತಿದ್ದವು. ಮೊದಲನೇ ಜಾಗತಿಕ ಯುದ್ಧವು ಕೆಲವೇ ದಿನಗಳಲ್ಲಿ ಉರಿದೆದ್ದಿತು. ಇಂಗ್ಲಂಡಿನ ಮೇಲೆ ಅಪಾರವಾದ ಪ್ರೇಮವಿದ್ದರೂ ಬರ್ಟ್ರಂಡ್ ರಸೆಲ್ಲರು ಈ ಘಾತಕವಾದ ಯುದ್ಧವನ್ನು ವಿರೋಧಿಸಲು ನಿರ್ಧರಿಸಿದರು. ಇದರ ಫಲವಾಗಿ ಅವರು ಜನರಲ್ಲಿ ಅತ್ಯಂತ ಅಪ್ರಿಯರಾದರು. ಒಂದು ಸಲ ಅವರು ಭಾಷಣ ಮಾಡುತ್ತಿದ್ದಾಗ ಜನಜಂಗುಳಿ ಅವರ ಮೇಲೆ ಬಿದ್ದಿತು. ಇಬ್ಬರು ಕುಡಿದು ಮದವೇರಿದ ಹಂಗಸರು ಮೊಳೆಗಳಿಂದ ತುಂಬಿದ ಹಲಗೆಗಳಿಂದ ಅವರನ್ನು ಹೊಡೆಯತೊಡಗಿದರು. ಪೋಲೀಸರು ಸುಮ್ಮನೆ ನೋಡುತ್ತ ನಿಂತಿದ್ದರು. ಕೊನೆಗೆ ಅವರು ಲಾರ್ಡ್ ಕುಲದವರೆಂದು ತಿಳಿದ ಮೇಲೆಯೇ ಪೋಲೀಸರು ಅವರನ್ನು ಪಾರು ಮಾಡಲು ಬಂದರಂತೆ!

ಯುದ್ಧವನ್ನು ಖಂಡಿಸಿದ್ದಕ್ಕಾಗಿ ಅವರು ಕೇಂಬ್ರಿಜ್ ವಿಶ್ವವಿದ್ಯಾಲಯದ ಫ್ಯಾಕಲ್ಟಿಯಿಂದ ಹೊರದೂಡಲ್ಪಟ್ಟರಲ್ಲದೆ ೧೯೧೮ ರಲ್ಲಿ ಆರು ತಿಂಗಳು ಸೆರೆಮನೆ ವಾಸವನ್ನೂ ಕಂಡರು. ಸೆರೆಮನೆಯಲ್ಲಿ ಅವರು "ಗಣಿತಾತ್ಮಕ ತತ್ತ್ವಜ್ಞಾನ ಪರಿಚಯ" ಮತ್ತು "ಮನಸ್ಸಿನ ಪೃಥಕ್ಕರಣ" ಎಂಬೆರಡು ಗ್ರಂಥಗಳನ್ನು ಬರೆದರು.

ತತ್ತ್ವಜ್ಞಾನಿಯಾಗಿ ಬರ್ಟ್ರಂಡ್ ರಸೆಲ್ಲರು, ಜ್ಞಾನವು ಮುಖ್ಯವಾಗಿ ಎರಡು ಬಗೆಯದೆಂದು ವಾದಿಸಿದ್ದಾರೆ. ಮೊದಲನೆಯದು ಪ್ರತ್ಯಕ್ಷ ಜ್ಞಾನ—ನೇರವಾಗಿ ಪರೀಕ್ಷಿಸಿ ತಿಳಿಯತಕ್ಕದ್ದು; ಎರಡನೆಯದು ತರ್ಕಬಲದಿಂದ ಸಾಧಿಸಿದ್ದು.

ಬೌದ್ಧಿಕ ಪ್ರಪಂಚದಲ್ಲಿ ಅವರು ಯಾವಾಗಲೂ ವಿಚಾರಸ್ವಾತಂತ್ರ್ಯವನ್ನು ಪ್ರತಿಪಾದಿಸಿದ್ದಾರೆ. ಅವರು ಗೊಂದಲಬಡಕ ವಿಚಾರ ಕ್ರಮಕ್ಕೆ ಪರಮ ಶತ್ರುವಾಗಿದ್ದಾರೆ. "ಅನುಭಾವವಾದ ಮತ್ತು ತರ್ಕ" ಎಂಬ ಪುಸ್ತಕದಲ್ಲಿ (೧೯೧೮) ಅವರು ಅನುಭಾವವಾದದ ವಿಸಂಗತಿಗಳನ್ನು ಕಟುವಾಗಿ ಟೀಕಿಸಿದ್ದಾರೆ.

ಸ್ವತಂತ್ರ ವಿಚಾರಿಯೆಂದರೆ ಯಾರು? ರಸೆಲ್ಲರ ಅಭಿಪ್ರಾಯದಲ್ಲಿ ಹಿರಿಯರು ಬಾಲ್ಯದಲ್ಲಿ ತನಗೆ ಹೇಳಿದ್ದರೆಂಬ ಕಾರಣದಿಂದ ಯಾರಾದರೂ ಏನನ್ನಾದರೂ ನಂಬುತ್ತಿದ್ದರೆ ಅವನು ಸ್ವತಂತ್ರ ವಿಚಾರಿಯೆನಿಸಲಾರ. ಜೋಕೆಯಿಂದ ಯೋಚಿಸಿದ ನಂತರ ಪ್ರಮಾಣಗಳು ಯಾವ ಅಭಿಪ್ರಾಯಕ್ಕೆ ಹೆಚ್ಚು ಅನುಕೂಲವಾಗಿವೆಯೋ ಅದನ್ನು--ಅದೆಷ್ಟೇ ವಿಚಿತ್ರವೆನಿಸಿದರೂ—ನಂಬುವಾತನೇ ಸ್ವತಂತ್ರ ವಿಚಾರಿ. "ಸ್ವತಂತ್ರ ವಿಚಾರಿಯು ಅನ್ಯರ ಅಧಿಕಾರಕ್ಕೆ (ವಾಕ್ ಪ್ರಮಾಣಕ್ಕೆ) ಬಾಗುವುದಿಲ್ಲ, ತನ್ನ ಸ್ವಂತ ಬಯಕೆಗಳಿಗೂ ಬಗ್ಗುವುದಿಲ್ಲ, ಪ್ರಮಾಣಗಳಿಗೆ ಮಾತ್ರ ತಲೆವಾಗುತ್ತಾನೆ. ಅವನ ವಿಚಾರ ತಪ್ಪೆಂದು ಸಿದ್ಧಪಡಿಸಿರಿ, ಅವನು ಅಭಿಪ್ರಾಯ ಬದಲಿಸುವನು. ಹೊಸ ತಥ್ಯವನ್ನು ಅವನಿಗೊದಗಿಸಿರಿ, ಆಗ ಅವನು ಅಗತ್ಯಬಿದ್ದರೆ ತನ್ನ ಅತ್ಯಂತ ಪ್ರೀತಿಯ ಅಭಿಪ್ರಾಯಗಳನ್ನೂ ತ್ಯಜಿಸುವನು."

ವಿಚಾರ ಸ್ವಾತಂತ್ರ್ಯದ ಮತ್ತು ಮಾನವ ಸ್ವಾತಂತ್ರ್ಯದ ಹಟ ಅವರನ್ನು ಹಲವು ವಿವಾದಗಳಲ್ಲಿ ತೊಡಗಿಸಿದೆ. ಶಿಕ್ಷಣದಲ್ಲಿ ಅಭಿಜಾತ ಸಾಹಿತ್ಯಕ್ಕೆ ಕೊಟ್ಟ ಪ್ರಾಧಾನ್ಯವನ್ನು ಕಡಿಮೆಮಾಡಿ ವಿಜ್ಞಾನಕ್ಕೆ ಪ್ರಾಧಾನ್ಯ ಕೊಡಬೇಕೆಂದು ಪುಸ್ತಕ ಬರೆದು ಅವರು ಸಂಪ್ರದಾಯವಾದಿಗಳನ್ನು ಕೆರಳಿ

ಸಿದರು. ಲೈಂಗಿಕ ವಿಚಾರದಲ್ಲಿ ಕೌಟುಂಬಿಕ ಬಂಧನ ಮತ್ತು ಸಾಂಪ್ರದಾಯಿಕ ನೀತಿ ನಡವಳಿಯನ್ನು ("ಸ್ಪಷ್ಟವಾಗಿ ವಿಚಾರ ಮಾಡುವುದೊಂದೇ ಮಾನವನೀತಿ" ಎನ್ನುತ್ತಾರವರು) ವಿರೋಧಿಸಿ "ಅನೀತಿಯ ಅಧ್ವರ್ಯು" ಎಂದು ಬಿರುದು ಪಡೆದರು. ರಾಜಕಾರಣದಲ್ಲಿ ಅನುದಾರ ಪ್ರವೃತ್ತಿಯನ್ನು ಖಂಡಿಸಿ ಆಚಾರವಿಚಾರ ಸ್ವಾತಂತ್ರ್ಯಗಳನ್ನು ಪ್ರತಿಪಾದಿಸಿ ಸರ್ವಾಧಿಕಾರವಾದಿಗಳ ವಿರೋಧ ಕಟ್ಟಿಕೊಂಡರು. ೧೯೪೦ ರಲ್ಲಿ ಅವರನ್ನು ಅಮೇರಿಕದ ನ್ಯೂಯಾರ್ಕ್ ಸಿಟಿ ಕಾಲೇಜಿನ ಫೆಕಲ್ಟಿಗೆ ನೇಮಿಸಿದಾಗ ಒಬ್ಬ ಸನಾತನಿ ಮಹಿಳೆ ಕೋರ್ಟಿಗೆ ಹೋಗಿ ಈ "ಕಾಮುಕ, ಲೋಲುಪ, ಅಶ್ಲೀಲ..ನಾಸ್ತಿಕ ..ಮಿಥ್ಯಾವಾದಿ" ಯನ್ನು ನೇಮಿಸಬಾರದೆಂದು ಆಜ್ಞೆಯನ್ನು ತಂದಳು. ೧೯೨೦ ರಲ್ಲಿ ರಶಿಯಕ್ಕೆ ಹೋಗಿ ಅಲ್ಲಿನ ಕಮ್ಯುನಿಸ್ಟರ ಸರ್ವಾಧಿಕಾರ ಪ್ರವೃತ್ತಿಯನ್ನೂ ದ್ವೇಷಮೂಲವಾದ ಚಳವಳಿಯನ್ನೂ ಖಂಡಿಸಿ ಪುಸ್ತಕ ಬರೆದುದರಿಂದಲೂ ನಿರಂತರವಾಗಿ ಕಮ್ಯುನಿಜಮನ್ನು ವಿರೋಧಿಸಿದ್ದರಿಂದಲೂ ಕಮ್ಯುನಿಸ್ಟರಿಗೂ ಅವರು ನಂ. ೧ ವೈರಿಯಾಗಿದ್ದಾರೆ.

ರಸೆಲ್ಲರು ನಾಲ್ಕು ಬಾರಿ ಮದುವೆಯಾದರು. ೨೨ ನೇ ವಯಸ್ಸಿನಲ್ಲೇ ಅವರ ಮೊದಲ ವಿವಾಹವಾಯಿತು. ಅವಳಿಂದ ವಿಚ್ಛೇದ ಮಾಡಿಸಿಕೊಂಡ ಮೇಲೆ ೧೯೨೧ ರಲ್ಲಿ ಎರಡನೇ ಮದುವೆಯಾಗಿ ಅದರಿಂದ ಎರಡು ಮಕ್ಕಳಾದವು. ೧೯೩೫ ರಲ್ಲಿ ಆ ವಿವಾಹವೂ ಬಿಡುಗಡೆಯಲ್ಲಿ ಮುಕ್ತಾಯವಾಗಿ ಮರುವರುಷ ಅವರು ತಮ್ಮ ಕಾರ್ಯದರ್ಶಿಯನ್ನೇ ಮದುವೆಯಾಗಿ ಒಂದು ಗಂಡು ಮಗುವನ್ನು ಪಡೆದರು. ೧೯೫೨ ರಲ್ಲಿ ಆ ಮದುವೆಯಿಂದಲೂ ಬಿಡುಗಡೆಹೊಂದಿ ೫೨ ವಯಸ್ಸಿನ ಎಡಿತ್ ಫ್ಲಿಂಚ್ ಎಂಬ ಅಮೇರಿಕನ್ ಲೇಖಿಕೆಯನ್ನು ಮದುವೆಯಾದರು.

ರಸೆಲ್ಲರು ಉತ್ಕಟ ಪ್ರಜಾಸತ್ತಾವಾದಿಗಳು. ೧೯೩೧ ರಲ್ಲೇ ಅಣ್ಣ ತೀರಿದ ನಂತರ ಅರ್ಲ್ ಪದವಿ ದೊರೆತಿದ್ದರೂ ಅವರಿಗೆ ಲಾರ್ಡ್ ರಸೆಲ್ ಎನಿಸಿಕೊಳ್ಳುವುದರಲ್ಲಿ ಮೆಚ್ಚಿಕೆಯಿಲ್ಲ. ಕೇವಲ ಮಿಸ್ಟರ್ ಬರ್ಟ್ರೆಂಡ್ ರಸೆಲ್ ಎನಿಸಿಕೊಂಬುದರಲ್ಲೇ ಅವರಿಗೆ ಪ್ರೀತಿ.

ಬರ್ಟ್ರೆಂಡ್ ರಸೆಲ್ಲರ ಚಾರಿತ್ರ್ಯದ ಅತಿ ಉದಾತ್ತ ಭಾಗವೆಂದರೆ ಅವರ ಮಾನವಪ್ರೀತಿ ಮತ್ತು ಅವರ ತತ್ವಜ್ಞಾನದ ಉದಾತ್ತತಮ ಅಂಶವೆಂದರೆ ಮಾನವನ ಭವಿತವ್ಯದಲ್ಲಿ ಅವರ ಅಸೀಮ ವಿಶ್ವಾಸ. "ದುಃಖವಾಗಲಿ ಮೌಢ್ಯವಾಗಲಿ ಮಾನವನ ಅಪರಿಹಾರ್ಯ ದಾಯವೆಂದು ನನಗನಿಸುವುದಿಲ್ಲ. ಬುದ್ಧಿಮತ್ತೆ, ಸಹನೆ ಮತ್ತು ವಾಕ್ಪ್ರತಿಭೆಯಿಂದ ಒಂದಲ್ಲ ಒಂದು ದಿನ ಮಾನವ ಕುಲವು ತಾನೇ ತಂದುಕೊಂಡ ಯಾತನೆಗಳಿಂದ ಪಾರಾಗಬಲ್ಲದೆಂದು ನಾನು ಖಂಡಿತವಾಗಿ ನಂಬಿದ್ದೇನೆ."

೮೬ ವರ್ಷದ ಈ ಆಶಾವಾದಿ ತತ್ತ್ವಜ್ಞಾನಿ ಮಾನವನ ಬಗ್ಗೆ ತಾವು ಇಟ್ಟುಕೊಂಡ ಈ ಮೂಲ ಆಸೆಯನ್ನು ಇಂದಿಗೂ ತೊರೆದಿಲ್ಲ. ಆದರೆ ಅವರ ಆಶಾವಾದ ಅನುಭವದಿಂದ ಬಹಳ ಪಾಠ ಕಲಿತಿದೆ. ೧೯೧೪ ರಲ್ಲಿ ಯುದ್ಧವನ್ನು ವಿರೋಧಿಸಿದ ಅವರು ೧೯೩೯ ರಲ್ಲಿ ಮಾನವ ಸ್ವಾತಂತ್ರ್ಯ ರಕ್ಷಣೆಗೆ ಬೇರೆ ಉಪಾಯವಿಲ್ಲವೆನಿಸಿದಾಗ ಯುದ್ಧವನ್ನು ಬೆಂಬಲಿಸಬೇಕಾಯಿತು. ಜಗತ್ತಿನಲ್ಲಿ "ತಮ್ಮ ಸುಖಕ್ಕಿಂತಲೂ ತಮ್ಮ ಅಜ್ಞಾನ, ಅಭ್ಯಾಸ, ನಂಬಿಕೆ ಮತ್ತು ಮತ್ಸರಗಳನ್ನೇ ಹೆಚ್ಚು ಪ್ರೀತಿಸುವ ಅನೇಕ ಜನಗಳು" ಇರುವುದನ್ನು ಕಂಡು ಅವರು ನೊಂದಿದ್ದಾರೆ.

ಈ ಹಟವಾದದ ದೆಸೆಯಿಂದ ಮಾನವಕುಲವು ಆಣವಿಕ ಯುದ್ಧದಲ್ಲಿ ಸರ್ವನಾಶಹೊಂದುವ ಸ್ಥಿತಿಗೆ ಬಂದು ನಿಂತದ್ದನ್ನು ನೋಡಿ ರಸೆಲ್ಲರ ಭೂತದಯಾಪರ ಹೃದಯ ದಿಗಿಲುಗೊಂಡಿದೆ. ಮಾನವ ಬಾಳಿದರಲ್ಲವೇ ಅವನ ಸ್ವಾತಂತ್ರ್ಯ, ಅವನ ಉತ್ಕರ್ಷ? ಆದ್ದರಿಂದ ಎಲ್ಲಕ್ಕೂ ಮೊದಲಿನ ಸ್ಥಾನ ಇಂದು ಯುದ್ಧವನ್ನು ತಡೆಗಟ್ಟುವುದಕ್ಕೇ ಇರಬೇಕೆಂದು ರಸೆಲ್ಲರು ಮತ್ತೆ ಎರಡನೇ ಬಾರಿ ಯುದ್ಧ ವಿರೋಧ ಚಳವಳಿ ಪ್ರಾರಂಭಿಸಿದ್ದಾರೆ. ಇದರಿಂದ ಮತ್ತೆ ಅವರು ಹಲವರ ಟೀಕೆಯನ್ನೆದುರಿಸಬೇಕಾಗಿದೆ.

ಆದರೂ ಈ ಧೀರ ಆತ್ಮದ ಕನಸು ಪ್ರತಿಯೊಬ್ಬನಿಗೂ ದಾರಿಗಂಬವಾಗಬಲ್ಲದು:

"ನಾನು ಒಂದು ಕನಸಿನ ಬೆಂಬತ್ತಿ ಜೀವಿಸುತ್ತ ಬಂದಿದ್ದೇನೆ: ವೈಯಕ್ತಿಕವಾಗಿ, ಉದಾತ್ತವಾದುದನ್ನು, ಸುಂದರವಾದುದನ್ನು, ಕೋಮಲವಾದುದನ್ನು ಪ್ರೀತಿಸಲೆಂದು; ಲೋಕೋತ್ತರ ಕ್ಷಣಗಳಲ್ಲಿ ಕಂಡ ಸತ್ಯದಿಂದ ಲೌಕಿಕ ಜೀವನಕ್ಕೆ ಬುದ್ಧಿವಾದ ಹೇಳಲೆಂದು; ಸಾಮಾಜಿಕವಾಗಿ, ವ್ಯಕ್ತಿಗಳಿಗೆಸ್ವಾತಂತ್ರ್ಯದಿಂದ ಬೆಳೆಯಲು ಆಸ್ಪದವುಳ್ಳ, ದ್ವೇಷ ಅಸೂಯೆ ದುರಾಶೆಗಳಿಗೆ ಆಹಾರವೆ ಇಲ್ಲದ್ದರಿಂದ ಅವು ನಿರ್ನಾಮವಾದಂಥ ಸಮಾಜವೊಂದರ ಕಲ್ಪನೆಯನ್ನು ಕಟ್ಟಲೆಂದು. ಇವುಗಳಲ್ಲಿ ನನ್ನ ನಂಬಿಕೆ ಇನ್ನೂ ಇದೆ. ಜಗತ್ತಿನಲ್ಲಿ ನಾನೆಷ್ಟು ಘೋರವನ್ನು ಕಂಡಿದ್ದರೂ ಈ ನಂಬಿಕೆ ಮಾತ್ರ ಅಲುಗಿಲ್ಲ."

## ಬಾಳು ಮತ್ತು ಸಾವು

ಮಾನವನ ವೈಯಕ್ತಿಕ ಅಸ್ತಿತ್ವವು ಒಂದು ನದಿಯ ಹಾಗಿರಬೇಕು. ಅದು ಮೊದಲು ಕಿರಿದಾಗಿ, ತನ್ನ ಇಕ್ಕಟ್ಟಾದ ದಂಡೆಗಳೊಳಗೆ ಇದ್ದು ಕಲ್ಲುಬಂಡೆಗಳನು ದಾಟುತ್ತ ಪ್ರಪಾತಗಳನ್ನು ಧುಮುಕುತ್ತ ಧಾವಿಸಬೇಕು. ಬರಬರುತ್ತ ನದಿ ಅಗಲವಾಗುತ್ತ ಹೋಗುತ್ತದೆ, ಅದರ ದಡಗಳು ದೂರ ದೂರವಾಗುತ್ತವೆ, ನೀರು ಸಾವಕಾಶವಾಗಿ ಹರಿಯತೊಡಗುತ್ತದೆ; ಕೊನೆಗೆ ಏನೊಂದು ವಿಚ್ಛೇದ ಗೋಚರವಾಗದಂತೆ ಅದು ಸಮುದ್ರದಲ್ಲಿ ಲೀನವಾಗಿ ತನ್ನ ವೈಯಕ್ತಿಕ ಅಸ್ತಿತ್ವವನ್ನು ನೋವಿಲ್ಲದೆ ಕಳೆದುಕೊಳ್ಳುತ್ತದೆ. ಯಾವಾತನು ಮುಪ್ಪಿನಲ್ಲಿ ತನ್ನ ಬಾಳನ್ನು ಈ ಬಗೆಯಿಂದ ನೋಡುವನೋ ಅವನು ಸಾವಿಗೆ ಅಂಜುವುದಿಲ್ಲ. ಏಕೆಂದರೆ ತಾನು ಏನನ್ನುಪ್ರೀತಿಸುತ್ತಿದ್ದನೋ ಅದು ಮುಂದೆಯೂ ನಡೆಯುತ್ತಿರುವುದೆಂದು ಅವನಿಗೆ ಸಮಾಧಾನವಿರುತ್ತದೆ. ದೇಹದ ಸತ್ವ ಹ್ರಾಸ ಹೊಂದಿದಂತೆ ಆವನಲ್ಲಿ ಆಯಾಸ ಹೆಚ್ಚುತ್ತ ಹೋದರೆ, ವಿಶ್ರಾಂತಿಯ ವಿಚಾರ ಅವನಿಗೆ ಅಪ್ರಿಯವೆನಿಸಲಾರದು. ಇನ್ನೂ ಕೆಲಸ ಮಾಡುತ್ತಿರುವಾಗಲೇ, ನಾನು ಇನ್ನು ಮಾಡಲಾರದ್ದನ್ನು ಇತರರು ಮುಂದುವರಿಸುತ್ತಿದ್ದಾರೆಂಬ ತಿಳಿವಳಿಕೆಯಲ್ಲಿ ನಾನು ಸಾಯಬೇಕೆಂದು ನನ್ನ ಆಸೆ; ಮಾಡಲು ಸಾಧ್ಯವಿದ್ದದ್ದನ್ನೆಲ್ಲ ಮಾಡಿದ್ದೇನೆಂಬ ವಿಶ್ವಾಸದಿಂದ ಆಗ ನಾನು ಸಂತುಷ್ಟನಾಗಿರುತ್ತೇನೆ.

— ಬರ್ಟ್ರಾಂಡ್ ರಸೆಲ್

## ಬೆಳಕು

ಬಡವರಿಗಾಗಿ ಬೆಳಕು ತನ್ನಿ, ಆದರೆ ಶ್ರೀಮಂತರಿಗಾಗಿ ಹೆಚ್ಚು ಬೆಳಕು ತನ್ನಿ; ಏಕೆಂದರೆ ಶ್ರೀಮಂತರಿಗೆ ಬಡವರಿಗಿಂತಲೂ ಹೆಚ್ಚು ಬೆಳಕು ಬೇಕಾಗುತ್ತದೆ. ಪಾಮರರಿಗಾಗಿ ಬೆಳಕು ತನ್ನಿ, ಆದರೆ ಕಲಿತವರಿಗಾಗಿ ಹೆಚ್ಚು ಬೆಳಕು ತನ್ನಿ; ಏಕೆಂದರೆ ನಮ್ಮ ಯುಗದ ಶಿಕ್ಷಣದಲ್ಲಿ ಮಿಥ್ಯಾದಂಭವೇ ಹೆಚ್ಚಾಗಿದೆ. ಆದ್ದರಿಂದ ಎಲ್ಲರಿಗಾಗಿ ಬೆಳಕು ತನ್ನಿ, ಉಳಿದದ್ದನ್ನು ದೇವರ ಇಚ್ಛೆಗೆ ಬಿಡಿ; ಏಕೆಂದರೆ ಪರಮಾತ್ಮ ಹೇಳಿದ್ದಾನೆ, "ಕರ್ಮಣ್ಯೇವಾಧಿಕಾರಸ್ತೇ."

—ಸ್ವಾಮೀ ವಿವೇಕಾನಂದ

# ಜೀವನದಾನಿ ಜಯಪ್ರಕಾಶ

ಪಾಂ.

೧೯೫೪ ಏಪ್ರಿಲ್ ೧೮ರಂದು, ಬುದ್ಧದೇವನಿಗೆ ೨೫ ಶತಮಾನಗಳ ಹಿಂದೆ ಜ್ಞಾನೋದಯವಾದಂಥ ಬುದ್ಧ ಗಯೆಯಲ್ಲಿ ಆಚಾರ್ಯ ವಿನೋಬಾ ಭಾವೆಯವರ ನೇತೃತ್ವದಲ್ಲಿ ಆರನೇ ಸರ್ವೋದಯ ಸಮ್ಮೇಲನ ಪ್ರಾರಂಭವಾಯಿತು. ಗಾಂಧೀಜಿಯ ಸಂಗಡಿಗರಾಗಿದ್ದ ಪ್ರಭೃತಿಗಳೆಲ್ಲರೂ ಅಲ್ಲಿದ್ದರು. ಪ್ರಧಾನ ಮಂತ್ರಿ ನೆಹರೂ, ರಾಷ್ಟ್ರಪತಿ ರಾಜೇಂದ್ರಪ್ರಸಾದ, ಪ್ರಜಾ ಸಮಾಜವಾದಿ ಪಕ್ಷದ ನೇತೃಗಳಾದ ಜೆ. ಬಿ. ಕೃಪಲಾನಿ—ಮತ್ತು ಕಾಂಗ್ರೆಸ್ ಸಂಸ್ಥೆಯಲ್ಲಿ ಹೆಸರಾಂತಿದ್ದ ಅನೇಕಾನೇಕರು. ವಿನೋಬಾಜಿಯ ನೂತನ ಯೋಜನೆಯಾದ ಭೂದಾನ ಚಳವಳಿ ವಿಚಾರ ಸಮ್ಮೇಲನದಲ್ಲಿ ಚರ್ಚೆಗೆ ಬಂದಿತ್ತು.



ಸಮ್ಮೇಲನದ ಎರಡನೇ ದಿನದ ಸಂಜೆ, ಸಾಧಾರಣ ವಿಷಯಗಳನ್ನು ಕುರಿತು ಅಷ್ಟೊಂದು ರುಚಿಕಟ್ಟಾಗಿ ಎನ್ನಲು ಬಾರದ ಚರ್ಚೆ ನಡೆದಿದ್ದಾಗ, ಸಮಾಜವಾದಿ ನಾಯಕರಾದ ಜಯಪ್ರಕಾಶ ನಾರಾಯಣರು ಎದ್ದು ನಿಂತು ಒಂದು ಹೇಳಿಕೆಯಿತ್ತರು. "ನಾನು ಭೂದಾನ ಆಂದೋಲನಕ್ಕಾಗಿ ಜೀವನದಾನ ಮಾಡಲು ನಿರ್ಧರಿಸಿದ್ದೇನೆ. ಇಂದಿನಿಂದ ರಾಜಕಾರಣದಿಂದ ಮುಕ್ತನಾಗಿ ಸಂಪೂರ್ಣ ಜೀವನವನ್ನು ಈ ಧ್ಯೇಯಕ್ಕಾಗಿ ಮೀಸಲಿಡಲು ಸಂಕಲ್ಪಿಸಿದ್ದೇನೆ." ಈ ಆಜಾನುಬಾಹು, ಸುಂದರ ಕಾಯದ ಪುರುಷನ ಗಂಭೀರವಾದ ಘೋಷಣೆಯಿಂದ ಸಭೆಯಲ್ಲಿ ಕೆಲ ನಿಮಿಷ ಗಹನವಾದ ಮೌನ ಆವರಿಸಿತು. ಅದೊಂದು ಅನಿರೀಕ್ಷಿತವಾದ ಹೇಳಿಕೆಯಾಗಿತ್ತು — ಅದೂ ಸಮಾಜವಾದಿ ಜಯಪ್ರಕಾಶರಿಂದ. ಆದರೆ ಅದು ಸಮ್ಮೇಲನಕ್ಕೊಂದು ಹೊಸ ಚೈತನ್ಯವನ್ನೂ ಕೊಟ್ಟಿತು ಭೂದಾನವೆಂಬುದು ಬರಿ ಮರುಳರ ಬಡಬಡಿಕೆಯಲ್ಲ; ಅದಕ್ಕಾಗಿ ಜೀವನವನ್ನು ಧಾರೆಯೆರೆಯಲು ಸಿದ್ಧನಾದ ಮನುಷ್ಯ ಇಲ್ಲಿದ್ದಾನೆ—ಎಂದು ಅದರ ತಾತ್ಪರ್ಯವಾಗಿತ್ತು

ಜಯಪ್ರಕಾಶ ನಾರಾಯಣರ ಈ ನಿರ್ಣಯ ವಿಲಕ್ಷಣವೇ ಆಗಿತ್ತು. ಗಾಂಧೀಜಿಯ ನಿಕಟ

ವರ್ತಿಯೊಬ್ಬನಿಂದ ಅದು ಬಂದಿದ್ದರೆ ಅಷ್ಟು ಆಶ್ಚರ್ಯಪಡಬೇಕಾಗಿದ್ದಿಲ್ಲ ಆದರೆ ಜಯಪ್ರಕಾಶರು ಕಾಂಗ್ರೆಸ್ಸಿನಲ್ಲಿದ್ದಾಗಲೂ ಗಾಂಧೀಜಿಯ ಪದ್ಧತಿಯನ್ನು ಕಟುವಾಗಿ ಟೀಕಿಸಿದವರು. "ಗಾಂಧೀಜಿಯ ರಾಮರಾಜ್ಯದಲ್ಲಿ ಶ್ರೀಮಂತರು ತಮ್ಮದಲ್ಲದ್ದನ್ನು ಬಡವರಿಗೆ ಕೊಡಬೇಕು ಮತ್ತು ಬಡವರು ತಮ್ಮದು ತಮಗೆ ಸಿಕ್ಕಿತೆಂದು ಶ್ರೀಮಂತರಿಗೆ ಕೃತಜ್ಞರಾಗಿರಬೇಕು" ಎಂದು ಅವರೊಮ್ಮೆ ಬರೆದಿದ್ದರು. ಮಾರ್ಕ್ಸ್‌ವಾದಿ ಸಮಾಜವಾದಿಯಾಗಿ, ಕೂಟಯುದ್ಧದ ವೀರನಾಗಿ, ಸಮಾಜವಾದಿ ಪಕ್ಷದ ಸ್ಥಾಪಕನಾಗಿ—ಭಾರತೀಯ ರಾಜಕಾರಣದ ಬೆಂಕಿ ಪೈಲವಾನನೆನಿಸಿದ್ದ ಮನುಷ್ಯ ಈಗ ಶುದ್ಧ ಗಾಂಧೀವಾದಿಯಾಗಿ ಭೂದಾನ ಆಂದೋಲನಕ್ಕೆ ಬಾಳನ್ನು ಮುಡುಪಾಗಿಟ್ಟಿದ್ದನು. ಪ್ರಧಾನಮಂತ್ರಿ ನೆಹರು ಅವರ ಪಟ್ಟಕ್ಕೆ ಉತ್ತರಾಧಿಕಾರಿಯೆಂದು ಅನೇಕರು ಭಾವಿಸಿರುವ ಪ್ರಥಮಶ್ರೇಣಿಯ ರಾಜಕಾರಣಿಯಿಂದ ಇಂಥ ಸಂಕಲ್ಪವು ಸಣ್ಣ ತ್ಯಾಗವಾಗಿರಲಿಲ್ಲ.

ಜಯಪ್ರಕಾಶ ನಾರಾಯಣರನ್ನು ಅನೇಕರು ಅನೇಕ ವಿಧವಾಗಿ ಭಾವಿಸಿದ್ದಾರೆ. ಕೆಲವರು ಅವರು ದೂರಾಲೋಚನೆಯ ಧೂರ್ತ ರಾಜಕಾರಣಿಯೆಂದೂ ಜೀವನದಾನವು ಅವರ ಒಂದು ಗತ್ತೆಂದೂ ಹೇಳುತ್ತಾರೆ. ಇತರರು ನಡುನೀರಲ್ಲಿ ಪಕ್ಷದ ಕೈಬಿಟ್ಟ ಪಲಾಯನವಾದಿಯೆಂದು ಅವರನ್ನು ಹೀಗಳೆಯುತ್ತಾರೆ. ಬೇರೆ ಕೆಲವರು ಅವರನ್ನು ಸಾಧು-ಸಂತರೆಂದು ವರ್ಣಿಸುತ್ತಾರೆ. ಭೂದಾನ ಚಳವಳಿಯಲ್ಲಿರುವ ಸಂತರೆಂದರೆ ಜಯಪ್ರಕಾಶರು, ರಾಜಕಾರಣಿಯೆಂದರೆ ವಿನೋಬಾ ಎನ್ನುವವರೂ ಇಲ್ಲದಿಲ್ಲ.

ಸಂತ ಬಿರುದನ್ನು ಸ್ವತಃ ಜಯಪ್ರಕಾಶರೇ ಒಪ್ಪಲಿಕ್ಕಿಲ್ಲ. ಧಾರ್ಮಿಕ ನಿಷ್ಠೆಯೇ ಸಂತತನದ ಒರೆಗಲ್ಲಾದರೆ ಅವರನ್ನು ಸಂತರ ಕೂಟದಲ್ಲಿ ಸೇರಿಸುವುದು ಕಷ್ಟ. ಆದರೂ ಜಯಪ್ರಕಾಶರ ತ್ಯಾಗಜೀವನದಲ್ಲಿ ಧಾರ್ಮಿಕ ಶ್ರದ್ಧೆಯ ಛಾಯೆ ಇರುವಂತೆ ಕಾಣುತ್ತದೆ. ಬಿಹಾರದ ಕವಾಕೋಲದಲ್ಲಿರುವ ಅವರ ಆಶ್ರಮದಲ್ಲಿ ಆಸ್ತಿಕತೆಯ ವ್ಯದು ಪ್ರಭೆ ಹಬ್ಬಿದೆ. ಅದರಲ್ಲಿ ಗಾಂಧೀ ಆಶ್ರಮದ ಕಾರ್ಯಕ್ರಮವಿರುತ್ತದೆ. ಆಶ್ರಮವಾಸಿಗಳು ಬೆಳಗಿನ ಐದು ಗಂಟೆಗೆ ಏಳುತ್ತಾರೆ. ಮೌನದಿಂದ ಪ್ರಾತಃಸ್ನಾನ ಮಾಡುತ್ತಾರೆ. ೫-೩೦ ಕ್ಕೆ ಆಶ್ರಮದ ಅಂಗಳದಲ್ಲಿ "ಓಂ ಅದಃ ಪೂರ್ಣಮಿದಃ ಪೂರ್ಣಂ..." ಎಂಬ ಉಪನಿಷತ್ತಿನ ಶಾಂತಿಮಂತ್ರದಿಂದ ಪ್ರಾರ್ಥನೆ ಪ್ರಾರಂಭವಾಗುತ್ತದೆ. "ಓಂ ತತ್ಸತ್ ಶ್ರೀ ನಾರಾಯಣ ತೂ. ಪುರುಷೋತ್ತಮ ಗುರು ತೂ. ಸಿದ್ಧ ಬುದ್ಧ ತೂ. ಸ್ಕಂದ ವಿನಾಯಕ ಸವಿತಾ ಪಾವಕ ತೂ" ಎಂಬ ಪದದೊಡನೆ ಅದು ಮುಕ್ತಾಯಗೊಳ್ಳುತ್ತದೆ.

ಸಮಾಜವಾದಿ ಜಯಪ್ರಕಾಶರು ಮೆಲ್ಲಮೆಲ್ಲನೆ ಧಾರ್ಮಿಕ ನೈಷ್ಠಿಕ ಜೀವನದತ್ತ ಸರಿಯುತ್ತಿದ್ದಾರೆ. ಮಾಂಸಾಹಾರಕ್ಕೆ ಅವರ ವಿರೋಧವಿಲ್ಲದಿದ್ದರೂ ಅವರೀಗ ಮಾಂಸಭಕ್ಷಣವನ್ನು ತೊರೆದಿದ್ದಾರೆ. "ಸುತ್ತಲಿನ ರೈತರು ತುಂಬ ಶ್ರದ್ಧಾಳುಗಳು. ನಾನು ಮಾಂಸ ತಿಂದರೆ ಅವರು ನೊಂದುಕೊಳ್ಳುತ್ತಾರೆ" ಎನ್ನುತ್ತಾರವರು. ಇದು ಧೂರ್ತ ರಾಜಕಾರಣಿಯ ಜನಪ್ರಿಯತೆ ಗಳಿಸುವ ಗತ್ತಾಗಿರಬಹುದೇ? ಆದರೆ ಜನರಿಗಾಗಿ ಇಷ್ಟೊಂದು ತ್ಯಾಗ ಮಾಡುವುದೇನು ಮಹಾ? ಎಂದು ಅವರ ಉತ್ತರ ಬರುತ್ತದೆ.

ಆದರೆ ನೀತಿಗೆ ಧಾರ್ಮಿಕ ಅಥವಾ ತಾತ್ವಿಕ ತಳಹದಿ ಬೇಕಾಗುತ್ತದೆಂದು ಜಯಪ್ರಕಾಶರಿಗೆ ಬರಬರುತ್ತ ಮನವರಿಕೆಯಾಗತೊಡಗಿದೆ. ೧೯೫೩ ರಲ್ಲಿ ಅವರು ಪುಣೆಯಲ್ಲಿ ಕೈಕೊಂಡ ಉಪವಾಸದಲ್ಲಿ ಧಾರ್ಮಿಕ ಭಾವನೆಯಿದ್ದಿಲ್ಲವೆ? ಅದಾದ ನಂತರವೇ ಅವರು "ಜಡವಾದ"ವನ್ನು ತೊರೆದು ಭೂದಾನದತ್ತ ಹೊರಳಿದ್ದರಲ್ಲವೆ?

ಮಧುಮೇಹದಿಂದ ಪೀಡಿತರಾದ ಅವರ

ಇನ್‌ಸುಲಿನ್ ಇಂಜೆಕ್ಶನ್ ತೆಗೆದುಕೊಳ್ಳಲು ನಿರಾಕರಿಸಿ ವಿನೋಬಾರ ಅಭಿಮತದಂತೆ ಆಯುರ್ವೇದಿಕ ಔಷಧವನ್ನು ತೆಗೆದುಕೊಂಡರು. ರೋಗ ಕಠಿನವಾಗಿದ್ದರೂ ಮಿತ್ರರು ಒತ್ತಾಯಿಸಿದರೂ ಅವರು ಇನ್‌ಸುಲಿನ್ ತೆಗೆದುಕೊಳ್ಳಲಿಲ್ಲ. ಇದರ ಪರಿಣಾಮವಾಗಿ ಅವರಿಗೆ ಮರಣ ಭಯ ಕೂಡ ಇತ್ತು. ಇದು ಕೇವಲ ವಿನೋಬಾರನ್ನು ಮೆಚ್ಚಿಸುವ ದಾಕ್ಷಿಣ್ಯವೇ? ಅಥವಾ ಅದರಲ್ಲಿ ಧಾರ್ಮಿಕ ವಿಶ್ವಾಸದ ಅಂಶವಿತ್ತೇ?

ಆದರೂ ಜಯಪ್ರಕಾಶರನ್ನು ಧಾರ್ಮಿಕ ದೃಷ್ಟಿಯಿಂದ ಸಂತನೆಂದು ಹೇಳಲು ಸಾಧ್ಯವಿಲ್ಲ. ಅವರ ದೃಷ್ಟಿ ಇನ್ನೂ ಲೌಕಿಕ, ತರ್ಕನಿಷ್ಠವಾಗಿಯೇ ಇದೆ. ಆದರೆ ಅವರು ನೀತಿ ನಡೆವಳಿಕೆಗಳಿಗೆ ಆಧ್ಯಾತ್ಮಿಕ ನೆಲಗಟ್ಟನ್ನು ಅರಸುತ್ತಿದ್ದಾರೆಂಬುದೂ ಅಷ್ಟೇ ಸತ್ಯವಾಗಿ ಕಾಣುತ್ತದೆ.

ಇದೀಗ ಐವತ್ತೈದನ್ನು ದಾಟಿದ ಜಯಪ್ರಕಾಶರ ರೂಪ ಶಿಲ್ಪಿ ಕಡೆದು ಮಾಡಿದ ವಿಗ್ರಹದಂತೆ ಕಾಣಿಸುತ್ತದೆ. ಅವರ ಕಣ್ಣುಗಳಲ್ಲಿ ಯಾವುದೋ ವಿಷಣ್ಣ ರೇಖೆಯೊಂದು ಯಾವಾಗಲೂ ಇದೆ. ಆದರೆ ಅದರ ತಳದಲ್ಲಿ ಒಂದು ಜ್ವಾಲಾಮುಖಿ ಪುಟಿಯಲು ಅಣಿಯಾದಂತೆ ಹಣಿಕಿಕ್ಕುತ್ತಿರುತ್ತದೆ. "ಮಾಡಬೇಕಾದ್ದಕ್ಕೆ ತಡವೇಕೆ?" ಎಂಬ ಅಸಹನೆಯ ಭಾವ ಅದರಲ್ಲಿ ಅಡಕವಾ-ದಂತಿದೆ. ಹಿಂದೆಯೂ ಅದೇ ಇತ್ತು, ಈಗ್ಯೂ ಅದೇ. ಬ್ರಿಟಿಶರು ಹೋಗಬೇಕು ಎಂದೊಪ್ಪಿದ ಮೇಲೆ ಅವರನ್ನು ಹೊರಡಿಸಲು ತಡವೇಕೆ? ಎಂದು ಅವರು ಕ್ರಾಂತಿಕಾರಿ ಕೂಟಯುದ್ಧದ ನೇತೃವಾಗಿ ಹಿಂಸಾತ್ಮಕ ಚಳವಳಿ ನಡೆಸಿದರು. ಈಗ ಗಾಂಧೀವಾದವನ್ನು ಒಪ್ಪಿಕೊಂಡ ಮೇಲೆ "ಸರಕಾರವಿಲ್ಲದ, ಖಾಸಗಿ ಆಸ್ತಿಯಿಲ್ಲದ, ಸರ್ವೋದಯ—ಸಮಾಜವಾದಿ ಸಮಾಜ ನಮಗೆ ಬೇಕಾಗಿದ್ದರೆ ಅದಕ್ಕೆ ತಡವೇಕೆ? ಈಗಲೇ ನಾವು ಸ್ವತಃ ಆ ಧ್ಯೇಯವನ್ನು ಆಚರಣೆಗೆ ತರಬಾರದೇಕೆ?" ಎಂದು ಅವರು ಭೂದಾನ ಚಳವಳಿಗೆ ಜೀವನವನ್ನು ಅರ್ಪಿಸಿದರು.

ಕ್ರಾಂತಿಕಾರಿ ನಾಯಕರಾಗಿದ್ದವರಾದರೂ ಜಯಪ್ರಕಾಶರು ದೊಡ್ಡ ದೊಡ್ಡ ಸಭೆಗಳನ್ನು ದಂಗು ಬಡಿಸಬಲ್ಲ ವಾಗ್ಮಿಯಲ್ಲ. ಅವರ ಮಾತು ಮೆತ್ತಗೆ ಮತ್ತು ಮೆಲ್ಲಗೆ. ವಾದದಲ್ಲಿ ಅವರು ಎದುರಾಳಿಗಳನ್ನು ತಮ್ಮ ಸೌಜನ್ಯದಿಂದಲೇ ಸೆಳೆದುಕೊಳ್ಳುತ್ತಾರೆ. "ಭೂದಾನ ಚಳವಳಿಯಿಂದ, ಈಗಾಗಲೇ ತುಂಡಾಗಿರುವ ಹೊಲಗಳು ಇನ್ನಷ್ಟು ತುಂಡಾಗಿ ಒಕ್ಕಲುತನ ಲಾಭಹೀನವಾಗುವುದಿಲ್ಲವೆ?" ಎಂದು ಯಾರೋ ಕೇಳಿದಾಗ ಅವರು ಆ ಸಂಭವವನ್ನು ಪ್ರಾಂಜಲವಾಗಿ ಒಪ್ಪಿಕೊಂಡರು. ಆದರೆ ನಮ್ಮ ಹಳ್ಳಿಗರಿಗೆ ಇದು ಅರ್ಥವಾಗಿ ಅವರು ಈ ಸಮಸ್ಯೆ ಬಿಡಿಸುವಲ್ಲಿ ಸಹಕರಿಸುವರೆಂಬ ವಿಶ್ವಾಸ ಅವರಿಗಿದೆ

ಜಯಪ್ರಕಾಶ ನಾರಾಯಣರು ೧೯೦೨ ಅಕ್ಟೋಬರ ೧೧ ರಂದು ಬಿಹಾರದ ಸಿತಾಬಾಡಿಯಾ ಎಂಬ ಕುಗ್ರಾಮದಲ್ಲಿ ರೈತ ಕುಲದಲ್ಲಿ ಹುಟ್ಟಿದರು. ಅವರು ಟ್ರಾಂ ಗಾಡಿಯನ್ನು ಮೊದಲು ನೋಡಿದ್ದೇ ೧೯ನೇ ವಯಸ್ಸಿನಲ್ಲಿ. ಹಳ್ಳಿಗಾಡಿನಲ್ಲೇ ಹುಟ್ಟಿ ಬೆಳೆದ ಈ ತರುಣನಿಗೆ ವಿಶ್ವವಿದ್ಯಾಲಯದ ಅಭ್ಯಾಸಕ್ಕೆ ಛಾತ್ರವೇತನ ದೊರೆತರೂ ಅವರು ಅದನ್ನು ಕಡೆಗಣಿಸಿ ೧೯೨೧ರ ಅಸಹಕಾರ ಚಳವಳಿಯಲ್ಲಿ ಸೇರಿದರು. "ಮಹಾ ಆದರ್ಶದ ಬೆನ್ನೇರಿ ಗಗನದಲ್ಲಿ ಹಾರುವ ಆ ಪ್ರಾಥಮಿಕ ಅನುಭವದ ಸವಿ ನೆನಪು ವಾಸ್ತವತೆಯ ವಿಕಾರವಾದ ಸ್ವರೂಪವನ್ನು ಕಂಡರೂ ಎಂದೂ ಮನಸಿನಿಂದ ಅಳಿಯಲಾರದು" ಎನ್ನುತ್ತಾರವರು.

ಆಗಲೇ ವಿವಾಹವಾಗಿದ್ದ ಜಯಪ್ರಕಾಶರು ತಮ್ಮ ಅಸ್ವಸ್ಥ ಪತ್ನಿ ಪ್ರಭಾವತಿ ದೇವಿಯನ್ನು ಗಾಂಧೀಜಿಯ ಸಾಬರಮತಿ ಆಶ್ರಮದಲ್ಲಿ ಬಿಟ್ಟು ೧೯೨೨ ರಲ್ಲಿ ಅಮೇರಿಕಕ್ಕೆ ಉಚ್ಚ ವಿದ್ಯಾಭ್ಯಾಸ

ಕ್ಕಾಗಿ ತೆರಳಿದರು. ಈ ಸಾಧ್ವಿ ಗಾಂಧೀಜಿಯ ಪ್ರಭಾವಕ್ಕೊಳಗಾಗುತ್ತಿದ್ದಾಗ ಅತ್ತ ಜಯಪ್ರಕಾಶರು ಸಮಾಜವಾದಕ್ಕೆ ಮಾರುಹೋದರು ಜಯಪ್ರಕಾಶರ ಕ್ರಾಂತಿಕಾರಿ ಚಟುವಟಿಕೆಗಳ ಕಾಲದಲ್ಲಿ ಗಾಂಧೀಜಿಯ ಅಹಿಂಸಾ ಸಿದ್ಧಾಂತಕ್ಕೂ ಗಂಡನ ಕ್ರಾಂತಿಕಾರಿ ಸಿದ್ಧಾಂತಕೂ ನಡುವೆ ಸಿಕ್ಕು ಪ್ರಭಾವತಿ ದೇವಿ ತುಂಬ ಜರ್ಜರಿತರಾಗಬೇಕಾಯಿತು.

ಅಮೇರಿಕದಲ್ಲಿ ಎಂಟು ವರ್ಷ ಉಳಿದು ಐದು ವಿಶ್ವವಿದ್ಯಾಲಯಗಳಲ್ಲಿ ಗಣಿತ, ಭೌತ ಮತ್ತು ರಸಾಯನ ಶಾಸ್ತ್ರ, ಜೀವಶಾಸ್ತ್ರ, ಮಾನಸಶಾಸ್ತ್ರ, ಅರ್ಥಶಾಸ್ತ್ರ ಮತ್ತು ಸಮಾಜ ಶಾಸ್ತ್ರಗಳನ್ನು ಅಭ್ಯಸಿಸುತ್ತಿದ್ದಾಗ ಅವರು ಕಾಲೇಜು ಶಿಕ್ಷಣದ ವೆಚ್ಚಕ್ಕಾಗಿ ಹಣ ಸಂಪಾದಿಸಲು ಹೋಟೆಲ್ ಮಾಣಿ, ಪ್ಯಾಕರ್, ಮೆಕ್ಯಾನಿಕ್, ಮಾರಾಟಗಾರ ಮತ್ತು ಹೊಲಗೆಲಸದ ಆಳಾಗಿ ದುಡಿದರು.

ಜಯಪ್ರಕಾಶರು ಸಮಾಜವಾದಿಯಾದದ್ದು ವಿಸ್ಕೊಸಿನ್ ವಿಶ್ವವಿದ್ಯಾಲಯದಲ್ಲಿ. ಅಲ್ಲಿನ ಪ್ರೊಫೆಸರರೊಬ್ಬರು ಸಮಾಜವಾದಿಯಾಗಿದ್ದರು. ಅವರ ನೇತೃತ್ವದಲ್ಲಿ ಇವರು ಮಾರ್ಕ್ಸನ ಗ್ರಂಥಗಳನ್ನೆಲ್ಲ ಕುಡಿದರು. ಆಗಿನ್ನೂ ಕಮ್ಯುನಿಸ್ಟರಾಗಿದ್ದ ಎಂ. ಎನ್. ರಾಯರ ಬರವಣಿಗೆಗಳೂ ಅವರಿಗೆ ದೊರೆತವು. ಹೀಗೆ ಅರ್ಥಶಾಸ್ತ್ರದಲ್ಲಿ ಪ್ರಬಂಧ ಬರೆದು ಎಂ. ಎ. ಪದವಿ ದೊರಕಿಸಿ ೧೯೨೯ ರಲ್ಲಿ ಭಾರತಕ್ಕೆ ಮರಳಿದಾಗ ಅವರು ಮನಸಾ ಅಂತಾರಾಷ್ಟ್ರೀಯ ಕಮ್ಯುನಿಸ್ಟ್ ಚಳವಳಿಯ ಪುರಸ್ಕರ್ತರಾಗಿದ್ದರು.

ಅವರ ವಿದೇಶಿ ಪದವಿಯು ಅವರಿಗೆ ಉಚ್ಚ ನೌಕರಿಯನ್ನು ಕೊಡಿಸಬಹುದಾಗಿದ್ದರೂ ಅವರಿಗೆ ರಾಜಕಾರಣದಲ್ಲೇ ಆಸ್ಥೆಯಿದ್ದುದರಿಂದ ಕಾಂಗ್ರೆಸ್ಸಿನ ಕಾರ್ಮಿಕ ವಿಭಾಗದಲ್ಲಿ ಅವರನ್ನು ತೆಗೆದುಕೊಳ್ಳಲಾಯಿತು. ೧೯೩೨ರಲ್ಲಿ ಕೆಲ ಕಾಲ ಕಾಂಗ್ರೆಸ್ಸಿನ ತಾತ್ಕಾಲಿಕ ಪ್ರಧಾನ ಕಾರ್ಯದರ್ಶಿಯಾಗುವ ಯೋಗವೂ ಅವರಿಗೆ ಬಂತು. ಕಾಯದೆ ಭಂಗ ಚಳವಳಿಯಲ್ಲಿ ಅವರಿಗೆ ಒಂದು ವರ್ಷ ಶಿಕ್ಷೆಯಾಯಿತು.

ಸೆರೆಮನೆಯಲ್ಲಿ ಅವರಿಗೆ ಅಶೋಕ ಮೆಹತಾ, ಮಿನೂ ಮಸಾನಿ, ಎಂ. ಎಲ್. ದಾಂತವಾಲಾ ಮೊದಲಾದ ತರುಣ ತೀವ್ರಗಾಮಿಗಳ ಸಂಪರ್ಕ ಬಂತು. ಅವರೆಲ್ಲರೂ ಕಾಂಗ್ರೆಸ್ ನಾಯಕರ ಮಂದಗಾಮಿತ್ವವನ್ನು ನೋಡಿ ಕೆರಳಿದ್ದರು. ಈ ಕಾರಣದಿಂದಲೇ ೧೯೩೨ ರ ಆಂದೋಲನ ವ್ಯರ್ಥವಾಯಿತೆಂಬುದು ಅವರ ಸಿದ್ಧಾಂತವಾಗಿತ್ತು. ಕಾಂಗ್ರೆಸ್ಸನ್ನು ಹೆಚ್ಚು ತೀವ್ರಗಾಮಿಯಾಗಿಸುವಂತೆ ಒತ್ತಾಯ ತರುವ ಸಲುವಾಗಿ ಕಾಂಗ್ರೆಸ್ಸಿನೊಳಗೆ ಸಮಾಜವಾದಿ ಪಕ್ಷವನ್ನು ಸಂಘಟಿಸಲು ಅವರು ನಿರ್ಧರಿಸಿದರು. ಅವರ ಬಿಡುಗಡೆಯಾದೊಡನೆ ಆಚಾರ್ಯ ನರೇಂದ್ರ ದೇವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಸಮಾಜವಾದಿಗಳ ಪ್ರಥಮ ಅಧಿವೇಶನ ಪಾಟ್ನಾದಲ್ಲಿ ಸೇರಿತು.

೧೯೩೯ ರಲ್ಲಿ ಎರಡನೇ ಮಹಾಯುದ್ಧ ಪ್ರಾರಂಭವಾದಾಗ ಸ್ವರಾಜ್ಯವಿಲ್ಲದೆ ಯುದ್ಧ ಪ್ರಯತ್ನದಲ್ಲಿ ಸಹಕಾರವಿಲ್ಲ ಎಂದು ಘಂಟಾಘೋಷವಾಗಿ ಸಾರಿದವರಲ್ಲಿ ಜಯಪ್ರಕಾಶರು ಮೊದಲಿಗರಾಗಿದ್ದರು. ೧೯೩೯ರಲ್ಲೇ ಜಮಶೆಡಪುರದಲ್ಲಿ ಅವರಿತ್ತ ಭಾಷಣವೊಂದು ಯುದ್ಧಪ್ರಯತ್ನಕ್ಕೆ ವಿಘ್ನ ತರುವಂಥದೆಂದು ಅವರ ಬಂಧನವಾಯಿತು. "ನನ್ನ ಭಾಷಣದಿಂದ ಯುದ್ಧಪ್ರಯತ್ನಕ್ಕೆ ಸ್ವಲ್ಪವಾದರೂ ಆತಂಕವಾಗಿದ್ದರೆ ನಾನು ತುಂಬ ಧನ್ಯನಾದೆ. ಬೇಕಾದ ಶಿಕ್ಷೆ ವಿಧಿಸಿರಿ" ಎಂದರು ಜಯಪ್ರಕಾಶರು ನ್ಯಾಯಾಲಯದಲ್ಲಿ! ಶಿಕ್ಷೆಯಾಗಿ ರಜಪೂತ ಕೋಟೆಯಾದ ದೇವೋಲಿಯಲ್ಲಿ ಸೆರೆಯಲ್ಲಿದ್ದಾಗಲೂ ಅವರು ಬ್ರಿಟಿಶರಿಗೆ ಶಾಂತಿಯಿಂದಿರಗೊಡಲಿಲ್ಲ. ನೂರಾರು ಸೆರೆಯಾಳುಗಳ ಸಂಗಡ ೩೧ ದಿನಗಳ ಅನ್ನಸತ್ಯಾಗ್ರಹ ಮಾಡಿ ಸರಕಾರವನ್ನು ಮಣಿಸಿದರು. ಅದು ಅವರನ್ನು ರಾಷ್ಟ್ರವೀರನಾಗಿ ಮಾಡಿತು.

೧೯೪೨ರಲ್ಲಿ ಚಲೇ ಜಾವ್ ಚಳವಳಿ ಪ್ರಾರಂಭ

ವಾದಾಗ ಅವರಿನ್ನೂ ಬಿಹಾರದ ಹಜಾರಿಬಾಗ ಸೆರೆಮನೆಯಲ್ಲಿದ್ದರು. ಕಾಂಗ್ರೆಸ್ ನಾಯಕರ ಬಂಧನದ ನಂತರ ಚಳವಳಿಯು ಕ್ರಾಂತಿಕಾರಿ ಸ್ವರೂಪ ತಳೆದಾಗ ತಾವು ಹತ್ತು ವರ್ಷದಿಂದ ಬಯಸುತ್ತಿದ್ದ ಸಂದರ್ಭ ಬಂತೆಂದು ಅವರು ಉಬ್ಬಿದರು. ೧೯೪೨ರ ದೀಪಾವಳಿಯ ದಿನ ನೂರಾರು ಹಣತೆಗಳು ಉರಿಯುತ್ತಿದ್ದಾಗ ಜಯಪ್ರಕಾಶರು ದೋತರಗಳನ್ನು ಗಂಟುಹಾಕಿ ರಚಿಸಿದ ಏಣಿಯ ಮೂಲಕ ಸೆರೆಮನೆಯ ಆವಾರವನ್ನೇರಿ ಐವರು ಸಂಗಡಿಗರೊಡನೆ ಪಾರಾಗಿ ಹೋಗಿ ತಲೆಮರೆಸಿಕೊಂಡು ವಿಧ್ವಂಸಕ ಕ್ರಾಂತಿಯ ನೇತೃತ್ವ ವಹಿಸಿದರು. ಅವರನ್ನು ಹಿಡಿದುಕೊಟ್ಟವರಿಗೆ ಸರಕಾರ ರೂ. ೧೦,೦೦೦ ಬಹುಮಾನ ಸಾರಿತು. ಜಯಪ್ರಕಾಶರು ನೇಪಾ-ಲಕ್ಕೆ ಹೋಗಿ ಅಲ್ಲಿ ರಾಮಮನೋಹರ ಲೋಹಿ-ಯರೊಡನೆ ಆಜಾದ ದಸ್ತಾವನ್ನು ಸಂಘಟಿಸಿದರು. ಅಲ್ಲಿಯೂ ಬ್ರಿಟಿಶರು ಅವರನ್ನು ಬೆಂಬತ್ತಿ ಹಿಡಿದರು. ಆದರೆ ಪೋಲೀಸರು ಅವರನ್ನು ಸೆರೆಮನೆಗೆ ಸಾಗಿಸುತ್ತಿದ್ದಾಗ ಅವರ ಗುಪ್ತದಲವು ಒಮ್ಮೆಲೇ ದಾಳಿ ಮಾಡಿ ಅವರನ್ನು ಬಿಡಿಸಿಕೊಂಡು ಹೋಯಿತು. ಅನೇಕ ತಿಂಗಳುಗಳ ಕ್ರಾಂತಿಕಾರಿ ಚಳವಳಿಯ ನಂತರ ಅವರು ೧೯೪೩ ಸೆಪ್ಟೆಂಬರದಲ್ಲಿ ಪುನಃ ಬಂಧಿತರಾದರು. ಅವರನ್ನು ಲಾಹೋರ ಕೋಟೆಯ ಸೆರೆಮನೆಯಲ್ಲಿರಿಸಲಾಯಿತು. ಅನಂತರ ೧೯೪೬ ಎಪ್ರಿಲಿನಲ್ಲೇ ಅವರ ಬಿಡುಗಡೆಯಾದದ್ದು.

ಇಂಥ ಕ್ರಾಂತಿಕಾರಿ ಬೆಂಕಿ ನವಾಬ ಇಂದು ಗಾಂಧೀವಾದಿಯಾಗಿ ಭೂದಾನದಂಥ ಸಾಮ್ಯ ಚಳವಳಿಯ ನಾಯಕತ್ವ ವಹಿಸಿ ರಾಜಕಾರಣದಿಂದ ನಿವೃತ್ತನಾಗಿದ್ದಾನೆ. ಈ ಅಪೂರ್ವ ಪರಿವರ್ತನೆಗೆ ಕಾರಣವೇನಾಗಿರಬಹುದು ?

ಮೂವತ್ತು ವರ್ಷಗಳ ಬೌದ್ಧಿಕ ಮತ್ತು ರಾಜಕೀಯ ಜೀವನವು ಜಯಪ್ರಕಾಶರಿಗೆ ಹಲವು ಪಾಠಗಳನ್ನು ಕಲಿಸಿದೆ. ಪ್ರಾರಂಭದಿಂದಲೂ ಭಾರತೀಯ ಕಮ್ಯುನಿಸ್ಟರ ಪರದಾಸ್ಯ ಅವರಿಗೆ ಮನಸ್ಸಿಗೆ ಬಂದಿರಲಿಲ್ಲ. ಸ್ಟಾಲಿನ್ನನ ಅತ್ಯಾಚಾರಗಳು ಅವರ ಮನಸ್ಸಿನಲ್ಲಿ ಮಾರ್ಕ್ಸ್‌ವಾದದ ಬಗ್ಗೆ ಸಂದೇಹಗಳನ್ನು ಮೂಡಿಸಿದ್ದವು. ಹಿಂಸೆಯು ಕೆಲವೇಳೆ "ಪ್ರಗತಿಯ ಜನ್ಮದಲ್ಲಿ ಅನಿವಾರ್ಯ ಸೂಲಗಿತ್ತಿ" ಯಾಗಬೇಕಾಗುತ್ತದೆಂದು ಅವರು ನಂಬಿದ್ದರೂ ಆದರ್ಶವಾದಿಯಾದ ಅವರ ಅಂತ-ರಂಗ ಅನವಶ್ಯಕ ಹಿಂಸಾಚಾರಕ್ಕೆ ಹಿಂಜರಿಯುತ್ತಿತ್ತು. ರಶಿಯದಲ್ಲಿ ಸ್ಟಾಲಿನ್ನನ ಕ್ರೂರ ಸರ್ವಾಧಿಕಾರ ಏರ್ಪಡಲು ಅಲ್ಲಿ ಅಧಿಕಾರದ ಕೇಂದ್ರೀಕರಣಕ್ಕೆ ಆಸ್ಪದವಿತ್ತುದೇ ಕಾರಣವೆಂದು ಅವರು ಮನಗಂಡರು.

ಕ್ರಾಂತಿ ಅವರಿಗೆ ಬೇಕಾಗಿತ್ತು ಮತ್ತು ಇಂ-ದಿಗೂ ಬೇಕಾಗಿದೆ. ಆದರೆ ಸರ್ವಾಧಿಕಾರ ಅವರಿಗೆ ಒಪ್ಪಿಗೆಯಿಲ್ಲ. ಆದ್ದರಿಂದ ಶಾಂತಿಯಿಂದ ಪ್ರಜಾಸತ್ತಾತ್ಮಕವಾಗಿ ಸಾಮಾಜಿಕ ಬದಲಾವಣೆ ಸಾಧ್ಯವಿರುವಲ್ಲಿ ಹಿಂಸೆಯ ಉಪಯೋಗ ಮಾಡುವುದು ಪ್ರತಿಗಾಮಿ ಎಂಬ ಸಿದ್ಧಾಂತಕ್ಕೆ ಅವರು ಬಂದರು. ಆದರೆ ಪ್ರಜಾಸತ್ತಾತ್ಮಕ ಬದಲಾವಣೆ ಬಲು ಮಂದವಾದುದರಿಂದ ಅವರ ಕ್ರಾಂತಿಕಾರಿ ಆತ್ಮಕ್ಕೆ ಅಲ್ಲಿಯೂ ಸಮಾಧಾನ ಸಿಗಲಿಲ್ಲ.

ಈ ನಿಟ್ಟಿನಲ್ಲೇ ೧೯೫೧ ರಲ್ಲಿ ವಿನೋಬಾ ಅವರು ೫ ಕೋಟಿ ಎಕರೆ ಭೂಮಿಯನ್ನು ದರಿದ್ರನಾರಾಯಣನಿಗಾಗಿ ಸಂಗ್ರಹಿಸುವ ಭೂದಾನ ಚಳವಳಿಯನ್ನು ಪ್ರಾರಂಭಿಸಿದ್ದು. ಸರಕಾರದ ಹಂಗಿಲ್ಲದೆ, ಶ್ರೀಮಂತರ ಹೃದಯಪರಿವರ್ತನೆ ಮಾಡಿ, ಹಳ್ಳಿಯ ಬಡವನಲ್ಲಿ ನಿಜವಾದ ಸ್ವಾವಲಂಬನ ಪ್ರವೃತ್ತಿಯನ್ನುಂಟುಮಾಡುವ ಈ ಮಹಾ ಉದ್ಯಮವು ನಿಜವಾದ ಕ್ರಾಂತಿಕಾರಿ ಯೋಜನೆಯೆಂದು ಅವರಿಗೆ ತೋರಿತು. ೧೯೫೩ ರಲ್ಲಿ ಉತ್ತರ ಪ್ರದೇಶದಲ್ಲಿದ್ದ ವಿನೋಬಾಜಿಯನ್ನು ಭೆಟ್ಟಿಯಾಗಿ ಬಂದ ಮೇಲಂತೂ ಅವರಿಗೆ ಇದರ ಮನವರಿಕೆಯಾಯಿತು. ಕೆಲ ದಿನಗಳಲ್ಲಿ ಅವರು ಪುಣೆಯಲ್ಲಿ ಮೂರು ವಾರದ ಆತ್ಮ

ಶುದ್ಧಿಯ ಉಪವಾಸ ಮಾಡಿದರು. ಆಗಲೇ ಅವರು ಮಾರ್ಕ್ಸವಾದಕ್ಕೆ ತಿಲಾಂಜಲಿಯಿತ್ತದ್ದು. ನಿಜವಾದ ಸಾಮಾಜಿಕ ಕ್ರಾಂತಿಯು ಮಾನವನ ಮತ್ತು ಸಮಾಜದ ಅಂತರಂಗ ಪರಿವರ್ತನೆಯಿಂದ ಆಗಬೇಕಲ್ಲದೆ ಕಾಯದೆಯಿಂದಲ್ಲ; ಕೆಲ ಬುದ್ಧಿವಂತರ ನೇತೃತ್ವದಿಂದಲ್ಲ ಎಂಬ ಬೆಳಕನ್ನು ಅವರು ಕಂಡರು.

ಹೀಗೆ ಜಯಪ್ರಕಾಶರು ಇನ್ನೂ ಕ್ರಾಂತಿಕಾರಿಯಾಗಿಯೇ ಇದ್ದಾರೆ. ಗಾಂಧೀವಾದವು "ಕ್ರಾಂತಿಯನ್ನು ತರುವ ಅತ್ಯಂತ ವ್ಯಾವಹಾರಿಕ ತಂತ್ರ" ಎಂದೇ ಅವರು ಅದನ್ನೀಗ ಸ್ವೀಕರಿಸಿದ್ದಾರೆ.

ಜೀವನದಾನದ ದೀಕ್ಷೆ ತೆಗೆದುಕೊಂಡಾಗ ಜಯಪ್ರಕಾಶರು ರಾಜಕಾರಣದಿಂದ ಮುಕ್ತರಾಗುವುದಾಗಿ ಸಾರಿದ್ದರು. ಆದರೆ ನಿಜವಾಗಿ ಅವರು ರಾಜಕಾರಣದಿಂದ ಎಷ್ಟು ಅಲಿಪ್ತರಾಗಿ ಉಳಿದಿದ್ದಾರೆ? ಪ್ರಜಾಸಮಾಜವಾದಿ ಪಕ್ಷದ ಸ್ಥಾಪಕರಲ್ಲೊಬ್ಬರಾದ ಅವರು ಅದರ ಪ್ರತ್ಯಕ್ಷ ನೇತೃತ್ವದಿಂದ ನಿವೃತ್ತರಾಗಿದ್ದರೂ ಅದರ ಸಾಮಾನ್ಯ ಸದಸ್ಯರಾಗಿ ಇನ್ನೂ ಉಳಿದಿದ್ದಾರೆ. ನಡುನಡುವೆ ಅವರು ರಾಜಕೀಯ ಹೇಳಿಕೆಗಳನ್ನೂ ಹೊರಡಿಸಿದ್ದಾರೆ. ೧೯೫೫ರಲ್ಲಿ ಪಾಟಣಾ ವಿದ್ಯಾರ್ಥಿಗಳ ದಂಗೆಯನ್ನು ಸರಕಾರ ಬಲವಾಗಿ ಹತ್ತಿಕ್ಕಿದಾಗ ಅವರು ಅದನ್ನು ಖಂಡಿಸುವ ಹೇಳಿಕೆ ಹೊರಡಿಸಿದರು. ಹಂಗರಿಯಲ್ಲಿ ರಶಿಯ ವೆಸಗಿದ ಅತ್ಯಾಚಾರಗಳನ್ನು ಸ್ಪಷ್ಟವಾಗಿ ಖಂಡಿಸದಿದ್ದುದಕ್ಕೆ ಅವರು ನೆಹರೂ ಅವರನ್ನು ಟೀಕಿಸಿದ್ದಾರೆ. ಚುನಾವಣೆಗಳಲ್ಲಿ ಪ್ರಜಾಸಮಾಜವಾದಿಗಳು ಕಮ್ಯುನಿಸ್ಟರೊಡನೆ ಸಹಕರಿಸಬಹುದೆಂದು ಅವರಿತ್ತ ಹೇಳಿಕೆ ರಾಜಕೀಯ ಸ್ವರೂಪದ್ದಲ್ಲದೆ ಮತ್ತೇನು? ಭೂದಾನ ಪ್ರಚಾರಕ್ಕಾಗಿ ವಿದೇಶ ಪರ್ಯಟನಕ್ಕೆ ಹೊರಟಾಗ ಮತ್ತು ಅನಂತರ ಹೊರಡಿಸಿದ ಹೇಳಿಕೆಗಳು ಅವರು ಪುನಃ ರಾಜಕೀಯದಲ್ಲಿ ಸೇರುವ ಸಂಭವವನ್ನು ಸೂಚಿಸುತ್ತವೆ.

ನಿಜ ಕೇಳಿದರೆ, ಜಯಪ್ರಕಾಶರು ಗಾಂಧೀಜಿಯ ಹಾಗೆಯೇ ಬದಲಾವಣೆಗೆ ಹೆದರದ ನಾಯಕರು. ರಾಜಕಾರಣದಿಂದ ದೂರ ಇದ್ದರೂ ಅದರಿಂದ ಪೂರ್ತಿ ನಿರ್ಲಿಪ್ತರಾಗಿರುವುದು ಸಾಧ್ಯವಿಲ್ಲ ಎಂದವರು ಪ್ರಾಂಜಲವಾಗಿಯೆ ಒಪ್ಪುತ್ತಾರೆ. ಭೂದಾನ ಚಳವಳಿ ಬಯಸಿದಷ್ಟು ಯಶಸ್ವಿಯಾಗಿಲ್ಲೆಂದು ಅವರು ಕಾಣುತ್ತಿದ್ದಾರೆ. ಆದ್ದರಿಂದ ಅವರ ಕ್ರಾಂತಿಕಾರಿ ಆತ್ಮ ಪುನಃ ರಾಜಕಾರಣದತ್ತ ತಿರುಗಿದರೂ ತಿರುಗಬಹುದು. ಭೂದಾನ ಅಯಶಸ್ವಿಯಾಗುವ ಸಂಭವವನ್ನು ಅವರು ಅಲ್ಲಗಳೆಯುವುದಿಲ್ಲ. "ಹಾಗೆ ಆದರೂ ಆಗಬಹುದು. ನಾನು ಹೇಳಲಾರೆ. ಆದರೆ ಈ ಚಳವಳಿ ವ್ಯರ್ಥವಾದರೆ ಭಾರತದಲ್ಲಿ ಪ್ರಜಾಸತ್ತೆ ಭದ್ರವಾಗಿ ಉಳಿಯುವ ಸಂಭವ ತೀರ ಕಡಿಮೆಯೆಂದಿಷ್ಟೇ ಹೇಳುವೆ" ಎನ್ನುತ್ತಾರೆ ಅವರು.

ಆದರೆ ಜೀವನದಾನಿ ಜಯಪ್ರಕಾಶರು ರಾಜಕಾರಣಕ್ಕೆ ಮರಳುವುದನ್ನು ದೇಶ ಸ್ವಾಗತಿಸುವುದು ನಿಶ್ಚಯ. "ನೆಹರೂ ನಂತರ ಯಾರು?" ಎಂಬ ಪ್ರಶ್ನೆಗೆ ಅದೊಂದೇ ಸಮರ್ಪಕ ಉತ್ತರ ಎಂದು ಬಗೆಯುವವರಿದ್ದಾರೆ.

**ಇದ್ದದ್ದನ್ನು ಇದ್ದಂತೆ ಹೇಳಿದರೆ ನಿಮಗೆ ಸಿಟ್ಟು ಬರುವುದಿಲ್ಲೆಂದು ಜನರಿಗೆ ತಿಳಿಯುವಂತೆ ಮಾಡುವುದೊಂದೇ ಪರರ ಮುಖಸ್ತುತಿಯಿಂದ ಪಾರಾಗುವ ಉಪಾಯ. ಆದರೆ ಎಲ್ಲರೂ ನಿಮ್ಮ ಮುಂದೆ ಇದ್ದದ್ದನ್ನು ಇದ್ದಂತೆ ಹೇಳಬಹುದಾದರೆ ಬಳಿಕ ನಿಮ್ಮನ್ನು ಯಾರೂ ಗೌರವಿಸುವುದಿಲ್ಲ.**

**— ಮಕಿಯವೆಲಿ**

ಭಾರತದ ಪ್ರಮುಖ ಜನಸೇವಕರೊಬ್ಬರ ಆತ್ಮಕಥನ

# [illegible]

**ಕಾಕಾ ಕಾಲೇಲಕರ**

ನನ್ನ ಐವರು ಅಣ್ಣಂದಿರಲ್ಲಿ, ಅಣ್ಣಾ ಮಾತ್ರ ಬಿ. ಎ. ತರಗತಿಯ ಮೆಟ್ಟಲು ಹತ್ತಿದರು. ಉಳಿದವರೆಲ್ಲ ನಡುವೆಯೇ ಶಿಕ್ಷಣರಂಗದಿಂದ ಅತ್ತಿತ್ತ ಚದರಿ ಹೋಗಿದ್ದರು. ಇಂಗ್ಲೀಷ್ ಶಿಕ್ಷಣಕ್ಕಾಗಿ ತುಂಬ ಹಣ ವೆಚ್ಚಮಾಡಿದರೂ ಅವರಲ್ಲೊಬ್ಬನೂ ತಂದೆಯ ಇಚ್ಛೆಯನ್ನು ಪೂರ್ತಿಗೊಳಿಸಿರಲಿಲ್ಲ. ಇದರಿಂದ ಅವರ ಹೃದಯ ನೊಂದು ಭಗ್ನವಾಗಿತ್ತು. ನನ್ನ ವಿಷಯದಲ್ಲಿ ಮೊದಲಿನಿಂದಲೂ ಅವರು "ದತ್ತೂನನ್ನು ಕಾಲೇಜಿಗೆ ಕಳಿಸುವುದಿಲ್ಲ" ಎಂದು ನಿಶ್ಚಯಿಸಿಬಿಟ್ಟಿದ್ದರು. ಇದರಿಂದ ನಾನು ಮನದಲ್ಲೇ ಖತಿಗೊಂಡಿದ್ದೆ. ಅಪರಾಧ ಎರಡನೆಯವರದು, ಶಿಕ್ಷೆ ನನಗೆ! ಆದರೆ ನಾನು ಬಾಯಿಬಿಟ್ಟು ಏನೂ ಹೇಳಲಿಲ್ಲ.

ನಾನು ಮೊದಲನೆಯ ವರ್ಷವೇ ಮ್ಯಾಟ್ರಿಕ್ ಪಾಸಾದಾಗ ನನ್ನ ತೂಕ ಒಂದಿಷ್ಟು ಹೆಚ್ಚಿತು. ಅದೇ ವರ್ಷ ಶಾಲೆಯ ಮರ್ಯಾದೆಯ ರಕ್ಷಣೆಗಾಗಿ ಮ್ಯಾಟ್ರಿಕ್ ವರ್ಗದ ನಾವು ಮೂವರು ಹುಡುಗರು ವಿಶ್ವವಿದ್ಯಾಲಯದ ಸ್ಕೂಲ್ ಫಾಯನಲ್ ಪರೀಕ್ಷೆಗೆ ಕುಳಿತಿದ್ದೆವು. ಅದೇ ಆ ಪರೀಕ್ಷೆಯ ಕೊನೆಯ ವರ್ಷವಾಗಿತ್ತು. ಅನಂತರ ವಿಶ್ವವಿದ್ಯಾಲಯ ಆ ಪರೀಕ್ಷೆಯನ್ನು ನಿಲ್ಲಿಸಿ ಅದನ್ನು ಶಿಕ್ಷಣ ಶಾಖೆಗೆ ಒಪ್ಪಿಸಿತು. ಸ್ಕೂಲ್ ಫಾಯನಲ್ ಪರೀಕ್ಷೆಯಲ್ಲೂ ನಾನು ಮೇಲಿನ ನಂಬರು ಪಡೆದು ಪಾಸಾದೆ. ನನಗಿಂತ ಮೊದಲು ನಮ್ಮ ಮನೆಯಲ್ಲಿ ಯಾರೂ ಮೊದಲನೆಯ ವರ್ಷವೇ ಮ್ಯಾಟ್ರಿಕ್ ಪಾಸಾಗಿರಲಿಲ್ಲ. ನಾನು ಮಾತ್ರ ಮೊದಲನೆಯ ವರ್ಷವೇ ಎರಡೂ ಪರೀಕ್ಷೆಗಳನ್ನು ಪಾಸು ಮಾಡಿದ್ದೆ. ಆದರೆ ಅದರ ಪರಿಣಾಮ ತಂದೆಯ ಮೇಲೆ ಏನೂ ಆಗಲಿಲ್ಲ. ಅವರ ನಿರ್ಧಾರ ಕದಲಲಿಲ್ಲ.

ಕೊನೆಗೆ ನಾನು ತಂದೆಯೊಡನೆ ಹೇಳಿದೆ:—"ನನ್ನ ಇಂಗ್ಲೀಷ್ ಮತ್ತು ಗಣಿತ ಎರಡೂ ವಿಷಯ ಚೆನ್ನಾಗಿವೆಯೆಂದು ನೀವು ಬಲ್ಲಿರಿ. ನನಗೆ ಇಂಜನಿಯರಿಂಗ್ ಶಿಕ್ಷಣ ಪಡೆಯಲು ಅವಕಾಶ ಕೊಡಿರಿ. ಇಂಜನಿಯರಿಂಗ್ ಕಾಲೇಜಿನಲ್ಲಿ ಸೇರಿಕೊಳ್ಳಲು ಎಫ್. ಎ. ಪರೀಕ್ಷೆ ಪಾಸು ಮಾಡಲೇಬೇಕಾಗುತ್ತದೆ. ಆದ್ದರಿಂದ ಒಂದು ವರ್ಷದ ಮಟ್ಟಿಗೆ ನಾನು ಆರ್ಟ್ಸ್ ಕಾಲೇಜಿಗೆ ಹೋಗುತ್ತೇನೆ." ನನ್ನ ಈ ಯುಕ್ತಿಯಿಂದ ತಂದೆ ತುಸು ಮಿದುವಾದರು. ಕಾಲೇಜಿಗೆ ಹೋಗಲು ನನಗೆ ಅವರು ಅನುಮತಿಯಿತ್ತರು.

ಕಾಲೇಜನ್ನು ಸೇರಿಕೊಳ್ಳಲು ಪುಣೆಗೆ ಹೋಗಬೇಕಾಗಿತ್ತು. ನಾನು ಪುಣೆಗೆ ಹೋಗುವ ದಿನವೇ ತಂದೆಯವರು ಸಾಂಗಲಿ ಸಂಸ್ಥಾನದ ಟ್ರೆಝುರಿ

ಆಫೀಸರರ ಪರವಾಗಿ ಮೂರು ಲಕ್ಷ ರೂಪಾಯಿಗಳನ್ನು ತೆಗೆದುಕೊಂಡು ಪೋಲೀಸ್ ಕಾವಲಿನಲ್ಲಿ ಪುಣೆಗೆ ಹೊರಡತಕ್ಕವರಿದ್ದರು. ಪುಣೆಯಲ್ಲಿ ಅವರು ಸಾಂಗಲಿ ಸಂಸ್ಥಾನಕ್ಕಾಗಿ ಪ್ರಾಮಿಸರಿ ನೋಟುಗಳನ್ನು ಖರೀದಿ ಮಾಡಬೇಕಾಗಿತ್ತು.

ಸಾಂಗಲಿಯಿಂದ ಇಬ್ಬರೂ ಕೂಡಿಯೇ ಹೊರಟೆವು. ತಂದೆಯವರು ಪುಣೆಗೆ ಏತಕ್ಕಾಗಿ ಹೋಗುತ್ತಿರುವರೆಂದು ನನಗೆ ತಿಳಿಯುತ್ತಲೇ ನಾನು ತಂದೆಗೆ ಹೇಳಿದೆ: "ಪ್ರಾಮಿಸರಿ ನೋಟುಗಳ ಧಾರಣೆ ನಿತ್ಯವೂ ಬದಲಾಗುತ್ತಿರುತ್ತದೆ. ನಾವು ತುಸು ಪ್ರಯತ್ನಿಸಿದರೆ ಠೋಕಾಗಿ ತುಸು ಅಗ್ಗವಾಗಿ ನೋಟುಗಳನ್ನು ಖರೀದಿ ಮಾಡಬಹುದು. ಸಂಸ್ಥಾನಕ್ಕೆ ಚಿಲ್ಲರೆ ದರವನ್ನೆ ತಿಳಿಸಿ ನಡುವಿನ ಲಾಭವನ್ನು ನಾವಿಟ್ಟುಕೊಳ್ಳಬಹುದು. ಈ ವಿಷಯ ಯಾರಿಗೂ ಗೊತ್ತಾಗುವುದಿಲ್ಲ. ನಮಗೆ ಅನಾಯಾಸವಾಗಿ ತುಂಬ ಲಾಭವಾಗುವುದು."

ತಂದೆ ನನ್ನ ಮಾತನ್ನು ಶಾಂತಚಿತ್ತದಿಂದ ಕೇಳಿಕೊಂಡರು ಎಂದು ನನಗನಿಸಿತು. ಆದರೆ ನನ್ನ ಮಾತುಗಳಿಂದ ಅವರ ಹೃದಯಕ್ಕೆ ಎಂಥ ಪೆಟ್ಟು ಬಿತ್ತೆಂಬ ಕಲ್ಪನೆ ಕೂಡ ಆಗ ನನಗಾಗಲಿಲ್ಲ. ನನ್ನ ಸೂಚನೆಯನ್ನು ಹೇಗೆ ಕಾರ್ಯಗತ ಮಾಡಬೇಕು ಎಂದು ಅವರು ವಿಚಾರಮಾಡುತ್ತಿದ್ದಾರೆಂದೇ ನಾನು ಬಗೆದೆ.

ತುಸು ಹೊತ್ತಿನ ನಂತರ ತಂದೆಯವರು ತುಂಬಿದ ಕಂಠದಿಂದ ಹೇಳಿದರು: "ದತ್ತೂ, ನಿನ್ನಲ್ಲಿ ಇಷ್ಟೊಂದು ಕ್ಷುಲ್ಲಕತನವಿದೆಯೆಂದು ನಾನು ತಿಳಿದಿರಲಿಲ್ಲ. ನನ್ನ ಅನ್ನದಾತನಿಗೆ ನಾನು ಮೋಸಮಾಡಬೇಕೆಂದು ನಿನ್ನ ಮಾತಿನ ಅರ್ಥವಲ್ಲವೆ? ನಿನ್ನ ಶಿಕ್ಷಣಕ್ಕೆ ಧಿಕ್ಕಾರವಿರಲಿ. ನಮ್ಮ ಕುಲದೇವತೆ ಕೊಟ್ಟ ಅನ್ನದಲ್ಲೇ ನಾವು ಸಂತೋಷಪಟ್ಟುಕೊಳ್ಳಬೇಕು. ಲಕ್ಷ್ಮಿ ಇಂದಿದ್ದರೆ ನಾಳೆ ಇರುವುದಿಲ್ಲ. ಕೊನೆಯ ವರೆಗೂ ಮಾನವಂತ ಜೀವನವನ್ನು ನಡೆಸುವುದೇ ದೊಡ್ಡ ಮಾತು. ಸತ್ತ ಬಳಿಕ ಈಶ್ವರನ ಸಮ್ಮುಖದಲ್ಲಿ ನಿಂತಾಗ ಏನು ಉತ್ತರ ಕೊಡಲಿ? ನೀನು ಕಾಲೇಜಿಗೆ ಹೋಗುತ್ತಿರುವಿ. ಅಲ್ಲಿ ನೀನು ಓದಿ ಬರೆದು ಇಂಥದನ್ನೇ ಮಾಡುವಿಯಾ? ಅದಕ್ಕಿಂತಲೂ ಇಲ್ಲಿಂದಲೇ ಮನೆಗೆ ತಿರುಗಿ ಹೋದರೆ ಕೆಡುಕೇನು?"

ನಾನು ಅವಾಕ್ಕಾದೆ. ರಾತ್ರಿಯಿಡೀ ಗಾಡಿಯಲ್ಲಿ ನನಗೆ ನಿದ್ದೆ ಬರಲಿಲ್ಲ. ಮುಂಜಾನೆ ಪುಣೆ ತಲುಪುವ ಮೊದಲು ನಾನು "ಅನ್ಯಾಯದ ಹಣದ ಲೋಭವನ್ನು ಎಂದಿಗೂ ಇಟ್ಟುಕೊಳ್ಳುವುದಿಲ್ಲ. ತಂದೆಯ ಹೆಸರಿಗೆ ಕಲಂಕ ತಗಲಿಸುವುದಿಲ್ಲ" ಎಂದು ನಿಶ್ಚಯ ಮಾಡಿದೆ.

ತಂದೆಯನ್ನು ನಗರದಲ್ಲಿ ಬಿಟ್ಟು ಈ ನಿಶ್ಚಯದೊಂದಿಗೆ ಕಾಲೇಜಿಗೆ ಹೋದೆ. ಆದರೆ ಕಾಲೇಜಿನ ನಿಜವಾದ ಶಿಕ್ಷಣವು ನನಗೆ ಸಾಂಗಲಿ ಮತ್ತು ಪುಣೆಗಳ ನಡುವೆ ರೇಲ್ವೆ ಗಾಡಿಯಲ್ಲಿ ಸಿಕ್ಕಿತು.

"ನವಜೀವನ ಟ್ರಸ್ಟ್" ಕೃಪೆಯಿಂದ



ನೀತಿ ಪಂಡಿತರು ತೆಗಳಲಿ ಹೊಗಳಲಿ,
ಸಿರಿ ಬಂದರೆ ಬರಲಿಲ್ಲವೆ ತೊಲಗಲಿ,
ಇಂದೇ ಸಾಯಲಿ ಯುಗಯುಗ ಬಾಳಲಿ,
ನ್ಯಾಯದ ದಾರಿಯ ಧೀರರು ಬಿಡರು.

—ಭರ್ತೃಹರಿ

# ಅಪರಿಚಿತ ಭಾರತ-

# ಅಂದಮಾನ

ನಿರ್ಮಲಾ ಪೇಂಢರಕರ

ಮೈಲಿ ರೋಗದ ಪಿಡುಗು ಹಬ್ಬಿರದಿದ್ದರೂ ಮೈಲಿ ಚುಚ್ಚಿಸಿಕೊಂಡು ಯಾವುದೋ ಒಂದು ಫಾರ್ಮಿನಲ್ಲಿ ವಿವರಗಳನ್ನು ತುಂಬುತ್ತ ಕುಳಿತಿದ್ದ ನನ್ನನ್ನು ಕಂಡು ಲೀಲಾತಾಯಿ, "ಏನು, ವಿದೇಶ ಪ್ರವಾಸಕ್ಕೆ ಹೊರಡುತ್ತೀರೇನು?" ಎಂದು ಕೇಳಿದರು. "ಪರದೇಶ ಗಮನ ಎಂದೇನೂ ಹೇಳಲಾರೆ. ಆದರೆ ಸಮುದ್ರ ಪರ್ಯಟನ ಮಾಡುವ ವಿಚಾರ ಮಾತ್ರ ಇದೆ" ಎಂದು ಉತ್ತರವಿತ್ತು ಬಹಳ ಹೊತ್ತು ಅವರ ಕುತೂಹಲವನ್ನು ತಡೆಯದೆ ನಾನು, "ಒಂದೆರಡು ತಿಂಗಳ ಮಟ್ಟಿಗೆ ಅಂದಮಾನಕ್ಕೆ ಹೋಗಿ ಬರಲಿದ್ದೇನೆ" ಎಂದೆ. ಅಂದಮಾನ ಭಾರತದ್ದೇ ಪ್ರದೇಶವಾಗಿದ್ದರೂ ಅಲ್ಲಿಗೆ ಹೋಗಬೇಕಾದರೆ ಮೈಲಿ, ಕಾಲರಾ ಮೊದಲಾದವುಗಳ ಮದ್ದನ್ನು ಚುಚ್ಚಿಸಿಕೊಳ್ಳಬೇಕಾಗುತ್ತದೆ.

"ಆಂ! ಕಾಳಾಪಾಣಿಗೆ ಹೋಗುವಂಥ ಅಪರಾಧವನ್ನಾದರೂ ಏನು ಮಾಡಿದ್ದೀರಿ ನೀವು!" ಎಂದು ಅರ್ಧ ಚೇಷ್ಟೆ, ಅರ್ಧ ಗಂಭೀರ ಸ್ವರದಲ್ಲಿ ಲೀಲಾತಾಯಿ ಪ್ರಶ್ನೆ ಕೇಳಿದಾಗ ನನ್ನ ಮನಸ್ಸಿನಲ್ಲಿ ತುಸು ಗೊಂದಲವೆದ್ದಿತು. ನನ್ನ ಯಜಮಾನರು ವಿಮಾನಗಳಿಗೆ ಬೇಕಾಗುವ ವಾಯರಲೆಸ್ ಯಂತ್ರದ ಸ್ಥಾಪನೆಗಾಗಿ ಅಂದಮಾನಕ್ಕೆ ಹೋಗಲಿದ್ದರು. "ಕಾಳಾಪಾಣಿ" ಸ್ಥಳವನ್ನು ನೋಡುವ ಚಾಪಲ್ಯದಿಂದ ನಾನೂ ಬರುತ್ತೇನೆಂದು ಹಟ ಹಿಡಿದಿದ್ದೆ.

ಅಂದಮಾನಕ್ಕೆ ಹೋಗುವ ಮೊದಲು ಮತ್ತು ಅಲ್ಲಿಂದ ಬಂದ ಬಳಿಕ ನನಗೆ ಪ್ರಾಮುಖ್ಯವಾಗಿ ಅನಿಸಿದ ಮಾತೆಂದರೆ ಅಂದಮಾನದ ಬಗ್ಗೆ ಜನಸಾಮಾನ್ಯರಲ್ಲಿರುವ ಅಜ್ಞಾನ. ಭಾರತದ ಪೂರ ದಿಕ್ಕಿನಲ್ಲಿ ಸುಮಾರು ೬೦೦ ಮೈಲು ಅಂತರದಲ್ಲಿ ಬಂಗಾಲ ಉಪಸಾಗರದಲ್ಲಿರುವ ಈ ದ್ವೀಪಗಳ ಅರಿವು ನಮಗೆ ನಕಾಶೆಯಲ್ಲಿ ಕಾಣುವ ಚಿಹ್ನಗಳ ರೂಪದಲ್ಲಿ ಮಾತ್ರ ಇರುತ್ತದೆ. ರಾಜಕೀಯವಾಗಿ ಭಾರತದ ಅಂಗವಾಗಿದ್ದರೂ ನಿಸರ್ಗವು ಅದನ್ನು ಭಾರತದಿಂದ ತೀರ ಅಲಿಪ್ತವಾಗಿಟ್ಟಿರುವುದರಿಂದ ಅದರ ಬಗ್ಗೆ ಮಾಹಿತಿಯೇನೂ ನಮಗೆ ಇರದಂತಾಗಿದೆ. ಸ್ವಾತಂತ್ರ್ಯಪೂರ್ವ ಕಾಲದಲ್ಲಿ ಅಂದಮಾನಕ್ಕೆ ಹೋಗುವವರು ಕೇವಲ ಆಜೀವ ಅಥವಾ ಅಂಥದೇ ಕಠಿಣ ಶಿಕ್ಷೆಯಾದ ಅಪರಾಧಿಗಳು ಮಾತ್ರ ಆಗಿದ್ದರು. ಅದರಿಂದ ಅಂದಮಾನದ ಬಗ್ಗೆ ಜನರಲ್ಲಿ ಒಂದು ಬಗೆಯ ಭೀತಿಯಿದ್ದುದಾದರೆ ಅದು ಸ್ವಾಭಾವಿಕವೇ ಸರಿ. ಬ್ಯಾರಿಸ್ಟರ

"ಸ್ತ್ರೀ" ಮಾಸಿಕದಿಂದ

ಅಂದಮಾನ ಮತ್ತು ನಿಕೋಬಾರ ದ್ವೀಪಗಳು ಭಾರತಕ್ಕೆ ಸೇರಿದ ದ್ವೀಪಸ್ತೋಮಗಳಲ್ಲೆಲ್ಲ ವಿಸ್ತಾರವಾದವು. ಬಂಗಾಲ ಉಪಸಾಗರದಲ್ಲಿ ಬರ್ಮಾ ಮತ್ತು ಸುಮಾತ್ರಗಳ ನಡುವೆ ಹಬ್ಬಿರುವ ಈ ೨೦೪ ದ್ವೀಪಗಳ ಶ್ರೇಣಿಯು ಭೂಮಧ್ಯ ರೇಖೆಯ ಸಮೀಪದಲ್ಲಿದ್ದರೂ ಸುತ್ತಲ ಸಮುದ್ರದ ಪ್ರಭಾವದಿಂದ ಸಮಶೀತೋಷ್ಣ ಹವಾಮಾನದಿಂದ ಕೂಡಿದೆ. ಮಳೆಯು ಸರಾಸರಿ ೧೨೩ ಇಂಚು.

ಈ ದ್ವೀಪಸ್ತೋಮದೊಡನೆ ಭಾರತದ ಸಂಪರ್ಕ ಅನೇಕ ಶತಮಾನಗಳ ಹಿಂದಿನದು. ಎರಡನೇ ರಾಜೇಂದ್ರ ಚೋಳನು ನಿಕೋಬಾರ ದ್ವೀಪಗಳನ್ನು ಗೆದ್ದಿದ್ದನೆಂಬುದಕ್ಕೆ ಸಾಕಷ್ಟು ಪ್ರಮಾಣಗಳಿವೆ. ಅಲ್ಲಿನ ಒಂದು ಚಿಕ್ಕ ನದಿಗೆ "ಗಂಗಾ" ಎಂದೂ ಒಂದು ಊರಿಗೆ "ಲಕ್ಷ್ಮಿ" ಎಂದೂ ಹೆಸರಿರುವುದು ಭಾರತದ ಪ್ರಾಚೀನ ಪ್ರಭಾವಕ್ಕೆ ಸಾಕ್ಷಿಯಾಗಿದೆ.

ಬ್ರಿಟಿಶರು ಇವನ್ನು ಗೆದ್ದುಕೊಂಡ ಮೇಲೆ ೧೮೫೭ ರ ಸ್ವಾತಂತ್ರ್ಯ ಸಮರದಲ್ಲಿ ಭಾಗವಹಿಸಿದವರನ್ನು ಇಲ್ಲಿಗೆ ಗಡಿಪಾರು ಮಾಡಿದರು. ೧೯೨೧ ರ ಮಾಪಿಳ್ಳೆ ದಂಗೆಯ ಸೆರೆಯಾಳುಗಳನ್ನೂ ಇಲ್ಲಿಗೆ ತರಲಾಯಿತು. ಇದಲ್ಲದೆ ದೀರ್ಘ ಶಿಕ್ಷೆಯಾದ ಕ್ರಿಮಿನಲ್ ಕೈದಿಗಳೂ ಇಲ್ಲಿಗೆ ಸಾಗಿಸಲ್ಪಡುತ್ತಿದ್ದುದರಿಂದ ಭಾರತದಲ್ಲಿ ಅಂದಮಾನದ ವಿಷಯದಲ್ಲಿ ಕಹಿ ನೆನಪುಗಳೇ ಉಳಿದಿವೆ.

೧೯೪೨ ರಲ್ಲಿ ಜಪಾನೀಯರು ಇವುಗಳನ್ನು ಆಕ್ರಮಿಸಿದ ಮೇಲೆ ಇಲ್ಲಿನ ಜೀವನ ಅಸ್ತವ್ಯಸ್ತವಾಯಿತು. ೧೯೪೫ ರಲ್ಲಿ ಪುನಃ ಬ್ರಿಟಿಶರು ಇಲ್ಲಿ ಬಂದಿಳಿದರು.

ಒಟ್ಟು ೨,೫೦೮ ಚದರ ಮೈಲು ವಿಸ್ತೀರ್ಣವುಳ್ಳ ಈ ದ್ವೀಪಗಳಲ್ಲಿ ೧,೫೦೦ ಚದರ ಮೈಲುಗಳಲ್ಲಿ ಹಬ್ಬಿರುವ ಅರಣ್ಯಗಳು ಭಾರತಕ್ಕೊಂದು ಬಂಗಾರದ ಗಣಿಯಂತಿವೆ. ಏಶಿಯದಲ್ಲೆಲ್ಲ ದೊಡ್ಡದೆನಿಸಿದ ಮರ ಸಿಗಿಯುವ ಕಾರಖಾನೆ ಇಲ್ಲಿದ್ದು ಇಲ್ಲಿನ ಅರಣ್ಯ ಸಂಪತ್ತನ್ನು ಉಪಯೋಗಕ್ಕೆ ತರುವ ಕಾರ್ಯಕ್ಕಾಗಿಯೇ ೬೮೦೦ ಜನರನ್ನು ನೇಮಿಸಿಕೊಳ್ಳಲಾಗಿದೆ. ೧೯೫೬ ರಲ್ಲಿ ಇಲ್ಲಿಂದ ೪೬,೦೦೦ ಟನ್ ನಾಟುಗಳನ್ನು ನಿರ್ಯಾತ ಮಾಡಲಾಯಿತು.

೪೦,೦೦೦ ಕ್ಕಿಂತ ಹೆಚ್ಚಿಲ್ಲದ ಜನಸಂಖ್ಯೆಯುಳ್ಳ ಈ ದ್ವೀಪಸ್ತೋಮಗಳಿಗಾಗಿ ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ೬.೦೫ ಕೋಟಿ ರೂಪಾಯಿಯ ವ್ಯವಸ್ಥೆ ಮಾಡಲಾಗಿದೆ. ೧,೦೦೦ ಎಕರೆ ಭೂಮಿಯಲ್ಲಿ ಬೇಸಾಯ ನಡೆದಿದ್ದು ಧಾನ್ಯಗಳಲ್ಲದೆ ಕಾಫಿ, ಗೋಡಂಬಿ, ರಬ್ಬರುಗಳೂ ಬೆಳೆಯುತ್ತಿವೆ. ಸಾವಿರಾರು ಎಕರೆ ಅರಣ್ಯವನ್ನು ಕಡಿದು ವಲಸೆಗಾರರಿಗೆ ಬೇಸಾಯಕ್ಕಾಗಿ ಸ್ಥಳ ಮಾಡಿ ಕೊಡಲಾಗುತ್ತಿದೆ.

ಸಾವರಕರರಿಗೆ "ಕಾಳಾಪಾಣಿ" ಶಿಕ್ಷೆಯಾಗಿ ಅವರು ಅಂದಮಾನಕ್ಕೆ ಕಳಿಸಲ್ಪಟ್ಟಾಗ ಅದರ ಬಗ್ಗೆ ಒಂದಿಷ್ಟು ಜಿಜ್ಞಾಸೆ ಕೆರಳಿತು. ಈಗ ಅಂದಮಾನಕ್ಕೆ ಕೈದಿಗಳನ್ನು ಕಳಿಸುವ ಸಂಪ್ರದಾಯ ನಿಂತಿದ್ದರೂ ಸಾವರಕರರು ಮಾಡಿರುವ ಅಲ್ಲಿಯ ಜೇಲುವಾಸದ ವರ್ಣನೆಯ ಪ್ರಭಾವ ಎಷ್ಟಿದೆಯೆಂದರೆ ಅಂದಮಾನವೆಂದರೆ ಜೇಲುವಾಸ, ಮನುಷ್ಯ ವಸತಿಗೆ ಅನರ್ಹವಾದ ಪ್ರದೇಶ ಎಂಬ

ಭಾವನೆ ಮನಸ್ಸಿನಲ್ಲಿ ಮೂಡುವದು.

ತೀರ ಇತ್ತೀಚಿನ ವರೆಗೆ ಅಂದಮಾನಕ್ಕೆ ಹೋಗಲು ಜಲಮಾರ್ಗವೊಂದೇ ಮಾರ್ಗವಾಗಿತ್ತು. ಮೂರು ವಾರಗಳಿಗೊಮ್ಮೆ ಒಂದು ಹಡಗು ಕಲಕತ್ತೆಯಿಂದ ಪ್ರವಾಸಿಕರನ್ನೂ ಸಾಮಾನುಗಳನ್ನೂ ಹೇರಿಕೊಂಡು ಹೊರಟು ನಾಲ್ಕನೆಯ ದಿನ ಪೋರ್ಟ ಬ್ಲೇಅರನ್ನು ತಲುಪುತ್ತದೆ ಅಲ್ಲಿ ಎರಡು ಮೂರು ದಿನ ತಂಗಿ ಅದೇ ಹಡಗ ಮುಂದೆ ಮದ್ರಾಸಿಗೆ ಹೋಗುತ್ತದೆ. ಅಲ್ಲಿಂದ ಪೋರ್ಟ ಬ್ಲೇಅರ ಮಾರ್ಗವಾಗಿಯೇ ಕಲಕತ್ತೆಗೆ ಹಿಂತಿರುಗುತ್ತದೆ. ಈ ಹಡಗವೊಂದೇ ಮಾತೃಭೂಮಿ ಮತ್ತು ಅಂದಮಾನ-ನಿಕೋಬಾರ ನಡುಗಡ್ಡೆಗಳನ್ನು ಜೋಡಿಸುವ ಎಳೆಯೆನ್ನಬಹುದು.

ಈ ಹಡಗ ಬರುವ ಮೊದಲು ಮತ್ತು ಬಂದು ಹೋದ ವೇಲೆ ಅಂದಮಾನದಲ್ಲಿನ ಸದಾ ಶಾಂತ ಮತ್ತು ನೀರಸ ಜೀವನದಲ್ಲಿ ಕೆಲ ಕಾಲ ಉತ್ಸಾಹ ಮತ್ತು ಗಲಬಲಿ ತಲೆದೋರುತ್ತದೆ. ಅದು ಸಹಜವೇ ಆಗಿದೆ. ಈ ಹಡಗ ಆ ಜನರಿಗೆ ಏನೇನನ್ನೆಲ್ಲ ತಂದು ಕೊಡುವುದಿಲ್ಲವೇ? ದಿನಕ್ಕೆ ಎರಡು ಮೂರು ಸಲ ಟಪಾಲು ದೊರೆಯುವವರಿಗೆ ಮೂರು ವಾರಗಳಿಗೊಮ್ಮೆ ಒಂದು ಸಲ ಪತ್ರ ಸಿಗುವವರಿಗೆ ಆಗುವ ಆನಂದದ ಕಲ್ಪನೆ ಹೇಗಾಗಬೇಕು? ಹಡಗು ಬರುವ ದಿನ ಅಂದಮಾನದ ಜನರಲ್ಲಿ ಉಕ್ಕುವ ಆತುರವನ್ನು ವರ್ಣಿಸಲಾಸಲ್ಲ. ಭಾರತದಲ್ಲಿ ಕಲಿಯುತ್ತಿರುವ ಮಕ್ಕಳ ಆಗಮನವನ್ನು ಎದುರು ನೋಡುವ ತಂದೆ-ತಾಯಿಗಳಿರುವಂತೆ ರಜೆ ಪಡೆದುಕೊಂಡು ಭಾರತಕ್ಕೆ ಹೋಗುವವರೂ ಇರುತ್ತಾರೆ. ನೀರುಳ್ಳಿ, ಬಟಾಟೆಗಳನ್ನು ಮೊದಲ್ಗೊಂಡು ನಿತ್ಯಜೀವನಕ್ಕೆ ಬೇಕಾಗುವ ಬಹುತರ ವಸ್ತುಗಳು ಈ ಹಡಗದಿಂದಲೇ ಅವರಿಗೆ ದೊರೆಯಬೇಕು.

ನಾವು ಪ್ರವಾಸ ಮಾಡಿದ ಹಡಗ ತೀರ ಹಳೆಯದು. ಹಿಂದೆ ಈ ಹಡಗದಲ್ಲಿಯೇ ಕೈದಿಗಳನ್ನು ಅಂದಮಾನಕ್ಕೊಯ್ಯುತ್ತಿದ್ದರು, ಸ್ವಾತಂತ್ರ್ಯವೀರ ಸಾವರಕರರನ್ನು ಇದೇ ಹಡಗದಲ್ಲಿ ಕರೆದೊಯ್ದಿದ್ದರು ಎಂದು ತಿಳಿದಾಗ ಅದನ್ನು ಕುರಿತು ನನ್ನ ಮನಸ್ಸಿನಲ್ಲಿ ಏನೋ ಒಂದು ತರಹದ ಭಾವನೆಯುದಯಿಸಿತು. ಅವರನ್ನೆಲ್ಲಿಟ್ಟಿದ್ದಿರಬಹುದು



ಮಾನಕ್ಕೂ ಸ್ವರಾಜ್ಯ ಕಾಲದ ಇಂದಿನ ಅಂದಮಾನಕ್ಕೂ ಇರುವ ಭೇದವನ್ನು ಸ್ಪಷ್ಟವಾಗಿ ಸೂಚಿಸಿದ ಈ ಪ್ರಸಂಗ ನನಗಂತೂ ಅತ್ಯಂತ ಬೋಧಪ್ರದವಾಯಿತು.

ಸಮುದ್ರ ಪ್ರವಾಸದ ಮೂರೇ ದಿನಗಳಲ್ಲಿ ಎಂದು ದಡವನ್ನು ಕಂಡೇವೋ ಎಂದೆನಿಸಿ ಹೋಯಿತು. ನಾಲ್ಕನೆಯ ದಿನ ಎಲ್ಲರೂ ದುರ್ಬೀನು ಮೂಲಕ ಪೋರ್ಟ್ ಬ್ಲೇಅರದ ದಂಡೆಯನ್ನು ನಿರುಕಿಸುವುದರಲ್ಲಿ ಮಗ್ನರಾಗಿದ್ದರು. ದೂರದಲ್ಲಿ ನಡುಗಡ್ಡೆ ಕಾಣಿಸಿದೊಡನೆ ನಾನು ಬೇರೆಯೇ ಒಂದು ಆಶೆಯಿಂದ ಸಮುದ್ರದ ನಿರೀಕ್ಷಣೆ ಮಾಡತೊಡಗಿದೆ. "ಕಾಳಾಪಾಣಿ" ಎನ್ನುತ್ತಾರಲ್ಲ, ಅದಕ್ಕೇನಾದರೂ ಕಾರಣವಿರಬೇಕೆಂದುಕೊಂಡು ನಾನು ನೀರಿನ ಬಣ್ಣವನ್ನು ಪರೀಕ್ಷಿಸತೊಡಗಿದೆ. ಆದರೆ ನೀರು ಅತಿಶಯ ಸ್ವಚ್ಛವಾಗಿಯೂ ನೀಲವರ್ಣದ್ದಾಗಿಯೂ ಇತ್ತು.

ಈಗ ದಂಡೆ ಸ್ಪಷ್ಟವಾಗಿ ಕಾಣಿಸತೊಡಗಿತು. ದಂಡೆಯಲ್ಲಿ ಬಹಳಷ್ಟು ಸ್ತ್ರೀ-ಪುರುಷರು ನೆರೆದಿರುವುದನ್ನು ಕಂಡೆ. ನನಗೆ ಅದರಿಂದ ಸೋಜಿಗವೆನಿಸಿದರೂ ನನ್ನ ಪಕ್ಕದಲ್ಲಿದ್ದ ಗೃಹಸ್ಥರಿಗೆ,ಅವರು ಅಂದಮಾನದ ನಿವಾಸಿಗಳೇ ಆಗಿದ್ದುದರಿಂದ, ಏನೂ ಆಶ್ಚರ್ಯವೆನಿಸಲಿಲ್ಲ. ಹಡಗದಿಂದ ತಮ್ಮವರಾರಾದರೂ ಬರುವವರಿರಲಿ, ಬಿಡಲಿ, ಹಡಗು ಬರುವ ದಿನವನ್ನು ಈ ಜನರು ತುಂಬ ಆತುರದಿಂದ ನಿರೀಕ್ಷಿಸುವರೆಂದೂ ಅದು ಬರುವ ದಿನ ಪ್ರತಿಯೊಬ್ಬರೂ ಬಂದರದಲ್ಲಿ ಬಂದು ನಿಲ್ಲುವರೆಂದೂ ಅವರು ಹೇಳಿದರು ಪೋರ್ಟ್ ಬ್ಲೇಅರಿನಲ್ಲಿ ಪ್ರಕಟವಾಗುವ ಒಂದು ಪುಟದ ಪತ್ರಿಕೆಯಲ್ಲಿ ಹಡಗದಲ್ಲಿ ಬರುವ ಮೊದಲನೆ ಮತ್ತು ಎರಡನೆ ವರ್ಗದ ಪ್ರವಾಸಿಗಳ ಹೆಸರುಗಳು ಕೂಡ ಪ್ರಕಟವಾಗಿರುತ್ತವೆ!



ಮೂಲ ನಿವಾಸಿಗಳು

ಎಂದು ಉತ್ಸುಕತೆಯಿಂದ ನಾನು ಹಡಗದ ಕೆಳ ಅಂತಸ್ತಿಗೆ ಹೋದೆ. ಅಲ್ಲಿದ್ದ ಕಬ್ಬಿಣದ ಸಲಾಕೆಗಳ ಪಂಜರವನ್ನು ಕಂಡಾಗ ಅದೇ ಸಾವರಕರರ ಜಾಗ ಎಂದು ತಿಳಿಯಲು ತಡವಾಗಲಿಲ್ಲ. ಈ ಚಿಕ್ಕ ಪಂಜರದಲ್ಲಿ ಅನೇಕಾನೇಕ ಕೈದಿಗಳನ್ನು ತುಂಬಿದಾಗ ಅವರ ಅವಸ್ಥೆ ಏನಾಗುತ್ತಿದ್ದಿರಬಹುದು ಎಂಬ ವಿಚಾರ ಸುಳಿಯುತ್ತಲೇ ಅಲ್ಲಿದ್ದ ನಿರ್ಜೀವ ಸಾಮಾನುಗಳ ಬದಲು ನನ್ನ ಕಣ್ಮುಂದೆ ಬೇಡಿ ತೊಡಿಸಿದ ಕೈದಿಗಳೇ ಬಂದು ನಿಂತಂತಾಯಿತು. ಮನಸ್ಸಿನ ಉದ್ವೇಗ ಕಡಿಮೆಯಾದ ಮೇಲೆಯೇ ಆ ಪಂಜರದಲ್ಲೀಗ ನೀರುಳ್ಳಿ ಬಟಾಟೆಗಳನ್ನು ತುಂಬಿರುತ್ತಿದ್ದುದು ನನ್ನ ಲಕ್ಷಕ್ಕೆ ಬಂದದ್ದು. ಪರಸತ್ತೆಯಲ್ಲಿದ್ದ ಗತಕಾಲದ ಅಂದ



ಆ ಸೆರೆಮನೆ

ಅಂದಮಾನದಲ್ಲಿ ಎಲ್ಲರೂ ವಿಮಾನ ಸರ್ವೀಸು ಶುರುವಾಗುವ ಹಾದಿಯನ್ನು ಉತ್ಕಂಠೆಯಿಂದ ನೋಡುತ್ತಿದ್ದರು. ವಿಮಾನ ಪ್ರವಾಸಿಗರ ಸುಖ-ಸೌಕರ್ಯಗಳ ಏರ್ಪಾಡಿಗಾಗಿ ಸಿವಿಲ್ ಏವಿ-ಯೇಶನ್ನಿನ ಕೆಲ ಜನರು ಈ ಹಡಗದಿಂದ ಬರು-ತ್ತಾರೆಂದು ಪತ್ರಿಕೆಯಲ್ಲಿ ಓದಿದ್ದರಿಂದ "ಇನ್ನು ವಿಮಾನ ಬರಲು ತಡವಿಲ್ಲ" ಎಂಬ ಕಲ್ಪನೆಯಿಂದ ಅಲ್ಲಿಯ ಜನರು ತುಂಬ ಉಲ್ಲಸಿತರಾಗಿದ್ದರು. ಕೇವಲ ಜಲಮಾರ್ಗವೊಂದೇ ಪ್ರಯಾಣದ ಸೌಕರ್ಯವಾದ್ದರಿಂದ ಈ ಜನರಿಗೆ ಒಂದು ಬಗೆಯ ಸೆರೆಮನೆವಾಸವೇ ಪ್ರಾಪ್ತವಾದಂತಾಗಿರುತ್ತದೆ. ಹಡಗು ಹೋದ ಬಳಿಕ ಭಾರತಕ್ಕೆ ಹೋಗಬೇಕೆಂದರೆ ಅದು ಅಶಕ್ಯವೇ ಸರಿ. ಇದಕ್ಕಾಗಿಯೇ ನಮ್ಮ ಸರಕಾರ ಅಲ್ಲಿಗೆ ಸಾಮುದ್ರ ವಿಮಾನಗಳನ್ನು (Sea planes) ಕಳಿಸುವ ನಿರ್ಧಾರ ಮಾಡಿತು. ನಾವು ಹಡಗದಿಂದ ಇಳಿದೊಡನೆ ಎಲ್ಲರೂ ವಿಮಾನಗಳ ಬಗ್ಗೆ ಪ್ರಶ್ನೆಯನ್ನು ಕೇಳುವವರೇ.

ಬಂದರಕ್ಕೆ ಬಂದಿದ್ದವರೊಡನೆ ಮಾತುಕತೆ ನಡೆದಾಗ ನಾನು ಸುತ್ತಮುತ್ತಲೂ ದೃಷ್ಟಿ ಹಾಯಿಸಿದೆ. "ಅನ್ನಪೂರ್ಣಾ" ಎಂಬ ಪರಿಚಿತ ಶಬ್ದವೊಂದು ನನ್ನ ಕಣ್ಣಿಗೆ ಬಿತ್ತು. ಇಲ್ಲಿಯ ಸ್ತ್ರೀಯರು ಸಂಘಟಿತ ರೀತಿಯಲ್ಲಿ ಸಾಮಾಜಿಕ ಕಾರ್ಯ ಮಾಡುತ್ತಿರಬೇಕು, ಅವರ ಎದುರಿನ ಸಮಸ್ಯೆಗಳೇನಿರಬಹುದು ಎಂದು ನಾನು ವಿಚಾರ ಮಾಡುತ್ತಿದ್ದಂತೆ ನಾವು ಕುಳಿತಿದ್ದ ಮೋಟರು ನಮ್ಮನ್ನು ಒಂದು ಬಂಗಲೆಗೆ ತಂದುಬಿಟ್ಟಿತು.

ಇಲ್ಲಿಯ ರಸ್ತೆಗಳೆಲ್ಲ ಹೆಚ್ಚಾಗಿ ಡಾಂಬರಿನವೂ ಬಹಳಷ್ಟು ಮುರುವುಗಳುಳ್ಳವೂ ಆಗಿವೆ. ಮನೆಗಳನ್ನು ಎತ್ತರದಲ್ಲಿ ಕಟ್ಟಿಗೆಗಳಿಂದ ಕಟ್ಟುತ್ತಾರೆ. ನಾಲ್ಕೂ ದಿಕ್ಕುಗಳಲ್ಲಿ ಹಬ್ಬಿದ ಸಮುದ್ರ ಮತ್ತು ಎತ್ತರವಾದ ತೆಂಗಿನ ಗಿಡಗಳಿಂದ ಈ ನಡುಗಡ್ಡೆ

ಗಳಿಗೆ ಒಂದು ವಿಶಿಷ್ಟ ಸೌಂದರ್ಯ ಪ್ರಾಪ್ತವಾಗಿದೆ. ಸುತ್ತಲೂ ಹಬ್ಬಿರುವ ಸಮುದ್ರ ಪ್ರಕ್ಷುಬ್ಧವಾದರೆ ಈ ದ್ವೀಪಗಳು ಮುಳುಗಿ ಹೋಗಲಿಕ್ಕಿಲ್ಲವೇ ಎಂದೆನಿಸುವಷ್ಟು ಇವು ಚಿಕ್ಕವಾಗಿವೆ.

ಅಂದಮಾನವೆಂದರೆ ಒಂದೇ ನಡುಗಡ್ಡೆಯಾಗಿರದೆ ಅನೇಕ ಚಿಕ್ಕ ದ್ವೀಪಗಳ ಸಮೂಹವಾಗಿದೆ. ಇವುಗಳಲ್ಲಿ ಹೆಚ್ಚಿನ ಸುಖಸೌಕರ್ಯಗಳಿರುವ ನಡುಗಡ್ಡೆಯೆಂದರೆ ಪೋರ್ಟ ಬ್ಲೇಅರ್. ಇದು ಅಂದಮಾನದ ರಾಜಧಾನಿಯೆನ್ನಲಡ್ಡಿಯಿಲ್ಲ. ಚೀಫ ಕಮಿಶನರ ಮತ್ತು ಅವರ ಕಚೇರಿ ಇರುವುದು ಇಲ್ಲಿಯೇ. ಅರಣ್ಯ ಖಾತೆಯ ಮುಖ್ಯಾಧಿಕಾರಿಯ ವಾಸ್ತವ್ಯವೂ ಇಲ್ಲಿಯೇ ಇದ್ದು ಖಾತೆಯವರು ನಡೆಸುತ್ತಿರುವ ಕಟ್ಟಿಗೆ ಕೊರೆಯುವ ದೊಡ್ಡ ಕಾರಖಾನೆಯು ಇಲ್ಲಿದೆ. ವಿದ್ಯುಚ್ಛಕ್ತಿ, ನೀರು, ಟೆಲಿಫೋನುಗಳ ಅನುಕೂಲತೆಯಿದ್ದು ಕ್ಲಬ್ಬು, ಶಾಲೆ, ಸಿನೇಮಾ ಗೃಹಗಳೂ ಇವೆ.

ಇಲ್ಲಿಯ ಸಮಾಜದಲ್ಲಿ ಎದ್ದು ಕಾಣುವ ಎರಡು ವರ್ಗಗಳಿವೆ. ಅವೆಂದರೆ ಮೇಲಿನ ಮಧ್ಯಮ ವರ್ಗ ಮತ್ತು ಕೆಳಗಿನ ಕೂಲಿಕಾರ ವರ್ಗ. ಇಲ್ಲಿಯ ಸಮಾಜರಚನೆ ತುಂಬ ವಿಚಿತ್ರವಾಗಿದೆ. ಭಾರತ ಸರಕಾರ ಕಳಿಸುವ ಅಧಿಕಾರಿಗಳು ಮತ್ತು ಅವರ ಕುಟುಂಬದವರ ಸಂಖ್ಯೆ ತೀರ ಕಡಿಮೆ. ಉಳಿದ ಸಮಾಜ ತೀರ ಭಿನ್ನ ಭಿನ್ನ ಜನರಿಂದ ಕೂಡಿದೆ. ಈ ಹಿಂದೆ ಕಳಿಸಿದ್ದ ಅನೇಕ ಕೈದಿಗಳು ಶಿಕ್ಷೆಯನ್ನು ಮುಗಿಸಿದ ಬಳಿಕ ಇಲ್ಲಿಯೆ ನೆಲಸಿ ಜನಸಂಖ್ಯೆಯನ್ನು ಹೆಚ್ಚಿಸಿದ್ದಾರೆ. ಮದ್ರಾಸ್ ಕಡೆಯ ಬಡ ಕೆಲಸಗಾರರು ಮತ್ತು ಬಂಗಾಲದ ನಿರಾಶ್ರಿತರು ಇಲ್ಲಿ ದೊಡ್ಡ ಸಂಖ್ಯೆಯಲ್ಲಿ ಬಂದು ತಳವೂರಿದ್ದಾರೆ. ಬ್ರಹ್ಮದೇಶದ ಕಡೆಯಿಂದ ಬಂದವರೂ ಇದ್ದಾರೆ. ಇದನ್ನು ಕಂಡು ನಮ್ಮುತ್ತ ಕಡೆಯವರು ಇಲ್ಲಿ ಏಕೆ ಬಂದಿಲ್ಲ ಎಂದು ನನಗನಿಸಿತು. ಕಾರವಾರದ ಕಡೆಯ ಜನರಿಗೆ ಇಲ್ಲಿ ಬಂದಿರಲು ಉತ್ತೇಜನವಿತ್ತಿದ್ದರೂ ತಮ್ಮ ಉದಾಸೀನ ಸ್ವಭಾವದ ಮೂಲಕ ಅವರು ಬರಲಿಲ್ಲವೆಂದು ತಿಳಿಯಿತು. ಬಡತನ, ನಿರುದ್ಯೋಗಗಳಿಂದ ತ್ರಸ್ತರಾಗಿದ್ದರೂ ಸರಕಾರವು ಭೂಮಿ ಮತ್ತು ಅನೇಕ ಸವಲತ್ತುಗಳನ್ನು ಒದಗಿಸಲು ಮುಂದೆ ಬಂದಿದ್ದರೂ "ಇಷ್ಟು ದೂರ ಯಾರು ಹೋಗುತ್ತಾರೆ?" ಎನ್ನುತ್ತ ಈ ಜನ ಅಲ್ಲಿ ಹೋಗಿಲ್ಲ.

ಇಲ್ಲಿ ತೆಲುಗು, ತಮಿಳು, ಬಂಗಾಲಿ ಮತ್ತು ತುಸು ಪ್ರಮಾಣದಲ್ಲಿ ಬ್ರಹ್ಮಿ ಭಾಷೆಗಳು ಪ್ರಚಾರದಲ್ಲಿವೆ. ಇಲ್ಲಿಯ ಭಾಷಾ ಸಮಸ್ಯೆಯನ್ನು ಬಿಡಿಸಲು ಹಿಂದೀ ಭಾಷೆ ಸಹಾಯಕವಾಗಿದೆ ಹರಕು ಮುರುಕೇ ಆಗಲಿ, ಹಿಂದಿಯಲ್ಲಿ ಮಾತಾಡಲು ಎಲ್ಲರೂ ಪ್ರಯತ್ನಿಸುತ್ತಿರುವುದನ್ನು ಕಂಡೆ ಇಲ್ಲಿ ಕೆಲ ಸುಶಿಕ್ಷಿತ ಸ್ತ್ರೀಯರು ಇಂಗ್ಲಿಷ್ ಮಾಧ್ಯಮವುಳ್ಳ "ಗುರುಕುಲ" ಶಾಲೆಯೊಂದನ್ನು ಆರಂಭಿಸಿದ್ದಾರೆ ಮಕ್ಕಳನ್ನು ಶಿಕ್ಷಣಕ್ಕಾಗಿ ಭಾರತಕ್ಕೆ ಕಳಿಸುವವರೇ ಹೆಚ್ಚು. ಈಗೀಗ ಈ ಶಾಲೆಯ ಪ್ರಯೋಜನವನ್ನು ಜನ ಹೆಚ್ಚಾಗಿ ಮಾಡಿಕೊಳ್ಳತೊಡಗಿದ್ದಾರೆ. ಇಲ್ಲಿ ಫೀ ಹೆಚ್ಚು, ಅಲ್ಲದೆ ಇಂಗ್ಲಿಷ್ ಮಾಧ್ಯಮವಿರುವುದರಿಂದ ಎಲ್ಲರಿಗೂ ಇದರಲ್ಲಿ ಪ್ರವೇಶ ಪಡೆಯುವುದು ಕಠಿಣವಾಗಿದೆ.

ಅದಕ್ಕಾಗಿ ಅಂದಮಾನ ಮೈನರ ಫಾರೆಸ್ಟ್ ಇಂಡಸ್ಟ್ರೀಸ್ ಎಂಬ ಹೆಸರಿನ ಒಂದು ಸಂಸ್ಥೆ ಮತ್ತೊಂದು ಶಾಲೆಯನ್ನು ಪ್ರಾರಂಭಿಸಿದೆ. ಈ ಸಂಸ್ಥೆ ಇನ್ನೂ ಬಾಲ್ಯಾವಸ್ಥೆಯಲ್ಲಿದ್ದರೂ ಅದು ಇಲ್ಲಿಯ ನಿತ್ಯ ಜೀವನಕ್ಕೆ ನಿಕಟ ಸಂಬಂಧವನ್ನು ಹೊಂದಿದೆ. ಇಲ್ಲಿ ಕೂಲಿಕಾರರ ಸಂಖ್ಯೆ ದೊಡ್ಡ ಪ್ರಮಾಣದಲ್ಲಿದೆ. ಇವರಲ್ಲಿ ಹೆಚ್ಚಿನವರು ಸಾಮಿಲ್ ಅಥವಾ ವಿಮ್ಕೋ [ ಬೆಂಕಿಪೆಟ್ಟಿಗೆ ] ಕಾರಖಾನೆಯಲ್ಲಿ ದುಡಿಯುತ್ತಾರೆ. ಈ ಕೆಲಸಗಾರರ ಸಲುವಾಗಿಯೇ ಅರಣ್ಯ ಖಾತೆಯ ಅಧಿಕಾರಿಗಳ ಹೆಂಡಂದಿರು ಈ ಸಂಸ್ಥೆಯನ್ನು ನಡೆಸುತ್ತಿದ್ದಾರೆ. ಕೆಲಸ ಮಾಡುವಾಗ ಅಪಘಾತಕ್ಕೆ ಸಿಲುಕಿ ಅಂಗಹೀನರಾದವರಿಗಾಗಿ ಚಿಕ್ಕ ವ್ಯವಸಾಯಗಳನ್ನು ಈ ಸಂಸ್ಥೆ ಒದಗಿಸುತ್ತದೆ. ಕೇವಲ ನಾಲ್ಕಾಣೆ ಫೀ ತೆಗೆದುಕೊಂಡು ಕೆಲಸಗಾರರ ಮಕ್ಕಳಿಗಾಗಿ ಒಂದು ಶಾಲೆಯನ್ನು ಪ್ರಾರಂಭ

ಸಿದೆ. ಇತರ ಮಕ್ಕಳಿಗೂ ಪ್ರವೇಶವಿದೆ.

ತೀರ ಇತ್ತೀಚಿನ ವರೆಗೆ ಕೇವಲ ಕೈದಿಗಳ ನಿವಾಸಸ್ಥಾನವೆಂದೆನಿಸಿದ ಇಲ್ಲಿ ಪ್ರೇಕ್ಷಣೀಯ ವಸ್ತುಗಳಾದರೂ ಏನಿರಬಹುದು ? ಯಾವುದಕ್ಕಾದರೂ ಒಂದಿಷ್ಟು ಐತಿಹಾಸಿಕ ಮಹತ್ವವಿದ್ದರೆ ಅದು ಇಲ್ಲಿಯ ಸೆರೆಮನೆಗೆ.

ಸೆಲ್ಯುಲರ ಜೇಲ ಎಂಬ ಹೆಸರಿರುವ ಈ ಸೆರೆ ಮನೆಯಲ್ಲಿ ಕಾಲಿಟ್ಟೊಡನೆ ಮೊಟ್ಟಮೊದಲು ವೀರ ಸಾವರಕರರ ನೆನಪು ಬರುತ್ತದೆ. ಗೋಲಾಕಾರದ ಕಟ್ಟಡವಾಗಿರುವುದರಿಂದ ಇದಕ್ಕೆ ಸೆಲ್ಯುಲರ ಜೇಲ ಎಂಬ ಹೆಸರು ಬಂದಿದೆ. ನಡುವೆ ಒಂದು ಚಿಕ್ಕ ಗೋಲವಿದ್ದು ಅದರ ಸುತ್ತ ಸೂರ್ಯ ಕಿರಣಗಳಂತೆ ನಾಲ್ಕೂ ದಿಕ್ಕುಗಳಲ್ಲಿ ಮೂರು ಮಾಳಿಗೆಗಳುಳ್ಳ ಏಳು ವಿಂಗ್ಸ್ (ಶಾಖೆ) ಗಳಿವೆ. ಒಂದು ಕಟ್ಟಡದ ಮುಖಕ್ಕೆ ಇನ್ನೊಂದು ಕಟ್ಟಡದ ಬೆನ್ನಿರುವುದರಿಂದ ಕೈದಿಗಳಿಗೆ ಪರಸ್ಪರ ದರ್ಶನವೂ ಆಗುತ್ತಿರಲಿಲ್ಲ. ನಡುವಿನ ದುಂಡನ್ನ ಕಟ್ಟಡದ ಮಾಳಿಗೆಯ ಮೇಲೆ ಸಶಸ್ತ್ರ ಪೋಲೀಸರು ನಿಂತು ಇಡೀ ಜೇಲಿನ ಕಾವಲು ಮಾಡುತ್ತಿದ್ದರು.

ಈಗ ಈ ಕಟ್ಟಡದಲ್ಲಿ ತುಂಬ ಬದಲಾವಣೆಯಾಗಿದೆ. ಜೇಲಿನ ಮುಂದಿನ ಕಟ್ಟಡದಲ್ಲಿ ಆಸ್ಪತ್ರೆಯಿದೆ. ಏಳು ಶಾಖೆಗಳಲ್ಲಿ ನಾಲ್ಕು ಮಾತ್ರ ಉಳಿದಿವೆ. ಉಳಿದ ಮೂರು ಜಪಾನಿಗಳ ಬಾಂಬು ದಾಳಿಯಲ್ಲಿ ನೆಲಸಮವಾಗಿವೆ. ಭಾರತದಿಂದ ಕೈದಿಗಳು ಇಲ್ಲಿಗೆ ಬರುವುದಿಲ್ಲವಾದ್ದರಿಂದ ಬಹಳ ಕೋಣೆಗಳು ಖಾಲಿಯಾಗಿವೆ ಅಲ್ಲೀಗ ಸಾಮಾನುಗಳನ್ನು ಇಡುತ್ತಾರೆ.

ಎಲ್ಲ ಬಗೆಯ ಆಧುನಿಕ ಸೌಕರ್ಯಗಳಿದ್ದರೂ ಇಲ್ಲಿಯ ದಟ್ಟ ಅಡವಿಗಳಲ್ಲಿನ್ನೂ ತೀರ ಹಿಂದುಳಿದ ಜನಾಂಗಗಳಿವೆ. ಅವುಗಳಲ್ಲಿ ಓಂಗೀ ಮತ್ತು ಓಡವಾ ಕುಲಗಳು ಮುಖ್ಯವಾಗಿವೆ. ಓಂಗೀ ಕುಲದವರು ಈಗ ತುಂಬ ಸಾಧು ಸ್ವಭಾವದವರಾಗಿದ್ದು ನಿರುಪದ್ರವಿಗಳಾಗಿದ್ದಾರೆ ನಾಗರಿಕ ಜಗತ್ತಿನೊಡನೆ ಅವರ ಸಂಪರ್ಕ ದಿನೇದಿನೇ ಬೆಳೆಯುತ್ತಿದೆ ಆದರೆ ಜಾರವಾ ಕುಲದವರು ಹಾಗಲ್ಲ. ಅವರ ಕೈಗೆ ಸಿಕ್ಕರೆ ತಿರುಗಿ ಜೀವಂತ ಬರುವುದು ದುಷ್ಕರ. ಈ ಜನರು ದೂರ ದೂರದ ನಡುಗಡ್ಡೆಗಳಲ್ಲಿ ಎಲ್ಲರಿಂದ ತೀರ ಅಲಿಪ್ತರಾಗಿರುವುದರಿಂದ ಇವರಲ್ಲಿ ಪರಕೀಯ ರಕ್ತಸಂಪರ್ಕ ಕಾಣಿಸುವುದು ಅಶಕ್ಯವೇ ಎನ್ನಬಹುದು.

ಜಗತ್ತಿನ ಇತರರಿಂದ ಸಾವಿರಾರು ವರ್ಷಗಳಿಂದ ಅಲಿಪ್ತವಾಗಿರುವ ಈ ಜನಾಂಗ ನೂರಕ್ಕೆ ನೂರರಷ್ಟು ಶುದ್ಧವಾಗಿದೆ. ಇವರನ್ನು ಹೆಚ್ಚುಕಡಿಮೆ ಶಿಲಾಯುಗದವರೇ ಎನ್ನಬೇಕಾಗುವುದು. ಒಕ್ಕಲುತನವನ್ನು ಇವರು ಸ್ವಲ್ಪ ಬಲ್ಲರು. ಸಮುದ್ರದಲ್ಲಿ ಮತ್ತು ಅಡವಿಗಳಲ್ಲಿ ಬೇಟೆಯಾಡುವುದೇ ಇವರ ಉಪಜೀವಿಕೆಯ ಮುಖ್ಯ ಸಾಧನ. ಅವರ ಮುಖ್ಯ ಆಹಾರ ಚಿಪ್ಪಿನ ಮೀನುಗಳು ( Oysters ). ಧನುಷ್ಯ ಬಾಣಗಳೇ ಇವರ ಮುಖ್ಯ ಆಯುಧ. ಬಾಣಗಳ ತುದಿಯನ್ನು ಇಕ್ಕಳದಂತೆ ಬಗ್ಗಿಸಿರುವುದರಿಂದ ಅದು ದೇಹದಲ್ಲಿ ನಟ್ಟರೆ ಹೊರಗೆ ತೆಗೆಯುವುದು ಬಹು ಕಠಿನವಾಗುವುದು. ಇವರನ್ನು ಸುಧಾರಿಸಲು ಯತ್ನಿಸಿದ ಬಹಳಷ್ಟು ಜನರು ಇವರಿಗೆ ಬಲಿಯಾಗಿದ್ದಾರೆ. ಈ ಕ್ರೂರ ಜನರ ಮೂಲಕ ಅಂದಮಾನ ಮತ್ತು ನಿಕೋಬಾರಗಳಲ್ಲಿ ಬಹಳ ನಡುಗಡ್ಡೆಗಳು ನಮ್ಮ ಸರಕಾರಕ್ಕೆ ದುರ್ಗಮವಾಗಿವೆ. ಇವರನ್ನು ಬಗ್ಗಿಸುವಲ್ಲಿ ಅಲ್ಲಿಯ ಪೋಲೀಸರು ಇದುವರೆಗೂ ಯಶಸ್ವಿಗಳಾಗಿಲ್ಲ.

ಈ ನಡುಗಡ್ಡೆಗಳ ಸುತ್ತಲಿರುವ ಸಮುದ್ರದಲ್ಲಿ ಬಹು ಬೆಲೆಯ ಶಂಖ-ಚಿಪ್ಪುಗಳು ಸಿಗುತ್ತವೆ. ನಡುಗಡ್ಡೆಗಳಲ್ಲಿ ಉತ್ತಮ ತರಗತಿಯ ಸುಂದರ ಕಟ್ಟಿಗೆ ಸಿಗುತ್ತದೆ. ಆದರೆ ಇಲ್ಲಿಯ ನಿಸರ್ಗ ಸೌಂದರ್ಯದ ಜೊತೆಗೆ ಕ್ರೂರ ಜಲಚರಗಳೂ ವನ್ಯಪಶುಗಳೂ ಇವೆ. ಈ ಪರಸ್ಪರ ವಿರೋಧಿ ಸತ್ಯದಿಂದಲೇ ಈ ನಡುಗಡ್ಡೆಗಳು ನನ್ನ ಮಟ್ಟಿಗಾದರೂ ಗೂಢರಮ್ಯವಾಗಿಯೇ ಕಾಣಿಸುತ್ತಿವೆ.



# ನಗೆ ಮಲ್ಲಿಗೆ

## ಜಾದು

ಭಾರೀ ಚಹ ಸತ್ಕಾರ ನಡೆಯುತ್ತಿತ್ತು. ಮುಖ್ಯ ಅತಿಥಿಗಳೇ ಶ್ರೀಧರ ರಾಯರು. ಬೆಳ್ಳಿಯ ತಟ್ಟೆ, ಚಮಚಗಳಿಂದಲೇ ಅತಿಥಿಗಳಿಗೆಲ್ಲ ತಿಂಡಿಯನ್ನೊದಗಿಸಲಾಗಿತ್ತು. ಶ್ರೀನಿವಾಸ ರಾಯರಿಗೆ ಒಂದು ಚಮಚೆಯನ್ನು ಕಿಸೆಯಲ್ಲಿ ಇಳಿಸಿಬಿಡೋಣ ಎನ್ನಿಸಿತು. ಹಾಗೆಯೇ ಮಾಡಿದರು. ಶ್ರೀಧರ ರಾಯರು ಅದನ್ನು ಹೇಗೋ ನೋಡಿಬಿಟ್ಟರು. ಸತ್ಕಾರ ಎಲ್ಲ ಮುಗಿದ ನಂತರ ಎಲ್ಲರೂ ಒಂದೊಂದು ರೀತಿಯ ಮನರಂಜನೆಯನ್ನು ಒದಗಿಸಿ, ನಗಿಸಬೇಕಾಗಿತ್ತು. ಮುಖ್ಯ ಅತಿಥಿಗಳ ಸರದಿಯೂ ಬಂತು. ಅವರು ಎದ್ದು ಒಂದು ಚಮಚೆಯನ್ನು ಕೈಯಲ್ಲಿ ಹಿಡಿದು, "ನಾನು ಕಲಿತ 'ಮೆಸ್ಮರಿಸಂ' ವಿದ್ಯೆಯನ್ನು ನಿಮಗೂ ತೋರಿಸುತ್ತೇನೆ" ಎಂದವರೇ ಆ ಚಮಚೆಯನ್ನು ಕಿಟಕಿಯ ಮೂಲಕ ಹೊರಗೆ ಬಿಸಾಡಿ, ಪಕ್ಕದಲ್ಲೇ ಕುಳಿತಿದ್ದ ಶ್ರೀನಿವಾಸ ರಾಯರ ಜೇಬಿನಿಂದ ಚಮಚೆಯನ್ನು ತೆಗೆದು ಎಲ್ಲರಿಗೂ ತೋರಿಸಿದರು. ಎಲ್ಲರೂ ಕೈ ಚಪ್ಪಾಳೆ ತಟ್ಟಿ ಶ್ರೀಧರ ರಾಯರ 'ಮೆಸ್ಮರಿಸಂ'ನ್ನು ಪ್ರಶಂಸಿಸಿದರು.

ಮಾರನೇ ದಿನ ಶ್ರೀನಿವಾಸರಾಯರು ಶ್ರೀಧರರಾಯರಿಗೆ ರಸ್ತೆಯಲ್ಲಿ ಭೇಟಿಯಾದಾಗ ಹೀಗೆ ಹೇಳಿದರು: "ಗಡಿಬಿಡಿಯಲ್ಲಿ ನೀವೇನಾದರೂ ನನ್ನ ಬಲಗಡೆಯ ಜೇಬಿಗೆ ಕೈ ಹಾಕುತ್ತಿದ್ದರೆ ಕೆಲಸ ಕೆಟ್ಟುಹೋಗುತ್ತಿತ್ತು."

"ಕಾರಣ ?"

"ಆ ಜೇಬಿನಲ್ಲಿ ತಟ್ಟೆ ಇತ್ತು."

—ನಾರಾಯಣ ಉಡುಪ

## ರಾಜೀನಾಮೆಯ ಕಾರಣ

ಒಬ್ಬ ಶಾಲಾಮಾಸ್ತರ ತನ್ನ ರಾಜೀನಾಮೆ ಅರ್ಜಿಯಲ್ಲಿ ಹೀಗೆ ಬರೆದಿದ್ದ :

"ಈಗಿನ ಸಾರ್ವಜನಿಕ ಶಾಲೆಗಳಲ್ಲಿ ಮಾಸ್ತರರು ಹೆಡ್ಮಾಸ್ತರರಿಗೆ ಅಂಜುತ್ತಾರೆ. ಹೆಡ್ಮಾಸ್ತರರು ಸುಪರಿಂಟೆಂಡೆಂಟರಿಗೆ ಹೆದರುತ್ತಾರೆ. ಸುಪರಿಂಟೆಂಡೆಂಟರು ಸ್ಕೂಲ್ ಬೋರ್ಡಿಗೆ ಅಂಜುತ್ತಾರೆ. ಸ್ಕೂಲ್ ಬೋರ್ಡು ಮಕ್ಕಳ ತಂದೆ-ತಾಯಿಗಳಿಗೆ ಹೆದರುತ್ತದೆ. ತಂದೆ-ತಾಯಿಗಳು ಮಕ್ಕಳಿಗೆ ಅಂಜುತ್ತಾರೆ. ಮಕ್ಕಳು ಯಾರಿಗೂ ಅಂಜುವುದಿಲ್ಲ."

## ಅವನಿಗೆ ಗೊತ್ತಿಲ್ಲ

ಮ್ಯಾಜಿಸ್ಟ್ರೇಟ— ನೀನು ದೋಷಿಯೊ, ನಿರ್ದೋಷಿಯೊ ?

ಆರೋಪಿ— ಎಲ್ಲ ಸಾಕ್ಷಿಗಳು ಹೇಳಿದ್ದನ್ನು ಕೇಳಿಕೊಳ್ಳುವ ಮೊದಲೇ ಹೇಗೆ ಹೇಳಲಿ ಸ್ವಾಮಿ !

## ಅವಳ ವಯಸ್ಸು

ಆಕೆ— ನನ್ನ ಈ ಹೊಸ ಪತ್ತಲ ನೋಡಿದಿರೇನು? ಇದನ್ನುಟ್ಟುಕೊಂಡಾಗ ನಾನು ಹತ್ತು ವರ್ಷ ಚಿಕ್ಕವಳಾಗಿ ಕಾಣಿಸುತ್ತೇನೆಂದು ನಮ್ಮ ಯಜಮಾನರು ಹೇಳುತ್ತಾರೆ.

ಈಕೆ— ಹೌದೆ ? ನಿಮಗೆ ಈಗ ವಯಸ್ಸೆಷ್ಟು ?

ಆಕೆ— ಮೂವತ್ತು.

ಈಕೆ— ಊಂ ಹುಂ. ಈ ಸೀರೆಯುಟ್ಟುಕೊಳ್ಳದಿದ್ದಾಗ ಎಷ್ಟು ಅಂತ !



**ಕುರುಡ ಗವಯಿ ಕಿವುಡ ಜಮೀನ್ದಾರನಿಗೆ ಸಂಗೀತ ಕೇಳಿಸುತ್ತಿದ್ದ: ಆದರೆ ಅದರೊಳಗಿನ ಹೃದಯವಂತಿಕೆಯೊ ?**

# ಅವರವರ ದೃಷ್ಟಿ

ಧೂಮಕೇತು
ಅವರ ಗುಜರಾತಿ ಕಥೆ

ಡಿಸೆಂಬರ ತಿಂಗಳ ೩೧ ನೆಯ ತಾರೀಖಿನ ಮುಂಜಾನೆ ಸರಿಯಾಗಿ ೯-೩೦ ಗಂಟೆಗೆ ಬಂಗಲೆಯ ಎದುರಿನ ರಸ್ತೆಯಲ್ಲಿ ಕುರುಡನೂ ವೃದ್ಧನೂ ಆದ ಗವಯಿಯೊಬ್ಬ ಸಾರಂಗಿ ಹಿಡಿದುಕೊಂಡು ಬರುವುದು ಕಾಣಿಸುತ್ತಿತ್ತು. ಆತ ಬಹು ಕಷ್ಟದಿಂದ ಮೆಲ್ಲಮೆಲ್ಲಗೆ ನಡೆದು ಬರುತ್ತಿದ್ದ. ಬರಿ ಮೂರು ನೂರು ಹೆಜ್ಜೆಯ ಅಂತರದಲ್ಲಿದ್ದ ಆ ಬಂಗಲೆಯನ್ನು ಮುಟ್ಟಲು ಅವನಿಗೆ ಅರ್ಧ ತಾಸು ಹಿಡಿಯುತ್ತಿತ್ತು. ಬಹಳ ವರ್ಷಗಳಿಂದ ರೂಢಿಯಿತ್ತಾದ್ದರಿಂದ ಅವನು ಏನೂ ತೊಂದರೆಯಿಲ್ಲದೆ ಬಂಗಲೆಯನ್ನು ತಲುಪುತ್ತಿದ್ದ.

ಪ್ರತಿ ವರ್ಷ ಡಿಸೆಂಬರ ೩೧ ರಂದು ಮಾತ್ರ ಅವನು ಅಲ್ಲಿ ಕಾಣಿಸಿಕೊಳ್ಳುತ್ತಿದ್ದ. ೯-೩೦ ಗಂಟೆಗೆ ಬಂದು ತಾಸರ್ಧ ತಾಸಿನ ವರೆಗೆ ವೃದ್ಧನೂ ಕಿವುಡನೂ ಜರ್ಜರಿತನೂ ಆಗಿದ್ದ ಜಮೀನುದಾರನೆದುರು ಸಾರಂಗಿಯನ್ನು ಬಾರಿಸುತ್ತಿದ್ದ. ಜಮೀನುದಾರ ಕೊಟ್ಟದ್ದನ್ನು ಸ್ವೀಕರಿಸಿ ಹೊರಟುಹೋಗುತ್ತಿದ್ದ.

ಡಿಸೆಂಬರ ೩೧ ನೇ ತಾರೀಖನ್ನು ಬಿಟ್ಟರೆ ಮತ್ತಾವಾಗಲೂ ಅವನು ಅಲ್ಲಿ ಸುಳಿಯುತ್ತಿರಲಿಲ್ಲ. ಅಲ್ಲಿಯ ನೆರೆಹೊರೆಯವರಿಗೆಲ್ಲರಿಗೂ ಜಮೀನುದಾರನ ದಾರಿದ್ರ್ಯದ ಪರಿಚಯವಿತ್ತು. ಆದರೆ ಹುಲಿ ಹೇಗೆ ಹುಲ್ಲನ್ನು ತಿನ್ನಲಾರದೋ ಹಾಗೆಯೇ ತನ್ನ ದಾರಿದ್ರ್ಯದ ಸಂಪೂರ್ಣ ಅರಿವಾಗಿದ್ದರೂ ಜಮೀನುದಾರನು ತನ್ನ ವೈಭವ ಕಾಲದ ಔದಾರ್ಯವನ್ನು ಬಿಡಲಾರದವನಾಗಿದ್ದ.



ಅವನಲ್ಲಿಗೆ ಈ ಕುರುಡ ಗವಯಿಯಂತೆ ಮೂರು ನಾಲ್ಕು ಜನ ಪ್ರತಿ ವರ್ಷವೂ ಒಂದು ನಿಶ್ಚಿತ ದಿನ ಬಂದು ಹೋಗುತ್ತಿದ್ದರು. ಜಮೀನುದಾರನ ಕ್ಷೌರಿಕ, ಅಗಸ, ಒಬ್ಬ ನೌಕರ, ಒಬ್ಬ ದಾದಿ ಇವರು ಅಂಥವರಾಗಿದ್ದರು. ಜಮೀನುದಾರ ಮೊದಲಿನಂತೆ ಈಗಲೂ ಅವರಿಗೆ ಒಂದಿಷ್ಟು ಹಣ ಕೊಡುತ್ತಿದ್ದ. ಸಿಗುವುದನ್ನು ಏಕೆ ಬಿಡಬೇಕು ಎಂದು ಅವರೂ ಬಂದು ಹೋಗುತ್ತಿದ್ದರು. ಅಕಸ್ಮಾತ್ತಾಗಿ ಇವರಲ್ಲಿ ಯಾವನಾದರೊಬ್ಬ ಬಾರದೆ ಉಳಿದರೆ ಜಮೀನುದಾರ ಅವನನ್ನು ಕರೆಸಿಕೊಳ್ಳುತ್ತಿದ್ದ. ಈ ಔದಾರ್ಯದಿಂದ ಜಮೀನುದಾರನಿಗೆ ತುಂಬ ಕಷ್ಟವಾಗುತ್ತಿದ್ದರೂ ವರ್ಷಗಳಿಂದ ಬಂದ ರೂಢಿಯನ್ನು ಅವನು ನಿಲ್ಲಿಸಲಾರದವನಾಗಿದ್ದ.

ಜಮೀನುದಾರನ ಹಿರಿಯ ಮಗ ಎಲ್ಲಿಯೋ ಪೋಲೀಸು ಶಾಖೆಯಲ್ಲಿ ನೌಕರನಾಗಿದ್ದ. ಅವನು ಸಿಟ್ಟಿಗೆದ್ದು ಶತಪಥ ಹಾಕತೊಡಗಿದನೆಂದರೆ ಮನೆಯವರೆಲ್ಲ ಅಂಜಿ ಹೌಹಾರುತ್ತಿದ್ದರು. ಜಮೀನುದಾರ ತನ್ನ ಗತವೈಭವದ ನೆನಪಿನಲ್ಲಿ ಮುಳುಗಿ ದಿನವಿಡೀ ದಿವಾಣಖಾನೆಯ ಒಂದು ಖುರ್ಚಿಯ ಮೇಲೆ ಕುಳಿತಿರುತ್ತಿದ್ದ. ಎದುರಿಗಿನ ಆಕಾಶವನ್ನು ನೋಡುತ್ತ ಗತಸ್ಮೃತಿಗಳನ್ನು ಮೆಲುಕು ಹಾಕುವುದು ಅವನಿಗೆ ಅಭ್ಯಾಸವಾಗಿ ಹೋಗಿತ್ತು.

ಅವನ ಮನೆಯ ವಸ್ತುಗಳೆಲ್ಲ ಒಂದೊಂದಾಗಿ ಅವನ ಕೈಬಿಟ್ಟು ಹೋಗತೊಡಗಿದ್ದವು. ಬೆಳ್ಳಿ ಬಂಗಾರದ ವ್ಯಾಪಾರಿಗಳಿಂದ ಹಿಡಿದು ಖುರ್ಚಿ ಮೇಜಿನ ವ್ಯಾಪಾರಿಗಳ ವರೆಗೆ ಅನೇಕರು ದಿನ-ನಿತ್ಯ ಅಲ್ಲಿಗೆ ಬರುತ್ತಿದ್ದರು. ಹಳೆಯ ಕಾಲದ ಸಂಪತ್ತು ಪೂರ್ಣವಾಗಿ ಉಳಿದಿರದಿದ್ದರೂ ಉಳಿದಿರುವಷ್ಟಾದರೂ ಉಳಿದಿದೆಯಲ್ಲ ಎಂದು ಮುದುಕ ಜಮೀನುದಾರ ಸಂತೋಷಪಟ್ಟುಕೊಳ್ಳುತ್ತಿದ್ದ. ದೂರದೂರಿನಲ್ಲಿ ದೊಡ್ಡ ನೌಕರಿಯಲ್ಲಿದ್ದ ಅವನ ಮಗನೊಬ್ಬ ರಜೆ ತೆಗೆದುಕೊಂಡು ಮನೆಗೆ ಬಂದಾಗ ಏನೇನೂ ಕೊರತೆ ಕಾಣದಂತೆ ಅವನ ಬಗ್ಗ ವ್ಯವಸ್ಥೆ ಮಾಡುತ್ತಿದ್ದರು. ಆದರೆ ಅವನು ಹೋದೊಡನೆ ಮತ್ತೆ ಯಥಾಪ್ರಕಾರ ಮೊದಲಿನಂತೆಯೆ ಅವ್ಯವಸ್ಥೆಯಾಗುತ್ತಿತ್ತು. ಈ ಮಗನಿಗೆ ತಂದೆಯ ಸಂಪ್ರದಾಯನಿಷ್ಠೆ ಮನಸ್ಸಿಗೆ ಬರುತ್ತಿರಲಿಲ್ಲ. ಎಷ್ಟು ವರ್ಷಗಳ ಹಿಂದೆಯೋ ಒಮ್ಮೆ ಬಂದು ತನ್ನ ಸಂಗೀತದಿಂದ ಎಲ್ಲರನ್ನು ಸಂತೋಷಗೊಳಿಸಿದ್ದನೆಂದ ಮಾತ್ರಕ್ಕೆ ಇಂದಿಗೂ ಪ್ರತಿವರ್ಷ ಬಂದು ಒಂದರ್ಧ ತಾಸು ಗುಣುಗುಣಿಸಿದಂತೆ ಮಾಡಿ ಹಣ ಒಯ್ಯುವುದೆಂದರೇನು ?

ದೊಡ್ಡ ನೌಕರಿಯಲ್ಲಿದ್ದ ಈ ಮಗ ಬಹುಶಃ ಡಿಸೆಂಬರ ತಿಂಗಳಲ್ಲಿಯೇ ಮನೆಗೆ ಬರುತ್ತಿದ್ದ. ಜಮೀನುದಾರನ ಆಶ್ರಿತರು ಬರುವ ಸಮಯವೂ ಅಗಲೇ ಆಗಿತ್ತಾದ್ದರಿಂದ ನಡೆಯುವುದೆಲ್ಲವೂ ಮಗನ ಕಣ್ಣಿಗೆ ಬೀಳುತ್ತಲೇ ಇತ್ತು. ಇಂಥ ಸಮಯದಲ್ಲಿ ಆಗಾಗ ತಂದೆ–ಮಕ್ಕಳಲ್ಲಿ ವಾಗ್ಯುದ್ಧವೂ ನಡೆಯುತ್ತಿತ್ತು.

ಆಗ ಜಮೀನುದಾರ ಮಗನಿಗೆ "ನನ್ನ ಜೀವವಿರುವವರೆಗಷ್ಟು ಹೀಗೆಯೇ ನಡೆಯಲಿ. ಆ ಮೇಲೆ ನೀನೇನು ಯಾರಿಗೂ ಕೊಡಬೇಕಾಗಿಲ್ಲ. ನಿನ್ನ ಬಳಿಗೆ ಯಾರೂ ಬರಲಿಕ್ಕೂ ಇಲ್ಲ. ಹೀಗೆ ಬರುವುದು, ಕೊಡುವುದು ಕೂಡ ಜೀವನದಲ್ಲಿ ಒಂದು ರಸಮಯ ಪ್ರಸಂಗ," ಎನ್ನುತ್ತಿದ್ದ.

"ಆದರೆ ಈ ದರಿದ್ರ ಜನ . . . "

"ನನ್ನಂತೆಯೇ . . ."

"ಹೌದು. ನಿಮ್ಮಂತೆಯೇ ದರಿದ್ರರು ಮತ್ತು ತಿಳಿವಳಿಕೆಯಿಲ್ಲದವರು. ಇವರು ನಮ್ಮ ಬೆನ್ನು ಬಿಡುವುದಿಲ್ಲ. ಈ ಕುರುಡ ಸಾರಂಗಿಯವನ ಮಾತನ್ನೇ ತೆಗೆದುಕೊಳ್ಳಿರಿ."

"ನಿನ್ನ ಕಲ್ಪನೆ ತಪ್ಪು ಮಗನೇ. ಇವರಲ್ಲಿ ಪ್ರತಿಯೊಬ್ಬನೂ ಹಣಕ್ಕಾಗಿಯೇ ಬರುತ್ತಾನೆಂದೇನೂ ಇಲ್ಲ. ಸಾರಂಗಿವಾಲನಂತೂ ಹಣಕ್ಕಾಗಿಯೇ ಎಂದು ಎಂದೂ ಬಂದವನಲ್ಲ. ಆತ

ಕೇವಲ ಗತಕಾಲದ ಒಂದು ದಿನವನ್ನು ನೆನಪು ಮಾಡಿಕೊಡಲು ಬರುತ್ತಾನೆ. ಅಷ್ಟರಿಂದಲೇ ಅವನಿಗೆ ಸಮಾಧಾನವಾಗುತ್ತದೆ. ಜೀವನದಲ್ಲಿ ಇದೂ ಒಂದು ಆನಂದವೇ ಸರಿ. ನಾನು ಸತ್ತ ಬಳಿಕ ಇವರಲ್ಲಿ ಒಬ್ಬರೂ ಇತ್ತ ಹಣಿಕಿಕೂಡ ನೋಡುವುದಿಲ್ಲ.''

ಮಗ ಇದಕ್ಕೆ ಉತ್ತರ ಕೊಡದಿದ್ದರೂ ಅವನಿಗೆ ತಂದೆಯ ಮಾತು ಸೇರಿಕೆಯಾಗುತ್ತಿರಲಿಲ್ಲ.

*

ಜಮೀನುದಾರ ಸತ್ತು ೨-೩ ತಿಂಗಳಾಗಿದ್ದವು. ಆಗ ಆ ಕುರುಡ ಸಾರಂಗಿವಾಲಾ ಊರಲ್ಲಿರಲಿಲ್ಲ. ಡಿಸೆಂಬರ ತಿಂಗಳು ಬಂತು. ೩೧ ನೆಯ ತಾರೀಖು ಉದಯಿಸಿತು. ಆತ ಬಂಗಲೆಯ ಎದುರು ಕಾಣಿಸಿಕೊಂಡ.

ಆತ ಬರುವುದನ್ನು ಕಂಡ ಜಮೀನುದಾರನ ಹಿರಿಯ ಮಗ, ''ಏ ನೀಲಂ, ಓಡು ಓಡು. ಆ ಮುದುಕ ಬರುತ್ತಿದ್ದಾನೆ'' ಎಂದು ಕೂಗಿದ. ನಿಲಂ ಜಮೀನುದಾರನ ಕಿರಿಯ ಮಗ. ಈತ ಅರೆಹುಚ್ಚನಂತಿದ್ದ. ಆದರೆ ಅವನಿಗೆ ತಂದೆಯಲ್ಲಿ ಅಪಾರ ಪ್ರೀತಿ ಇತ್ತು. ಈ ಪ್ರೀತಿಗಾಗಿಯೇ ಆತ ಎಷ್ಟೋ ಸಲ ವಿಚಿತ್ರ ಕೆಲಸಗಳನ್ನೂ ಮಾಡಿಬಿಡುತ್ತಿದ್ದ. ಒಮ್ಮೆ ಒಬ್ಬ ಜೋತಿಷ್ಯ ಇಂಥ ಒಂದು ದಿನ ಜಮೀನುದಾರರಿಗೆ ತುಂಬ ಅನಿಷ್ಟ ಎಂದು ಹೇಳಿದಾಗ ನೀಲಂ ಆ ದಿನವೆಲ್ಲ ಜಮೀನುದಾರನನ್ನು ನೆರಳಿನಂತೆ ಹಿಂಬಾಲಿಸಿದ್ದ. ಕಪಾಟಿನಲ್ಲಿದ್ದ ಪುಸ್ತಕವನ್ನು ತೆಗೆದುಕೊಳ್ಳಲು ಕೂಡ ಅವನಿಗೆ ಬಿಡಲಿಲ್ಲ.

ನೀಲಂ ಹೆಚ್ಚು ಶಿಕ್ಷಣ ಪಡೆದವನಲ್ಲವಾದರೂ ಒಂದು ವಿಷಯದಲ್ಲಿ ಬಹು ಚತುರ. ಆತ ಯಾರು ಬೇಕಾದರೆ ಅವರ ಧ್ವನಿಯನ್ನು ಅವರಂತೆಯೆ ಒಂದಿಷ್ಟೂ ಸಂದೇಹ ಬಾರದ ರೀತಿಯಲ್ಲಿ ಹೊರಡಿಸುತ್ತಿದ್ದ.

ನೀಲಂ ಅಣ್ಣನತ್ತ ನೋಡಿದ. ಅವನ ಕಣ್ಣುಗಳಲ್ಲಿ ನೀರು ತುಂಬಿತ್ತು. ಮುದುಕ ಸಾರಂಗಿವಾಲಾ ಬಂಗಲೆಯ ಕಡೆಗೆ ನಡೆದು ಬರುತ್ತಿದ್ದ. ಆ ಮುದುಕನನ್ನು ತಿರುಗಿ ಕಳಿಸುವುದು ನಿಲಂಗೆ ಸರಿಕಾಣಲಿಲ್ಲ. ಆದರೆ ಅಣ್ಣನ ಕಠೋರ ಸ್ವಭಾವವನ್ನಾತ ಬಲ್ಲವನಾಗಿದ್ದ.

ಹಿರಿಯ ಮಗನ ಧ್ವನಿ ಕೇಳಿ ಮುದುಕಿಯಾದ ದಾದಿ ಒಳಗಿನಿಂದ ಬಂದು ಗಟ್ಟಿಯಾಗಿ, '' ಮುದುಕ ಸಾರಂಗಿವಾಲಾ ಬರುತ್ತಿದ್ದರೆ ಬರಲಿ ಬಿಡು," ಎಂದಳು.

" ಬರಲಿ ಬಿಡು ! ಬಂದಿದ್ದಾಳೆ ಲಕ್ಷಾಧೀಶನ ರಾಣಿ ಹೇಳಲಿಕ್ಕೆ. ೫೦ ರೂಪಾಯಿಯ ಗಂಟು ಗಿಡದಲ್ಲಿ ಬೆಳೆಯುವುದಿಲ್ಲ. ಅಪ್ಪ, ಐದಲ್ಲ, ಹತ್ತಲ್ಲ, ೫೦ ರೂಪಾಯಿಗಳನ್ನು ಕೊಡುತ್ತಿದ್ದರು. ಈ ಮುದಿಗೂಬೆ ಇಷ್ಟು ಹಣ ಸಿಗುತ್ತಿರುವಾಗ ಏಕೆ ಬಿಟ್ಟಾನು ? ಎಲ್ಲರೂ ಶುದ್ಧ ಉಂಡಾಡಿಗಳು ! " ಎಂದ ಹಿರಿಯ ಮಗ.

" ಆದರೆ ಆತ ಬರುವುದು ಇದೇ ಕಡೆಯದು, ಇನ್ನೇಕೆ ಇಲ್ಲಿಗೆ ಬಂದಾನು ? "

"ಆದರೆ ಹಣ ? ಹಣ ನೀನು ಕೊಡುತ್ತೀಯಾ ? "

ಮುದುಕಿ ದಾದಿ ತುಸು ಹೊತ್ತು ಮೌನವಾಗಿದ್ದು ಬಳಿಕ ಒಮ್ಮೆಲೇ, " ನಾನು ಕೊಡುವುದಿಲ್ಲ. ನೀನೂ ಕೊಡುವುದಿಲ್ಲ. ಜಮೀನುದಾರರು ಸಾಯುವಾಗ ನನ್ನ ಹತ್ತರ ಕೊಟ್ಟು ಹೋಗಿದ್ದಾರೆ,'' ಎಂದಳು.

''ಏನಂದಿ ? ''

'' ಹೌದು. ರೂಪಾಯಿಗಳನ್ನು ಕೊಟ್ಟಿದ್ದಾರೆ. ಮತ್ತು ಕೊಡುವುದು ಇದೇ ಕೊನೆಯ ಸಲವೆಂದು ಹೇಳಿದ್ದಾರೆ. ಕುರುಡ ಗವಯಿಗೆ ಕೊಟ್ಟು ಪುನಃ ಬರಲಾಗದೆಂದು ತಿಳಿಸಲು ಹೇಳಿದ್ದಾರೆ. ಈ ಮಾತುಗಳನ್ನು ಹೇಳುವಾಗ ಅವರ ಕಣ್ಣುಗಳಲ್ಲಿ ನೀರು ಬಂದಿತು. ''

'' ಆದರೆ ನೀನು ಕುರುಡಿ. ನಿನಗೆ ಅವರ ಕಣ್ಣುಗಳಲ್ಲಿ ನೀರು ಬಂದದ್ದು ಕಂಡಿತೆಂದರೆ ಆಶ್ಚರ್ಯದ ಮಾತೇ ಸರಿ. "

"ಕಣ್ಣಿಲ್ಲದವರಿಗೆ ಸುತ್ತಲಿನ ಹವೆಯೇ ಕಣ್ಣಾಗುತ್ತದೆ. ಜಮೀನುದಾರರ ಕಣ್ಣೀರನ್ನು ನಾನು ನೋಡಿರಲಿಲ್ಲವಾದರೂ ಅವರ ಕಣ್ಣಲ್ಲಿ ನೀರಿತ್ತೆಂಬುದು ಖಂಡಿತ. ಕಣ್ಣೀರನ್ನು ನಾನು ಕಂಡಿರದಿದ್ದರೂ ಗುರುತಿಸಿದ್ದೆ."

ಅಷ್ಟರಲ್ಲಿ, "ನಾನು ನೋಡಿದ್ದೆ ಅಣ್ಣಾ" ಎಂದು ನೀಲಂ ಹೇಳಿದ.

"ನೀವಿಬ್ಬರೂ ಒಂದಾಗಿದ್ದೀರಿ. ಆದರೆ ನೋಡಿರಿ, ಈ ಸಲ ಈ ಕುರುಡನಿಗೆ ಹಣ ಕೊಡುವ ಜವಾಬ್ದಾರಿ ನಿಮ್ಮದು. ಇನ್ನು ಮುಂದೆ ಆತ ಇಲ್ಲಿಗೆ ಬರಬಾರದು. ಬಂದು ಆತ ಹೊರಗೆ ಹಾಕಿಸಿಕೊಳ್ಳದಂತೆ ನೋಡಿಕೊಳ್ಳುವ ಹೊಣೆ ನಿಮ್ಮದು," ಹಿರಿಯ ಮಗನೆಂದ.

ಆಗ ಕುರುಡಿ ದಾದಿ "ಒಂದು ಹೊಣೆಯನ್ನಂತೂ ನಾವು ಹೊತ್ತಿದ್ದೇವೆ. ಆದರೆ ಎರಡನೆಯ ಹೊಣೆಯನ್ನು ನಾವು ಹೊರಲಾರೆವು" ಎಂದಳು.

"ಹಾಗಾದರೆ ನೀಲಂ, ಓಡು. ಆ ಮುದುಕನನ್ನು ಹೊರಗಿಂದ ಹೊರಗೇ ಕಳಿಸಿಬಿಡು. ಒಂದೆಂಟು ದಿನ ವಿಶ್ರಾಂತಿಗೆಂದು ಇಲ್ಲಿ ಬಂದರೆ ದಿನವೂ ಒಂದಿಲ್ಲೊಂದು ಇಂಥ ಉಪಟಳ ತಪ್ಪುವುದಿಲ್ಲ. ಅಪ್ಪ ಸತ್ತರು, ಅವರೊಂದಿಗೇ ಇಂಥ ಹುಚ್ಚಾಟವೆಲ್ಲ ಮುಗಿಯಿತು. ನನಗೆ ಇದೆಲ್ಲ ಸೇರುವುದಿಲ್ಲ."

"ಆದರೆ ನನಗೆ ಸೇರುತ್ತದಲ್ಲ!" ಅಕಸ್ಮಾತ್ತಾಗಿ ನೀಲಂನ ಮುಖದಿಂದ ನಿರ್ಧಾರದ ಶಬ್ದಗಳು ಹೊರಬಿದ್ದವು. ಆದರೆ ಕೂಡಲೆ ಅವನಿಗೆ ತಾನು ಈ ಮಾತುಗಳನ್ನು ಆಡದಿದ್ದರೆ ಚೆನ್ನಾಗಿತ್ತು ಎಂದೆನಿಸಿತು. ಈಗ ಉಪಾಯವಿರಲಿಲ್ಲ. ಮಾತುಗಳು ಹೊರಬಿದ್ದುಬಿಟ್ಟಿದ್ದವು. ನೀಲಂನ ಮಾತು ಕೇಳಿ ಮುದುಕಿ ದಾದಿ ಕೂಡ ನಡುಗಿದಳು. ಹಿರಿಯ ಮಗನ ಉಗ್ರ ಕೋಪದ ಶಾಸನಪ್ರಿಯ ಸ್ವಭಾವ ಅವಳಿಗೆ ಗೊತ್ತಿತ್ತು. ಅವನ ಆಜ್ಞೆಯನ್ನು ಪಾಲಿಸುವುದು ಅನಿವಾರ್ಯವಾಗಿರುತ್ತಿತ್ತು. ನೀಲಂನಲ್ಲಿ ಹಣ ಗಳಿಸುವ ಸಾಮರ್ಥ್ಯವಿರಲಿಲ್ಲ. ಆತ ಸಂಪೂರ್ಣವಾಗಿ ಅಣ್ಣನ ಆಶ್ರಯದಲ್ಲಿದ್ದ. ಹೀಗಿದ್ದು ಇಂಥ ಮಾತಾಡುವುದೆಂದರೆ? ಎಲ್ಲಿಯಾದರೂ ನೀಲಂನನ್ನು ಮನೆ ಬಿಟ್ಟು ಹೊರಗೆ ಹಾಕಿದರೆ ಏನು ಗತಿ ಎಂದು ಹೆದರಿದ ದಾದಿ ಮೆಲ್ಲಗೆ ನೀಲಂನ ಬಳಿ ಸರಿದು ಅವನ ಹೆಗಲ ಮೇಲೆ ಕೈಯಿಟ್ಟಳು. "ಇದು ಹೀಗೆ ಮಾತಾಡುವ ಸಮಯವಲ್ಲ" ಎಂದು ಅವಳ ಸೋಂಕು ಸೂಚಿಸಿತು. ನೀಲಂಗೆ ಸ್ಪರ್ಶದ ಭಾಷೆ ಅರ್ಥವಾಯಿತು.

"ಸರಿ. ಎರಡನೆಯ ಹೊಣೆಯೂ ನಮ್ಮದಾಗಿರಲಿ," ಎಂದ ನೀಲಂ.

"ಹಂ! ನೀನೇನೂ ಇನ್ನು ಚಿಕ್ಕ ಮಗುವಲ್ಲ. ಎಲ್ಲ ನಿನಗೆ ತಿಳಿಯಬೇಕು" ಎಂದು ಹಿರಿಯ ಮಗ ಹೊರಗೆ ಹೋದ.

ತುಸು ಹೊತ್ತಿನ ಮೇಲೆ ಆತ ಮತ್ತೆ ಒಳಗೆ ಬಂದಾಗ ಈ ಕುರುಡ ಗವಯಿ ಒಳ್ಳೆಯ ಸಂಗೀತಗಾರ ಎಂದು ಅವನಿಗೆ ಅನಿಸಿತು. ಅವನಿಗೆ ಸಂಗೀತದ ಜ್ಞಾನ ಎಳ್ಳಷ್ಟೂ ಇರಲಿಲ್ಲ. ಈಗಲೂ ಅವನಿಗೆ ಏನೂ ತಿಳಿಯಲಿಲ್ಲ. ಆದರೆ ಹೊರಗಿನ ಹವೆಗೂ ಒಳಗಿನ ಹವೆಗೂ ಏನೋ ಅಂತರವಿದೆಯೆಂದು ಮಾತ್ರ ಅವನಿಗೆ ತೋರಿತು. ಆತ ತುಸು ಹೊತ್ತು ಅಲ್ಲಿ ಕೇಳುತ್ತ ನಿಂತ. ಈ ಕುರುಡ ಗಾಯಕ ತನ್ನ ಹಿಂದಿನ ದಿನಗಳ ಕರುಣ ಸ್ಮೃತಿಯನ್ನು ತನ್ನ ಸಂಗೀತದಲ್ಲಿ ಜಾಗೃತಗೊಳಿಸುತ್ತಿದ್ದಾನೆ, ಎಲ್ಲವನ್ನು ತನ್ನ ಸ್ವರ್ಗಸ್ಥ ತಂದೆಗೆ ನಿವೇದಿಸುತ್ತಿದ್ದಾನೆ ಎಂದು ಅವನಿಗೆ ಭಾಸವಾಯಿತು. ನೀಲಂ ತಂದೆಯ ಖರ್ಚಿಯಲ್ಲಿ ಕುಳಿತಿದ್ದ. ಅವನು ನಡುನಡುವೆ "ವ್ಹಾ! ಭೇಷ್!" ಎಂದು ಗಾಯಕನನ್ನು ಹುರಿದುಂಬಿಸುತ್ತಿದ್ದ. ನೀಲಂನ ಧ್ವನಿ ತನ್ನ ತಂದೆಯ ಧ್ವನಿಯಂತೆಯೇ ಇದೆ, ಏನೇನೂ ವ್ಯತ್ಯಾಸವಿಲ್ಲ ಎಂಬುದನ್ನು ಕಂಡು ಹಿರಿಯ ಮಗ ಆಶ್ಚರ್ಯಪಟ್ಟ.

ಇಂದು ಜಮೀನುದಾರ ಸಾಹೇಬರು ತುಂಬ

ಖುಷಿಯಲ್ಲಿದ್ದಾರೆಂದು ಭಾವಿಸಿದ್ದ ಕುರುಡ ಗಾಯಕ ಆವೇಶದಿಂದ ಹಾಡತೊಡಗಿದ್ದ.

ಗಾಯನ ಮುಗಿಯಿತು. ಜಮೀನುದಾರನ ಸ್ವರದಲ್ಲಿಯೇ ನೀಲಂ "ವ್ಹಾ! ಖಾನಸಾಹೇಬ, ಭೇಷ್! ನೀವು ಒಂದು ಅದ್ಭುತ ಜಗತ್ತನ್ನೇ ಇಂದು ಸೃಷ್ಟಿಸಿದಿರಿ. ನಿಮ್ಮ ಗಾಯನವನ್ನು ಕೇಳಲು ಗಾಳಿ ಕೂಡ ಒಂದರ್ಧ ತಾಸು ನಿಶ್ಚಲವಾಗಿ ನಿಂತಿತ್ತು" ಎಂದ.

ನೀಲಂನ ಮಾತು ಕೇಳಿ ಕುರುಡ ಗಾಯಕ ವಿನಯದಿಂದ ಸಲಾಮು ಮಾಡಿದ; ಸಂತೋಷ ಭರದಲ್ಲಿ ಒಮ್ಮೆಯಲ್ಲ, ಮೂರು ಸಲ ಸಲಾಮು ಮಾಡಿದ. ಅವನಿಗೆ ಹಿಂದಿನ ದಿನಗಳ ನೆನಪು ಬಂದಿತ್ತು. ಆತ ಸಾರಂಗಿಯನ್ನು ಜಮೀನುದಾರನಿಗೆ ಅರ್ಪಿಸುವವನಂತೆ ನೀಲಂನ ಕಾಲ ಬಳಿ ಇಟ್ಟು ಮತ್ತೊಮ್ಮೆ ಸಲಾಮು ಮಾಡಿ ಸಾರಂಗಿಯನ್ನು ಅದರ ಚೀಲದಲ್ಲಿ ಸೇರಿಸತೊಡಗಿದ.

ಇಷ್ಟರಲ್ಲಿ ಹಿರಿಯ ಮಗನ ಮನಸ್ಸು ಉದ್ವಿಗ್ನವಾಗತೊಡಗಿತ್ತು. ಪರರ ಧ್ವನಿಯನ್ನು ನಕಲು ಮಾಡುವ ನೀಲಂನ ಕಲೆ ಕುರುಡ ಗಾಯಕನನ್ನು ವಂಚಿಸಿದ್ದನ್ನೂ ಅವನು ಕಂಡಿದ್ದ. ಪರಊರಿಗೆ ಹೋಗಿದ್ದ ಕುರುಡ ಗಾಯಕನಿಗೆ ಜಮೀನುದಾರನ ಮರಣದ ವಿಷಯ ತಿಳಿದಿರಲಿಲ್ಲ. ಅವನಿಗೆ ಗೊತ್ತಾಗದಿರಲಿ, ಎಂದು ನೀಲಂ ಜಮೀನುದಾರನ ಧ್ವನಿಯಲ್ಲಿಯೇ ಮಾತನಾಡಿದ್ದ.

ಆದರೆ ಹಿರಿಯ ಮಗ ಆಶ್ಚರ್ಯದಲ್ಲಿ ಮುಳುಗಿ ವಸ್ತುಸ್ಥಿತಿಯನ್ನು ಮರೆಯುವವನಾಗಿರಲಿಲ್ಲ. ಜೀವದಿಂದಿರುವವರೆಗೂ ಗಾಯಕ ಹೀಗೆಯೇ ಬರುತ್ತಿರಲಿ ಎಂದು ನೀಲಂನ ಬಯಕೆಯಾಗಿತ್ತು. ಬದುಕಿದರೂ ಇನ್ನೆಷ್ಟು ವರ್ಷ ಈ ಮುದುಕ ಬದುಕಿಯಾನು? ಕೆಲವೇ ವರ್ಷಗಳ ಸಲುವಾಗಿ ಜೀವನದ ರಸದಲ್ಲಿ ವಿಷ ಬೆರೆಸುವುದು ಅವನಿಗೆ ಸರಿದೋರಲಿಲ್ಲ. ಮುದುಕಿ ದಾದಿಯ ಅಭಿಪ್ರಾಯವೂ ಇದೇ ಆಗಿತ್ತು. ಜಮೀನುದಾರನ ಪುಣ್ಯತಿಥಿಯ ದಿನ ಗಾಯಕ ಬಂದು ತನ್ನ ಶ್ರದ್ಧಾಂಜಲಿಯನ್ನರ್ಪಿಸಿ ಹೋಗಲಿ ಎಂದು ಅವಳು ಬಯಸುತ್ತಿದ್ದಳು. ಆದರೆ ಇದರಿಂದ ಲಾಭವೇನು ಎಂದು ಹಿರಿಯ ಮಗ ಕೇಳಿದರೆ ಸಮರ್ಪಕ ಉತ್ತರ ಕೊಡುವ ಚೈತನ್ಯ ಅವರಿಬ್ಬರಿಗೂ ಇರಲಿಲ್ಲ.

ಅವರಿಬ್ಬರೂ ಕಲ್ಲಿನ ಗೊಂಬೆಗಳಂತೆ ನಿಂತಿದ್ದರು.

ಹಿರಿಯ ಮಗ ಮುಂದೆ ಬಂದ. ಗಾಯಕನ ಕೈಯಲ್ಲಿ ರೂಪಾಯಿಗಳನ್ನಿಟ್ಟು ದೃಢ ಸ್ವರದಲ್ಲಿ ಹೇಳಿದ: "ಖಾನ ಸಾಹೇಬ, ಬಹಳ ಕೌಶಲ್ಯ ತೋರಿಸಿದಿರಿ. ಆದರೆ ನಿಮಗೆ ಒಂದು ಮಾತು ತಿಳಿದಿರಬೇಕು."

"ಏನು ತಿಳಿಯಬೇಕು ಹುಜೂರ್?"

"ಜಮೀನುದಾರರು. . . ."

ನೀಲಂ ಬಾಯಿಮೇಲೆ ಬೆರಳಿಟ್ಟು ಕೈಮುಗಿದು ಸುಮ್ಮನಿರುವಂತೆ ಅಣ್ಣನಿಗೆ ಅಂಗಲಾಚಿದ. ಆದರೆ ಹಿರಿಯ ಮಗ ಕೇಳದೆ "ಜಮೀನುದಾರರು ಹೋಗಿಬಿಟ್ಟರು" ಎಂದ.

"ಹೋದರು? ಎಲ್ಲಿಗೆ ಹೋದರು? ಇದೀಗ ಮಾತಾಡುತ್ತಿದ್ದರಲ್ಲ!"

"ಮಾತಾಡುತ್ತಿದ್ದವನು ನೀಲಂ. ಜಮೀನುದಾರರು ಸ್ವರ್ಗಸ್ಥರಾಗಿದ್ದಾರೆ."

"ಅಂ! ಸ್ವರ್ಗಸರಾದರೆ? ಅಂ! ಎಂದು? ಯಾವಾಗ? ನಾನು ಸುಮ್ಮನೆ. . ." ಕುರುಡ ಗಾಯಕನ ದನಿ ಕಂಪಿಸುತ್ತಿತ್ತು.

"ಹೋದರೆ? ಜಮೀನುದಾರರು ಸ್ವರ್ಗಸ್ಥರಾದರೆ? ಹಾಗಾದರೆ ನಾನು ಯಾರ ಸಲುವಾಗಿ ಹಾಡಿದೆ? ಬಾರಿಸಿದೆ? ತೆಗೆದುಕೊಳ್ಳಿ. ನಾನಿನ್ನು ಹುಜೂರ್. . ." ಗಾಯಕ ವಾಕ್ಯವನ್ನು ಪೂರ್ಣ ಮಾಡಲಾರದೆ ಹೋದ. ಕೈಯೊಳಗಿನ ನೋಟುಗಳನ್ನು ನೆಲದ ಮೇಲಿಟ್ಟ.

"ಆದರೆ ಇದೊಂದು ಸಲ ತೆಗೆದುಕೊಂಡು ಹೋಗಿರಿ ಉಸ್ತಾದಜಿ. ಇನ್ನು ಪುನಃ ನೀವೆಲ್ಲಿ ಇಲ್ಲಿಗೆ ಬರುತ್ತೀರಿ?"

" ಇಲ್ಲ ಹುಜೂರ್, ನಿಮ್ಮ ತಿಳಿವಳಿಕೆ ತಪ್ಪಾಗಿದೆ. ಇದು ಕೊಡತೆಗೆದುಕೊಳ್ಳುವ ಮಾತಲ್ಲ. ಜಮೀನುದಾರ ಸಾಹೇಬರ ಕೈಯಿಂದ ಹೊರತು ಮತ್ತಾರ ಕೈಯಿಂದಲೂ ನಾನು ಹಣ ತೆಗೆದುಕೊಳ್ಳಲಾರೆ. ನಾನೇನೂ ಈಗ ಗವಯಿ ವೃತ್ತಿಯಲ್ಲಿಲ್ಲ. ತೆಗೆದುಕೊಳ್ಳಿ ಈ ರೂಪಾಯಿಗಳನ್ನು. "

ಹಿರಿಯ ಮಗ ನೋಡುತ್ತಿದ್ದಂತೆಯೆ ಕುರುಡ ಗಾಯಕ ಹೊರಟುಹೋದ. ಹಿರಿಯ ಮಗ ಏನೂ ಮಾತಾಡಲಿಲ್ಲ. ಮಾತಾಡಲು ಅವನಿಂದ ಆಗಲೂ ಇಲ್ಲ. ಎಷ್ಟೋ ಸಲ ಇದೇ ರೀತಿ ಮಾತನಾಡಲು ಬಾಯಿ ಏಳದೇ ಹೋಗುವುದುಂಟು.

ಜಮೀನುದಾರನ ಪುಣ್ಯತಿಥಿಗೆಂದು ಹಿರಿಯ ಮಗ ಬಂದಿದ್ದ. ಸುಮ್ಮನೆ ಕುಳಿತಿದ್ದಾನೆಂದು ಆಗಬಾರದೆಂದು ಅತ್ತಿತ್ತ ಅಡ್ಡಾಡುತ್ತಿದ್ದ. ನೀಲಂ ಮತ್ತು ದಾದಿ ಕಲ್ಲಿನಂತೆ ಒಂದೆಡೆ ನಿಂತಿದ್ದರು. ಜಮೀನುದಾರನಿಗೆ ಅತ್ಯಂತ ಪ್ರಿಯವಾದದ್ದನ್ನು ಬಿಟ್ಟು ಉಳಿದದ್ದೆಲ್ಲವೂ ಅಲ್ಲಿ ನಡೆಯುತ್ತಿತ್ತು.

ತಮ್ಮ ಹೃದಯದಲ್ಲಿದ್ದ ಅಪಾರ ದುಃಖವನ್ನು ವ್ಯಕ್ತಪಡಿಸುವ ಶಕ್ತಿ ಅವರಿಬ್ಬರಲ್ಲೂ ಇರಲಿಲ್ಲ.

ಒಂಭತ್ತೂವರೆ ಗಂಟೆಯಾಯಿತು. ಕುರುಡ ಗಾಯಕ ಬರುತ್ತಿರುವುದು ಕಾಣಿಸಿತು.

ಹಿರಿಯ ಮಗ ಅಸ್ವಸ್ಥನಾದ. ಆದರೆ ಅವನಿಗೆ ಕುರುಡ ಗಾಯಕ ಹಿಂದಿನ ಸಲ ರೂಪಾಯಿಗಳನ್ನು ತೆಗೆದುಕೊಳ್ಳದಿದ್ದುದು ನೆನಪಾಗಿ ಸಮಾಧಾನವೆನಿಸಿತು.

ಕುರುಡ ಗಾಯಕನಿಗೆ ಬಂಗಲೆಯೊಳಗೆ ಬರಲು ಅಣ್ಣ ಬಿಡುತ್ತಾನೋ ಇಲ್ಲವೊ ಎಂದು ವಿಚಾರಮಾಡುತ್ತ ನೀಲಂ ನಿಂತಿದ್ದ. ಆತ ದಾದಿಯ ಬಳಿಗೆ ಹೋಗಿ ಅವಳ ಹೆಗಲ ಮೇಲೆ ಕೈ ಇಟ್ಟ. ಅವಳು ಮೆಲ್ಲಗೆ, " ಏನು ನೀಲಂ, ಕುರುಡ ಗಾಯಕ ಬಂದಿರುವನೇ ? " ಎಂದು ಕೇಳಿದಳು.

'' ಹೌದು. ಅಣ್ಣ ಗೊಂದಲದಲ್ಲಿ ಬಿದ್ದಿದ್ದಾನೆ. ''

ನೀಲಂ ಇಷ್ಟು ಹೇಳುವಷ್ಟರಲ್ಲಿ ಗಾಯಕ ಅಲ್ಲಿಗೆ ಬಂದುಬಿಟ್ಟ.

ಗಾಯಕ ಜಮೀನುದಾರನೇ ಅಲ್ಲಿ ಕುಳಿತಿದ್ದಾನೆಂಬಂತೆ ಸಲಾಮು ಮಾಡಿದ. ಎಂದಿನಂತೆ ಕುಳಿತುಕೊಂಡು ಸಾರಂಗಿಯನ್ನು ಹೊರತೆಗೆದು "ಖರಮಾಯಿಯೇ ಜನಾಬ" ಎಂದ. ಬಳಿಕ ಜಮೀನುದಾರನಿಗೆ ಅತ್ಯಂತ ಪ್ರಿಯವಾದ ಹಾಡನ್ನು ಅನ್ನತೊಡಗಿದ.

ಹಾಡು ಮುಗಿದ ಬಳಿಕ ಎದ್ದು ಜಮೀನುದಾರನ ಆಜ್ಞೆಯನ್ನು ಕೇಳುತ್ತಿರುವವನಂತೆ ನಿಂತುಕೊಂಡ.

" ಹುಜೂರ್, ನಾನಿನ್ನು ಪ್ರತಿ ವರ್ಷ ತಮ್ಮ ಪುಣ್ಯತಿಥಿಯ ದಿನ ಬರುತ್ತೇನೆ. ನನ್ನ ಸೇವೆ ಒಪ್ಪಿಗೆಯಲ್ಲವೆ? " ಎಂದು ಗಾಯಕ " ಹೌದು ಒಪ್ಪಿಗೆಯಿದೆ " ಎಂಬ ಉತ್ತರ ಪಡೆದವನಂತೆ ಯಾರೊಂದಿಗೂ ಏನೂ ಮಾತಾಡದೆ ಬಂದಂತೆಯೇ ಹೊರಟುಹೋದ.

" ಹುಚ್ಚನೇ ಸರಿ " ಎಂದ ಹಿರಿಯ ಮಗ.

" ಅಲ್ಲ, ಹಳೆಯ ಕಾಲದ ಒಂದು ಅಮೂಲ್ಯ ರತ್ನ " ಎಂದ ನೀಲಂ.

'' ಅವರವರ ದೃಷ್ಟಿ ಅವರವರ ಸೃಷ್ಟಿ! '' ಎಂದಳು ದಾದಿ.

---

## ಸಂಗೀತ

ಶಿಶು ಬಲ್ಲುದು, ಪಶು ಬಲ್ಲುದು,
ಸಂಗೀತದ ಸವಿ ಹಾವು ಬಲ್ಲುದು.

—ಸಂಸ್ಕೃತ ಸುಭಾಷಿತ

# ಇದುವೆ ಜೀವ, ಇದು ಜೀವನ

ಜೂನ್ ೨ ರಂದು ಪುನಾ ಕೇಂದ್ರದಿಂದ ಎಸ್. ಎಸ್. ಸಿ. ಪರೀಕ್ಷೆಯ ಪರಿಣಾಮ ತಿಳಿದುಬಂದಿತು. ಮುಂಜಾನೆ ೪॥ಯಿಂದ ಸ್ಥಾನಿಕ ವೃತ್ತಪತ್ರಿಕೆಗಳ ಸ್ಪೆಶಲ್ ಆವೃತ್ತಿಗಳು ಬಿಸಿಬಿಸಿಯಾಗಿ ಮಾರಾಟವಾಗಲಾರಂಭಿಸಿದ್ದವು.

ಹವೆ ಆಲ್ಹಾದಕರವಾಗಿತ್ತು. ನಡು-ನಡುವೆ ಮೋಡಗಳ ದೊಡ್ಡದೊಡ್ಡ ತಂಡಗಳು ಸೂರ್ಯನನ್ನು ಮರೆಮಾಡುತ್ತಲಿದ್ದವು. ಮುಂಜಾನೆ ೬ ಗಂಟೆಗೆ ನಾನು ನಮ್ಮ ಮನೆಯ ಹತ್ತಿರದಲ್ಲಿಯೇ ಪಸರಿಸಿರುವ ಬಯಲಿನಲ್ಲಿ ತಿರುಗಾಡುತ್ತ ಹೋದೆನು.

ಏಕಾಂತದಲ್ಲಿದ್ದಾಗ ಯಾರು ಶಾಂತ ಮತ್ತು ಗಂಭೀರವಾಗಿರುವದಿಲ್ಲ ? ಹೀಗೆಯೇ ೧೦-೧೫ ಮಿನಿಟು ನಡೆಯುತ್ತಿದ್ದಿರಬಹುದು ; ಪಕ್ಕದ ಒಂದು ಕಾಲುಹಾದಿಗುಂಟ ಬರುತ್ತಲಿದ್ದ ಒಬ್ಬ ಗೃಹಸ್ಥರು ಕೈ ಮಾಡಿ 'ನಿಲ್ಲು' ಎಂದು ಮರಾಠಿಯಲ್ಲಿ ಕೂಗಿದರು.

ನನ್ನ ಹತ್ತಿರ ಬಂದವರೇ ಅವರು ನನ್ನ ತಲೆಯ ಮೇಲೆ ತುಂಬಿತುಳುಕುವ ವಾತ್ಸಲ್ಯದಿಂದ ಕೈಯೆಳೆಯುತ್ತ, "ತಮ್ಮಾ, ಧೈರ್ಯವಂತನಾಗು. ಪ್ರಪಂಚದಲ್ಲಿ ಕಷ್ಟಸುಖಗಳು ಒಂದರ ಹಿಂದೊಂದು ಸಮುದ್ರದ ತೆರೆಗಳಂತೆ ಒಂದೇಸಮನೆ ಅಪ್ಪಳಿಸುತ್ತಿರುತ್ತವೆ. ಈ ಭಯಂಕರವಾದ ಭವಸಾಗರದಲ್ಲಿ ಧೈರ್ಯಗೆಡದಿರುವವನೇ ಧನ್ಯನು. ನೀನೆಂದೂ ಶೋಕಾಕುಲನಾಗಬೇಡ'' ಎಂದು ಮುಂತಾಗಿ ದೊಡ್ಡದೊಂದು ಭಾಷಣವನ್ನಿತ್ತರು. ನನಗೆ ದಿಗ್ಭ್ರಮೆಯೆನಿಸಿದರೂ ಮೆಲ್ಲಗೆ ಅವರ ಮಾತುಗಳನ್ನು ಕೇಳುತ್ತ ನಡೆದೆನು. ಆ ದೊಡ್ಡಹೊಟ್ಟೆ, ಭವ್ಯವಾದ ಮುಖ, ವಿಶಾಲಕೋನಮಾಡಿದ ಬಿಳಿಯ ಜೊಂಡುಮೀಸೆ, ವೈರಾಗ್ಯ ತುಂಬಿ ತುಳುಕುವ ಶಬ್ದಸಂಪತ್ತು ಇವುಗಳನ್ನೆಲ್ಲ ಕಂಡು, ಕೇಳಿ, ಸ್ವಲ್ಪ ನಗು ಬಂದರೂ ಬಿಗಿಯಾಗಿ ಗಂಭೀರವಾಗಿದ್ದುಕೊಂಡೆನು. ಆದರೆ ಆ ಅಸ್ಖಲಿತ ವಾಕ್ಪ್ರವಾಹಕ್ಕೆ ಅಂತ್ಯವಿದ್ದೀತೇನೆಂಬ ಸಂಶಯ ನನಗೆ ಬಂತು. ಆದ್ದರಿಂದ ಅವರು ಶ್ವಾಸತೆಗೆದುಕೊಂಡು ಮತ್ತೆ ಪ್ರಾರಂಭಿಸುವಷ್ಟರಲ್ಲಿಯೇ ನಾನು ಕೇಳಿದೆ "ನೀವು ಹೀಗೆಲ್ಲ ಯಾಕೆ ಹೇಳುತ್ತಿದ್ದೀರಿ ? ಏನಾಗಿದೆ ? ನನಗಂತೂ ನಿಮ್ಮ ಗುರುತು ಇಲ್ಲವಲ್ಲ ! ''

ಸಂವಾದ ಮರಾಠಿಯಲ್ಲಿಯೆ ಸಾಗಿತು.

'' ಅಯ್ಯೋ ಹುಚ್ಚಾ,'' ಅವರು ಭವ್ಯವಾಣಿಯಲ್ಲುಸುರಿದರು. '' ನನಗೆ ಅಷ್ಟೂ ಗೊತ್ತಾಗುವದಿಲ್ಲವೆ? ಇವತ್ತು ಎಸ್.ಎಸ್.ಸಿ. ಪರೀಕ್ಷೆಯ ಪರಿಣಾಮ. ನಿನ್ನ ಹೆಸರು ಪೇಪರಿನಲ್ಲಿಲ್ಲವೆಂದು ದುಃಖಪಡುತ್ತಿದೀಯ. ಆದ್ದರಿಂದಲೇ ಹೀಗೆ ಏಕಾಕಿಯಾಗಿ ಇತ್ತ ಬಂದಿರುತ್ತೀ. ದುಃಖಿಯನ್ನು ಸಂತೈಸಲು ಆಪ್ತೇಷ್ಟರೇ ಬೇಕೆಂದಿಲ್ಲ. ಆದರಲ್ಲಿಯೂ ಹುಡುಗರ ದುಃಖದಲ್ಲಿ ಅವರನ್ನು ಯಾರಾದರೂ ಸಂತೈಸಲೇಬೇಕು. ''

ನಾನು ಅವರತ್ತ ನೋಡುತ್ತ, '' ಹೂಂ ನಾನೇನೋ ಎಸ್. ಎಸ್. ಸಿ. ವಿದ್ಯಾರ್ಥಿ ; ಅದು ನಿಜ. ಆದರೆ ನನ್ನದಿನ್ನೂ ಪರಿಣಾಮ ಪ್ರಕಟವಾಗಿಲ್ಲ. ''

'' ಹೇಗಾದೀತದು ? ಮೊದಲು ಚೆನ್ನಾಗಿ ಅಭ್ಯಾಸ ಮಾಡಿದ್ದರೆ ಈಗ ದುಃಖಪಡುವ ಕಾರಣವಿದ್ದಿಲ್ಲ. ನಿನ್ನ ಮುಖ ನೋಡಿದ

ರೇನೆ ಗೊತ್ತಾಗುತ್ತದೆ, ಏನಾಗಿದೆಯೆಂದು. ಅದಕ್ಕೆಂದೇ ನಾನು ಸಂತೈಸುತ್ತಿರುವದು. ''

'' ರಾಯರೇ, ಹಾಗಲ್ಲ. ನಾನು ಪುನಾ ಕೇಂದ್ರದ ಪರೀಕ್ಷೆಗೆ ಕುಳಿತಿರದೆ ಮೈಸೂರ ಕೇಂದ್ರಕ್ಕೆ ಕುಳಿತಿದ್ದೇನೆ. ಅದರ ಪರಿಣಾಮ ■ ನೇ ತಾರೀಖಿಗೆ ಪ್ರಕಟವಾಗುವದು. ''

ಮಹಾನುಭಾವರು ನನ್ನನ್ನು ಕೊಂಚಕಾಲ ದುರುಗುಟ್ಟಿಕೊಂಡು ನೋಡಿದರು. ಆಮೇಲೆ, '' ಕ್ಷಮಿಸು, ನನ್ನದು ತಪ್ಪು ತಿಳಿವಳಿಕೆ ಯಾಯಿತು, '' ಎಂದು, ಮತ್ತೊಂದು ದಾರಿ ಹಿಡಿದು ಹೋದರು. ಆ ಗೃಹಸ್ಥರ ಬೆನ್ನನ್ನೇ ನೋಡುತ್ತ, ''ಮನುಷ್ಯ ಒಳ್ಳೆಯವ; ಆದರೆ ಪಾಪ! ಮನೆಯಲ್ಲಿ ಏನೋ ತೊಂದರೆಯಿದ್ದಿರಬೇಕು '' ಅಂದುಕೊಂಡೆ.

— ಎಂ. ವ್ಹಿ. ಧಾರೇಶ್ವರ

ಅಂದು ನಾನು ಮಧ್ಯಮಾ ಪರೀಕ್ಷೆಯ ಒಂದು ಪಠ್ಯಪುಸ್ತಕ ಕೊಳ್ಳಲು ಹೊರಟದ್ದೆ. ಸುಮ್ಮನೆ ಪೂರ್ಣ ಬೆಲೆ ಕೊಟ್ಟು ಕೊಂಡು ಕೊಳ್ಳುವುದೇಕೆಂದು ಮಧ್ಯಮಾ ಮುಗಿಸಿದ ಒಬ್ಬ ವಿದ್ಯಾರ್ಥಿಯ ಹತ್ತಿರ ಅದು ಇದೆಯೆಂದು ಕೇಳಿ ಅವನನ್ನು ಹುಡುಕುತ್ತ ಅವನ ಶಾಲೆಗೆ ಹೋದೆ. ಆ ಪುಸ್ತಕ ಅವನಲ್ಲಿತ್ತಾದರೂ ಅದನ್ನು ಅವನು ಮನೆಯಲ್ಲಿ ಬಿಟ್ಟು ಬಂದಿದ್ದ. ಅದರ ಮೂಲ ಬೆಲೆಯೂ ಅವನಿಗೆ ಜ್ಞಾಪಕವಿದ್ದಿಲ್ಲ. ಆದರೆ ಪುಸ್ತಕದ ಮೂಲ ಬೆಲೆಯ ೩/೪ ಬೆಲೆ ಕೊಟ್ಟರೆ ಮಾತ್ರ ಅದನ್ನು ಕೊಡುವುದಾಗಿ ಅವನು ಖಡಾ ಖಂಡಿತ ಹೇಳಿದ. ನನಗೆ ಇದು ಬಹಳ ಹೆಚ್ಚೆಂದೆನಿಸಿ ಚೌಕಸಿ ಪ್ರಾರಂಭಿಸಿದೆ. ಕೊನೆಗೆ ಅರ್ಧ ಬೆಲೆಗಿಂತ ನಾಲ್ಕಾಣೆ ಹೆಚ್ಚು ಕೊಡುತ್ತೇನೆಂದು ನನ್ನ ಕೊಡುಗೆಯನ್ನು ಮುಂದಿಟ್ಟೆ. ಆತ ಒಪ್ಪಲಿಲ್ಲ. ಕೊನೆಗೆ ಇಬ್ಬರೂ ಚರ್ಚೆಯಲ್ಲೇ ಅವನ ಮನೆ ಸೇರಿದೆವು. ಪುಸ್ತಕವನ್ನು ಹೊರ ತೆಗೆದು ನೋಡಿದಾಗ ಅದರ ಮೂಲ ಬೆಲೆ ರೂ. ೧ ಆಗಿತ್ತು. ನಾನು ಮರು ಮಾತಿಲ್ಲದೆ ೧೨ ಆಣೆ ಕೊಟ್ಟು ಅದನ್ನು ಕೊಂಡು ಕೊಂಡೆ. ಅಂತೂ ಇಬ್ಬರೂ ಗೆದ್ದಂತಾಗಿತ್ತು.

—ಆರ್ ಎಂ ಭಟ್ಟ

ನಮ್ಮ ತೋಟಕ್ಕೆ ಸುತ್ತು ಗೋಡೆ ಇರಲಿಲ್ಲ. ಮನೆಯ ಮುಂದೆ ಹಾಕಿದ್ದ ಹೂ ಗಿಡಗಳನ್ನು ಮುಂಜಾನೆ ಒಂದು ಹಸು ಬಂದು ತಿಂದು ಹೋಗುತ್ತಿತ್ತು. ಎಳೆ ಮೊಗ್ಗುಗಳು ಬಿಡುವ ಸಮಯ. ನನಗೆ ಬಹಳ ಸಿಟ್ಟು ಬಂದಿತು. ಅದಕ್ಕೆ ಸರಿಯಾಗಿ ಪಾಠ ಕಲಿಸಬೇಕೆಂದು ಒಂದು ಬಡಿಗೆ ಹಿಡಿದು ಮರೆಯಲ್ಲಿ ಕಾಯುತ್ತ ನಿಂತೆ. ಸುಮಾರು ಏಳೂವರೆ ಗಂಟೆಗೆ ಹಸು ಬಂದು ಗಿಡಗಳಿಗೆ ಬಾಯಿ ಹಾಕಿತು. ನಾನು ಬಡಿಗೆ ಎತ್ತಿದೆ. ಆ ಕ್ಷಣದಲ್ಲಿ ನನ್ನ ಚಟುವಟಿಕೆಗಳನ್ನು ಕಿಡಿಕಿಯಿಂದ ನೋಡುತ್ತ ನಿಂತಿದ್ದ ನನ್ನ ಅತ್ತೆ ಜೋರಾಗಿ ಕೂಗಿದಳು: '' ಸ್ವಲ್ಪ ತಾಳೋ, ಸೆಗಣಿ ಹಾಕುತ್ತಾ ಇದೆ '' ಎಂದು. ಹಸು ಹೂ ಗಿಡಗಳನ್ನು ಕಬಳಿಸುತ್ತಾ ಇತ್ತು; ಅತ್ತೆಯ ಈ ಮಾತು ಕೇಳಿ ನನಗೆ ತಡೆಯಲಾರದಷ್ಟು ನಗು ಬಂತು.

ಸಂಗತಿ ಮತ್ತೇನೂ ಆಗಿರಲಿಲ್ಲ; ಒಲೆ ಸಾರಿಸಲು ಸೆಗಣಿ ಬೇಕಾಗಿತ್ತು. ಎರಡು ದಿನಗಳಿಂದ ಅದಕ್ಕಾಗಿ ಕಾಯುತ್ತಿದ್ದ ಅವಳಿಗೆ ಈಗ ಸೆಗಣಿ ಹಾಕಲಿದ್ದಾಗಲೆ ದನವನ್ನು ಓಡಿಸ ಹೊರಟ ನನ್ನ ಯತ್ನವು ಕೈಗೆ ಬಂದ ತುತ್ತನ್ನು ಕಸಿದುಕೊಂಡಂತೆ ಎಂದು ತೋರಿರಬೇಕು.

— ಜಿ. ಕೆ. ಹುಸೇನ್ ಮಿಯಾ, ಬೆಂಗಳೂರು

ಒಮ್ಮೆ ಒಬ್ಬ ಮನುಷ್ಯನು ಒಂದು ಆಸ್ತಿಯ ಪ್ರಕರಣದ ಕಾಗದ-ಪತ್ರಗಳ ನಕಲುಗಳನ್ನು ನನ್ನೆಡೆಗೆ ತಂದು ಅವುಗಳ ಆಧಾರದ ಮೇಲೆ ಸದರಿ ಆಸ್ತಿಯ ಬಗ್ಗೆ ದಾವಾ ಮಾಡಬಹುದೋ ಹೇಗೆ ಎಂಬಲ್ಲಿ ಯಥಾರ್ಥ ಅಭಿ

ಪ್ರಾಯ ಕೊಡಬೇಕೆಂದು ಕೇಳಿದನು.

ಎಲ್ಲಾ ಕಾಗದ-ಪತ್ರಗಳನ್ನು ಪರಿಶೀಲಿಸಿ ಹಾಗೂ ಯಾವತ್ತೂ ಮಾಹಿತಿ ತೆಗೆದುಕೊಂಡು ನಾನು ದಾವೆ ಮಾಡಿದರೆ ಜಯವು ನಿಶ್ಚಿತವೆಂದು ಅವನಿಗೆ ಸಕಾರಣವಾಗಿ ವಿವರಿಸಿ ಹೇಳಿದೆ.

ದೊಡ್ಡ ದಾವೆಯನ್ನು ದೊರಕಿಸಿದ ಆನಂದದಿಂದ ನನ್ನ ಮುಖ ಪ್ರಫುಲ್ಲಿತವಾಯಿತು. ನಾನಾಗಿಯೇ ದಾವೆಗೆ ತಗಲುವ ಖರ್ಚಿನ ತಪಶೀಲನ್ನು ತಿಳಿಸಿ "ಅಸಲು ದಸ್ತಾವೇಜುಗಳು ಹಾಗೂ ಹಣ ತಕ್ಕೊಂಡು ಬರ್ರಿ, ದಾವೆ ಬೇಗನೆ ಮಾಡಿಬಿಡೋಣ" ಎಂದೆ.

ಆ ಮನುಷ್ಯನು ಕೂತಲ್ಲಿಂದ ಎದ್ದು ನಮಸ್ಕಾರ ಮಾಡಿ, "ಸ್ವಾಮಿ, ನಿಜ ಅಭಿಪ್ರಾಯ ಕೊಟ್ಟದ್ದಕ್ಕೆ ಧನ್ಯವಾದಗಳು. ದಾವೆ ಮಾಡುವವ ನಾನಲ್ಲ, ನನ್ನ ಮೇಲೆ ದಾವೆ ಆಗುವದಿದೆ. ದಾವೆಯಾದರೆ ವಾದಿಗೆ ಜಯ ನಿಶ್ಚಿತವೆಂದು ತಾವು ಹೇಳುತ್ತೀರಿ. ಆದ್ದರಿಂದ ನಾನು ದಾವೆಯಾಗುವ ಮೊದಲೇ ರಾಜಿಯಿಂದ ಆಸ್ತಿ ಬಿಟ್ಟು ಕೊಡುತ್ತೇನೆ," ಎಂದನು.

ಈ ಮಾತುಗಳಿಂದ ನನ್ನ ಮುಖದ ಮೇಲೆ ಆದ ವಿಸ್ಮಯವನ್ನು ಕಂಡು ಅವನು "ಮಾಫ ಮಾಡಿರಿ, ವಕೀಲರೇ, ಪಕ್ಷಕಾರರನ್ನು ದೊರಕಿಸುವ ಆಸೆಯಿಂದ ವಕೀಲರು ನಿಜ ಅಭಿಪ್ರಾಯ ಕೊಡುವದಿಲ್ಲವೆಂದು ನಾನು ಇತರರಿಂದ ಕೇಳಿದ್ದೇನೆ. ನನ್ನ ಮೇಲೆ ದಾವೆ ಆಗುವದಿದೆಯೆಂದು ನಾನು ಮೊದಲೇ ಹೇಳಿದ್ದರೆ ದಾವೆ ಖಾತ್ರಿಯಿಂದ ಡಿಸ್‌ಮಿಸ್ ಮಾಡಿಸಿ ಕೊಡುತ್ತೇನೆಂದು ತಾವು ಸುಳ್ಳು ಆಶ್ವಾಸನ ಕೊಡಬಹುದೆಂಬ ಭೀತಿಯಿಂದ ನಾನು ದಾವೆಯ ಬಗ್ಗೆ ಯಥಾರ್ಥ ಅಭಿಪ್ರಾಯ ತಿಳಿಯುವ ಸಲುವಾಗಿ ನಾನೇ ದಾವೆ ಮಾಡುವವ ಎಂತ ಹೇಳಿದೆ." ಇಷ್ಟು ಹೇಳಿ "ದೇವರು ನಿಮಗೆ ಒಳಿತನ್ನೇ ಮಾಡಲಿ ಎಂದು ಈ ಬ್ರಾಹ್ಮಣನ ಆಶೀರ್ವಾದ" ಎಂದು ಉದ್ಗಾರ ತೆಗೆದು ಆ ಸದ್ಬ್ರಾಹ್ಮಣನು ಮರುಮಾತಿನ ದಾರಿ ಕಾಯದೆ ಅಲ್ಲಿಂದ ಹೊರಟುಹೋದನು.

—ರಂ ರಾ ತ., ಬೆಳಗಾವಿ

---

ಜವಾಹರರು ಬಾಲಕರಿದ್ದಾಗ ನಡೆದ ಘಟನೆ ಇದು. ಒಮ್ಮೆ ಕೆಲವೊಂದು ಹುಡುಗರು ಬಯಲಿನಲ್ಲಿ ಆಟವಾಡುತ್ತಿದ್ದರು. ಅವರು ಆಡುತ್ತಿದ್ದಂತೆಯೇ ಓರ್ವ ಬಾಲಕನ ಚಂಡು ಸಮೀಪದ ಗಿಡದ ಬಿಲವೊಂದರಲ್ಲಿ ಬಿತ್ತು. ಎಷ್ಟು ಪ್ರಯತ್ನ ಪಟ್ಟರೂ ಆ ಚಂಡನ್ನು ಹೊರಗೆ ತೆಗೆಯುವದು ಕಷ್ಟಸಾಧ್ಯವಾಯಿತು. ಚೆಂಡು ಕಳೆದುಕೊಂಡ ಬಾಲಕ ಅಳಲು ಪ್ರಾರಂಭಿಸಿದ. ಆಗ ಅದೇ ದಾರಿಯಿಂದ ಬಾಲಕ ಜವಾಹರು ಬರುತ್ತಿದ್ದರು. ಅವರು ಸಂಗತಿಯನ್ನು ತಿಳಿದುಕೊಂಡು ಎರಡು ಬಾಲ್ದಿ ನೀರನ್ನು ತರಿಸಿ ಬಿಲದಲ್ಲಿ ಸುರುವಲು ಚಂಡು ನೀರಿನ ಮೇಲೆ ತೇಲತೊಡಗಿತು. ಹುಡುಗ ಆನಂದದಿಂದ ಕುಣಿದಾಡಿದ.

—ಪಂಡಿತ ನಾ ಸದರಜೋಶಿ

ವಿಜ್ಞಾನಿಗಳ ಹೊಸ ಸಾಹಸದ ಪರಿಚಯ

# ಬಯಸಿದಾಗ ಮಳೆ !

ತ. ಸದಾನಂದ ರಾವ್

ಸಹರಾ ಮರುಭೂಮಿಯಲ್ಲಿ ಮಳೆ" ಎಂದು ಒಂದು ಮುಂಜಾನೆ ನಿಮ್ಮ ವಾರ್ತಾಪತ್ರಿಕೆಯಲ್ಲಿ ನೀವು ಓದಿದರೆ ನಿಮಗೆಷ್ಟು ಆಶ್ಚರ್ಯವಾಗ ಬಹುದು? ಆದರೆ ನಿಮಗಾಗುವ ಆಶ್ಚರ್ಯಕ್ಕಿಂತ ಎಷ್ಟೋ ಪಾಲು ಆನಂದ ಆಫ್ರಿಕದವರಿಗಾದೀತು. ಮಳೆ ಬಾರದಲ್ಲಿ ಮಳೆ ಬರಿಸಿದರೆ, ಬರುವಲ್ಲಿ ಬೇಕಾದಾಗ ಬರುವಂತಾದರೆ, ಹೆಚ್ಚು ಬರುವಲ್ಲಿ ಬರದಂತಾದರೆ ಮನುಷ್ಯ ನಿಜಕ್ಕೂ ಆನಂದದಿಂದ ಕುಣಿಯನೆ? ಆದರೆ ಮಾನವನ ಆಜ್ಞೆಗೆ ಒಲಿಯುವ ಇಂದ್ರನಿರಬೇಕಲ್ಲ! ಬಹುಶಃ ವಿಜ್ಞಾನಿಗಳ ತಪಸ್ಸು ಫಲದಾಯಕವಾದರೆ ವಿಜ್ಞಾನವೇ ಇಂದ್ರನಾಗುವ ದಿನ ದೂರವಿಲ್ಲ.

**ಕೃತಕ ಮಳೆ ಬರಿಸುವ ವಿಧಾನ ಕಳೆದ ಮಹಾಯುದ್ಧದಲ್ಲಿ ವಿಮಾನ ಸಂಚಾರಕ್ಕೆ ಆತಂಕ ಮಾಡುವ ಮೋಡಗಳ ಉಪಟಳವನ್ನು ನಿವಾರಿಸುವ ಯತ್ನಗಳೊಡನೆ ಪ್ರಾರಂಭವಾಯಿತು. ಮೋಡಗಳ ಬೇರೆ ಬೇರೆ ಜಾತಿಗಳ ಗುಣ ಧರ್ಮಗಳ ಸರಿಯಾದ ಪರಿಚಯ ಈ ಯತ್ನಗಳಿಂದ ವಿಜ್ಞಾನಿಗಳಿಗಾಯಿತು. ಅನಂತರ ಮೋಡಗಳಿಂದ ಕೃತಕವಾಗಿ ಮಳೆ ಸುರಿಸಬಾರದೇಕೆ? ಎಂಬ ವಿಚಾರ ತಲೆಯಲ್ಲಿ ಸುಳಿದು ಕೆಲವರು ಈ ದಿಸೆಯಲ್ಲಿ ಯತ್ನಗಳನ್ನು ಪ್ರಾರಂಭಿಸಿದರು. ಇಂದು ಜಗತ್ತಿನ ವಿವಿಧ ಭಾಗಗಳಲ್ಲಿ ಮೋಡಗಳಿಂದಷ್ಟೇ ಅಲ್ಲ, ತೇವದಿಂದ ಕೂಡಿರುವ ಗಾಳಿಯಿಂದಲೂ ಮಳೆಯನ್ನು ಹಿಂಡುವ ಯಶಸ್ವಿ ಸಾಹಸಗಳಾಗಿವೆ. ಮಳೆಗರೆಯಲೊಲ್ಲದ ಮೋಡಗಳಿಂದ ಮಳೆಗರೆಸುವುದು ಮಾತ್ರವಲ್ಲ, ಮೋಡದ ವೇಗ, ಅದರ ದಿಶೆ ಮೊದಲಾದವುಗಳನ್ನು ಸರಿಯಾಗಿ ಅಂದಾಜು ಮಾಡಿದರೆ ಗೊತ್ತಾದ ಪ್ರದೇಶದಲ್ಲೇ ಮಳೆ ಬರುವಂತೆ ಮಾಡುವುದೂ ಅಸಾಧ್ಯವಲ್ಲೆಂದು ಕಂಡುಬಂದಿದೆ. ಆಸ್ಟ್ರೇಲಿಯ ಮೊದಲಾದೆಡೆಗಳಲ್ಲಿ "ಮಳೆಗಾರರು" ಇದೊಂದು ಉದ್ಯೋಗವನ್ನೇ ಪ್ರಾರಂಭಿಸಿದ್ದಾರೆ. ಬೇಡಿದ ಸ್ಥಳಕ್ಕೆ ಮಳೆ ಕಳಿಸುವ ಆರ್ಡರುಗಳನ್ನು ಅವರು ಸ್ವೀಕರಿಸುತ್ತಾರಂತೆ! ಅಷ್ಟೇಕೆ, ಅಮೇರಿಕದ ಕೆಲಿಫೋರ್ನಿಯವು ಕೃತಕಮಳೆಯಿಂದ ವರ್ಷಕ್ಕೆ ೨೫ ಕೋಟಿ ರೂಪಾಯಿಯಷ್ಟು ಲಾಭ ಹೊಂದುತ್ತಿದೆಯಂತೆ.**

ಈಗಾಗಲೆ ನಾವು ಇದು ಸಾಧ್ಯವೆಂಬುದನ್ನು ಪತ್ರಿಕೆಗಳಲ್ಲಿ ಓದುತ್ತಿದ್ದೇವೆ. ಒಂದು ವರುಷದ ಹಿಂದೆ ಮುಂಬಯಿಯಲ್ಲಿ ಸಾಂತಾಕ್ರೂಸ್‌ನಲ್ಲಿ ಡಾ. ಸವೂರ್ ಎಂಬವರು ತಮ್ಮ ಮೂರು ವರ್ಷಗಳ ಸಂಶೋಧನೆಯ ಬಳಿಕ ಮಳೆ ಬರಿಸಲು ಶಕ್ತರಾದರಂತೆ. ಇದಕ್ಕೂ ಮೊದಲು ಉದಕಮಂಡಲದಲ್ಲಿ ಯು. ಆನಂದರಾಯರೆಂಬವರು ತಮ್ಮ ಪ್ರಯೋಗಗಳಿಂದ ಹೆಚ್ಚು ಮಳೆ ಬರಿಸಿದರು. ಕಲಕತ್ತೆಯ ಡಾ. ಬ್ಯಾನರ್ಜಿ ಇನ್ನೊಬ್ಬ ಮಳೆಗರೆಯುವ ವಿಜ್ಞಾನಿ. ಆಸ್ಟ್ರೇಲಿಯದಲ್ಲಿ ಹತ್ತು ವರ್ಷಗಳಿಂದ ಎಡ್ವರ್ಡ್ ಜಿ. ಬವೆನ್‌ರು ಮಳೆ ಬರಿಸಲು ಪ್ರಯತ್ನಗಳನ್ನು ಮಾಡುತ್ತಿದ್ದಾರಲ್ಲದೆ ಸಾಕಷ್ಟು ಯಶಸ್ಸನ್ನೂ ಗಳಿಸಿದ್ದಾರೆ. ರಶಿಯನ್ನರು ಎಲ್ಲರಿಗಿಂತಲೂ ಮುಂದುವರಿದು ಮಳೆಯನ್ನು ಬಾರದಂತೆ ಮಾಡಲೂ ಶಕ್ತರಾಗಿರುತ್ತಾರೆಂದು ನಾವು ಕೇಳುತ್ತೇವೆ! ಇದು ಹೇಗೆ ಸಾಧ್ಯ?

ಕೃತಕವಾಗಿ ಮಳೆಯನ್ನು ಬರಿಸುವ ವಿಧಾನವನ್ನು ತಿಳಿಯಬೇಕಾದರೆ ಮೊದಲು ಸಹಜವಾಗಿ ಮಳೆ ಹೇಗೆ ಬರುತ್ತದೆಂಬುದನ್ನು ತಿಳಿದಿರುವುದು ಅಗತ್ಯ. ನಮ್ಮ ಗಾಳಿಯಲ್ಲಿ 'ಗಾಳಿ'ಯಲ್ಲದೆ ಇನ್ನೂ ಅನೇಕ ವಸ್ತುಗಳು ಸೇರಿಕೊಂಡಿರುತ್ತವೆ. ಇವುಗಳಲ್ಲಿ ಧೂಳಿನ ಕಣಗಳು ಮತ್ತು ನೀರಿನ ಆವಿ ಅತಿ ಮುಖ್ಯ. ಗಾಳಿಯಲ್ಲಿರುವ ನೀರಿನ ಆವಿಯಾದರೊ ತೀರಾ ಸೂಕ್ಷ್ಮವಾಗಿದ್ದು ಅದಕ್ಕೆ ತಾನಾಗಿಯೆ "ಮಳೆ"ಯಾಗಲು ಸಾಧ್ಯವಿರುವುದಿಲ್ಲ. ಈ ಆವಿಯು ಕೆಲವು ವೇಳೆ ಧೂಳಿನ ಕಣಗಳ ಸುತ್ತ ಕೂಡಿ ತಣಿದು ನೀರಿನ ಚಿಕ್ಕಚಿಕ್ಕ ಹನಿಗಳಾಗುತ್ತವೆ. ಆದರೆ ಈ ಹನಿಗಳ ಆಯುಷ್ಯ ಅನೇಕ ವೇಳೆ ಅಲ್ಪವಾಗಿರುತ್ತದೆ. ಕಾರಣ ಇದು : ಈ ಚಿಕ್ಕ ಹನಿಗಳು ತಮ್ಮ ಭಾರದಿಂದಾಗಿ ಕೆಳಗೆ ಬೀಳತೊಡಗುತ್ತವೆ. ಆದರೆ ಅವುಗಳ ಗತಿ ತೀರ ಮಂದವಾಗಿರುತ್ತದೆ. ೧।೧೦೦೦ ಅಂಗುಲ ಗಾತ್ರದ ಒಂದು ಹನಿ ಒಂದು ನಿಮಿಷಕ್ಕೆ ೮ ಅಡಿಗಳಷ್ಟು ಕೂಡ ಕೆಳಗಿಳಿಯುವುದಿಲ್ಲ. ಹೀಗೆ ಕೆಳಗಿಳಿಯುತ್ತಿರುವಾಗ ಕೆಳಗಿನ ವಾತಾವ

ರಣದ ಅಧಿಕ ಉಷ್ಣತೆಯ ದೆಸೆಯಿಂದ ಈ ಪುಟ್ಟ ಹನಿಗಳು ಪುನಃ ಆವಿಯಾಗಬಹುದು. ಕೆಲವು ಸಲ ಈ ಆವಿಯು ಇತರ ಹನಿಗಳ ಮೇಲೆ ಸಾಂದ್ರೀಕೃತವಾಗುವುದುಂಟು. ಆಗ ಹನಿಯ ಗಾತ್ರ ಬೆಳೆಯುತ್ತದೆ. ಈ ಬೆಳವಣಿಗೆ ಹಾಗೆಯೆ ಮುಂದುವರಿದರೆ ಹನಿಯು ತನ್ನ ಭಾರದಿಂದಾಗಿ ಕೆಳಗೆ ಬೀಳಬೇಕಾಗುತ್ತದೆ. ಆಗ ಮಳೆ ಬರುತ್ತದೆ.

ಮೋಡಗಳಿಂದ ಮಳೆ ಬರುವುದು ಬೇರೆಯೇ ರೀತಿಯಲ್ಲಿ ನಡೆಯುತ್ತದೆ. ಮೋಡಗಳ ಮಧ್ಯೆ ಯಾವಾಗಲೂ ಗಾಳಿಯ ಸುಳಿಗಳಿರುತ್ತವೆ. ಇವುಗಳಿಂದಾಗಿ ಮೋಡಗಳಲ್ಲಿರುವ ಚಿಕ್ಕ ಚಿಕ್ಕ ಹನಿಗಳು ಒಂದಕ್ಕೊಂದು ಢಿಕ್ಕಿ ಹೊಡೆದು ಹನಿಗಳು ದೊಡ್ಡವಾಗುತ್ತವೆ. ಹನಿಗಳು ಹತ್ತನೆ ಒಂದು (೧।೧೦) ಅಂಗುಲದಷ್ಟು ದೊಡ್ಡವಾದಾಗ ಮಳೆ ಬರುತ್ತದೆ.

ಸಾಮಾನ್ಯವಾಗಿ ಗಾಳಿಯಲ್ಲಿ ನೀರು ಇದ್ದೇ ಇರುತ್ತದೆ. ಆದರೆ ಗಾಳಿಯು ಮೇಲೂ ಕೆಳಗೂ ಚಲಿಸುತ್ತಿರುವುದರಿಂದ ಅದರಲ್ಲಿದ್ದ ನೀರು ಹನಿಯಾಗಿ ಬೀಳುವುದಿಲ್ಲ. ಇದು ಹನಿಯಾಗಿ ಬೀಳುವಂತೆ ಮಾಡುವ ಪ್ರಯತ್ನವನ್ನು ಇಂದು ವಿಜ್ಞಾನಿಗಳು ಮಾಡುತ್ತಿದ್ದಾರೆ.

ಮೊದಲು ಕೃತಕವಾಗಿ ಮಳೆ ಬರಿಸುವ ಪ್ರಯತ್ನವನ್ನು ಕೈಕೊಂಡವನು ಅಮೇರಿಕದ ಇರ್ವಿಂಗ್ ಲಾಂಗ್‌ಮಾರ್. ಇತರ ವಿಜ್ಞಾನಿಗಳ ನೆರವಿನಿಂದ ಒಣ ಬರ್ಫದ (Dry Ice) ಅಥವಾ ಸಿಲ್ವರ್ ಅಯೊಡೈಡಿನ ಕಣಗಳನ್ನು ಮೇಲಕ್ಕೆ ಚದರಿಸಿ ಇವುಗಳ ಸುತ್ತ ಗಾಳಿಯಲ್ಲಿನ ನೀರಿನ ಆವಿಯು ತಂಗುವಂತೆ ಅವನು ಮಾಡಿದನು. ಅವನ ಪ್ರಯತ್ನ ಸಫಲವಾಯಿತು. ಕೃತ್ರಿಮ ಮಳೆ ಮೊದಲ ಬಾರಿಗೆ ಸುರಿಯಿತು.

ಇದಾದ ಬಳಿಕ ಕೃತ್ರಿಮ ಮಳೆ ಬರಿಸಲು ಹಲವೆಡೆಗಳಲ್ಲಿ ಹಲವು ಉಪಾಯಗಳನ್ನು ಕೈಕೊಳ್ಳಲಾಯಿತು. ಆಸ್ಟ್ರೇಲಿಯದಲ್ಲಿ ಆಸ್ಟ್ರೇಲಿಯಾ ಕಾಮನ್‌ವೆಲ್ತ್ ವೈಜ್ಞಾನಿಕ ಮತ್ತು ಔದ್ಯಮಿಕ ಸಂಸ್ಥೆಯ ಕೃತ್ರಿಮ ಮಳೆಯ ವಿಭಾಗದವರು ಈಗ ಹತ್ತು ವರ್ಷಗಳಿಂದ ಈ ಬಗ್ಗೆ

**ಮಳೆಯ ಮೇಲೆ ಮನುಷ್ಯನ ನಿಯಂತ್ರಣ ಸಾಧ್ಯವಾಗತೊಡಗಿರುವುದರಿಂದ ಕೆಲ ಸೋಜಿಗದ ಮತ್ತು ಕೆಲ ಕಲ್ಯಾಣಕರ ಪರಿಣಾಮಗಳಾಗುತ್ತಿವೆ.**

**ಕೆಲ ವರ್ಷಗಳ ಹಿಂದೆ ಕಲಕತ್ತೆಯ ಡಾ. ಬ್ಯಾನರ್ಜಿಯವರು ಒಂದು ಮೋಡದಲ್ಲಿ "ಬೀಜಾರೋಪಣ" ಮಾಡಿದ್ದರಿಂದ ನೆರೆ ಹಳ್ಳಿಯಲ್ಲಿ ಧೋಧೋ ಮಳೆ ಸುರಿಯಿತು. ಈ ಅಕಾಲ ವೃಷ್ಟಿಯಿಂದ ಹಾನಿಹೊಂದಿದ ರೈತರಿಗೆ ಹೇಗೋ ಇದು ಡಾ. ಬ್ಯಾನರ್ಜಿಯ ಕಾಯಕವೆಂದು ತಿಳಿದುಹೋಯಿತು. ಅವರು ಓಡಿ ಬಂದು ಇನ್ನೊಮ್ಮೆ ಹೀಗೆ ಮಾಡಿದರೆ ನಿನ್ನ ಜೀವ ತೆಗೆಯುವೆವೆಂದು ವಿಜ್ಞಾನಿಯನ್ನು ಹೆದರಿಸಿದರು!**

**ಆಸ್ಟ್ರೇಲಿಯದಲ್ಲೊಬ್ಬ ಮಳೆಗಾರ ಬರಿಸಿದ ಮಳೆ ತಪ್ಪು ಸ್ಥಳದಲ್ಲಿ ಬಿದ್ದುದರಿಂದ ತಮಗಾದ ಹಾನಿಯನ್ನು ತುಂಬಿಕೊಡಬೇಕೆಂದು ಮಳೆ ಬೇಡವಾಗಿದ್ದ ಪ್ರದೇಶದ ರೈತರು ನ್ಯಾಯಾಲಯಕ್ಕೆ ಹೋದರು.**

**ಅಮೇರಿಕ ಸಂಯುಕ್ತ ಸಂಸ್ಥಾನಗಳ ರಾಜ್ಯ ಸರಕಾರಗಳು ತಮ್ಮ ರಾಜ್ಯದ ಆಕಾಶದಲ್ಲಿರುವ ಎಲ್ಲ ಮೋಡಗಳಲ್ಲಿರುವ ನೀರೂ ತಮ್ಮ ಆಧಿಪತ್ಯಕ್ಕೆ ಸೇರಿವೆಯೆಂದು ಕಾಯದೆ ಮಾಡಿ ಮಳೆಗಾರರು ಸರಕಾರದ ಅನುಮತಿಯಿಲ್ಲದೆ ಕೃತಕ ಮಳೆ ಬರಿಸತಕ್ಕದ್ದಲ್ಲೆಂದು ಸಾರಿವೆ. ನೆರೆಹೊರೆಯ ರಾಜ್ಯಗಳ ಮಳೆಗಾರರು ತಮ್ಮ ರಾಜ್ಯದ ಆಕಾಶಕ್ಕೆ ಬಂದು ಮೋಡಗಳಿಗೆ ಬೀಜಾರೋಪಣ ಮಾಡಿ ಆಯಾ ರಾಜ್ಯಗಳತ್ತ ಆ ಮೋಡಗಳು ಸಾಗಿದಾಗ ಮಳೆಯಾಗುವಂತೆ ಮಾಡಿಕೊಳ್ಳುವರೆಂದು ಅಂಜಿ ಈ ಕಾಯದೆ ಮಾಡಲಾಗಿದೆಯಂತೆ!**

ಸಂಶೋಧನೆಗಳನ್ನು ಮಾಡುತ್ತಿದ್ದಾರೆ. ಸಿಡ್ನಿಯ ಬಳಿಯ ಹಿಮಪರ್ವತದ ಮೇಲಿರುವ ಮೋಡಗಳಿಂದ ಮಳೆ ಬರಿಸಲು ಅವರು ಮಾಡುತ್ತಿರುವ ಪ್ರಯೋಗಗಳಲ್ಲಿ ಒಣ ಬರ್ಫ, ನೀರಿನ ಸಿಂಚನ, ರಾಸಾಯನಿಕ ಪದಾರ್ಥಗಳು ಮತ್ತು ಸಾಮಾನ್ಯ ಧೂಳನ್ನು ಉಪಯೋಗಿಸಿ ನೋಡಿದ್ದಾರೆ. ಇವೆಲ್ಲವುಗಳಲ್ಲಿ ಬೆಳ್ಳಿಯ ಅಯೊಡೈಡು ಅವರಿಗೆ ಉತ್ತಮ ಫಲವನ್ನು ಕೊಟ್ಟಿದೆ.

ಭಾರತದಲ್ಲಿ ಕಲಕತ್ತೆಯ ಯಾದವಪುರ ಎಂಜನಿಯರಿಂಗ್ ಕಾಲೇಜಿನ ಗಣಿತ ಪ್ರಾಧ್ಯಾಪಕರಾದ ಡಾ. ಎಸ್. ಬ್ಯಾನರ್ಜಿಯವರು ಅಂಬಾಲಾದಲ್ಲಿ ಸಾಮಾನ್ಯವಾಗಿ ಮಳೆಯಗರೆಯಲೊಲ್ಲದ ಕ್ಯುಮುಲೊ-ನಿಂಬಸ್ ಮೋಡಗಳಿಂದ ೧೯೫೯ ರ ಸುಮಾರಿಗೆ ಮಳೆ ಬರಿಸಿದರು. ಇವರು ವಿಮಾನಗಳ ಮೂಲಕ ಕೆಲ ವೃಷ್ಟಿಕಾರಕ ಪದಾರ್ಥಗಳನ್ನು ಬಂಜೆ ಮೋಡಗಳಲ್ಲಿ ತೂರುವ ವಿಧಾನವನ್ನುಪಯೋಗಿಸಿದರು. ಅನಂತರ ಅವರು ಬಲೂನುಗಳಲ್ಲಿ ಗ್ಯಾಸುಗಳನ್ನಿಟ್ಟು ಮೋಡಗಳನ್ನು ತಲಪುವಂತೆ ಮಾಡಿ ಕಲಕತ್ತೆ ಮತ್ತು ಸುತ್ತಮುತ್ತ ಮಳೆ ಸುರಿಸಿದ್ದಾರೆ.

ಉದಕಮಂಡಲದಲ್ಲಿ ೧೯೫೬ರಲ್ಲಿ ಮಾಡಲಾದ ಪ್ರಯೋಗಗಳಲ್ಲಿ ಕ್ಯಾಲ್ಸಿಯಮ್ ಮತ್ತು ಸೋಡಿಯಮ್ ಕ್ಲೋರೈಡುಗಳ ಮಿಶ್ರಣವನ್ನು ಉಪಯೋಗಿಸಲಾಯಿತು. ಮೇ ೧೬ ರಂದು ಈ ಪ್ರಯೋಗಗಳ ಫಲವಾಗಿ ಮುಕರ್ೂರ್ತಿ ಎಂಬಲ್ಲಿ ಮಳೆ ಸುರಿಯಿತು.

ಮಳೆಯನ್ನು ಕೃತಕವಾಗಿ ಬರಿಸಲು ನಡೆಸಲಾದ ಪ್ರಯೋಗಗಳಲ್ಲಿ ಅತ್ಯಂತ ಪ್ರಮುಖವಾದುದು, ಕುತೂಹಲದಾಯಕವಾದುದು ಮುಂಬಯಿಯಲ್ಲಿ ಡಾ. ಎಸ್. ಆರ್. ಸವೂರರವರು ಮಾಡಿದ ಪ್ರಯೋಗ. ಆಂಧ್ರ ವಿಶ್ವವಿದ್ಯಾಲಯದ ಭೂಭೌತಶಾಸ್ತ್ರ ವಿಭಾಗದ ಸಂಚಾಲಕರಾಗಿದ್ದ ಸವೂರರವರು ಇದಕ್ಕಾಗಿ ಬಳಸಿದ ಉಪಕರಣ ಬಹಳ ಸರಳವಾದುದು. ಹತ್ತು ಸೆಂಟಿಮೀಟರ್ ಉದ್ದ, ಹತ್ತು ಸೆಂಟಿಮೀಟರ್ ವ್ಯಾಸವುಳ್ಳ ಕರಡಿಗೆಯಿಂದ ಉಗಿಯನ್ನು ಕಾರಂಜಿಯಂತೆ ಹಾರಿಸಿ, ಈ ಉಗಿ ಇದರ ಮುನ್ನೂರು ಪಾಲು ಗಾತ್ರದ ಗಾಳಿಯೊಡನೆ ಬೆರೆತು ಮೇಲಕ್ಕೆ ಹೋಗುವಂತೆ ಮಾಡುವುದು ಈ ಪ್ರಯೋಗದ ಮುಖ್ಯ ತಂತ್ರವಾಗಿದೆ. ಸೆಕೆಂದಿಗೆ ೨೨ ಲಿಟರ್‌ನಷ್ಟು ಗಾಳಿಯು ಇದರಿಂದಾಗಿ ಮೇಲೇರುತ್ತದೆ. ಎರಡು ಗಂಟೆಯಲ್ಲಿ ಸಾಧಾರಣ ಇದು ಮೂರು ಸಾವಿರ ಅಡಿಗಳಷ್ಟು ಮೇಲೇರುತ್ತದೆ. ಇದು ಮೋಡದೊಳಕ್ಕೆ ಹೋದಾಗ ಮೋಡದೊಳಗಿರುವ ನೀರಿನ ಕಣಗಳ ಸಂಖ್ಯೆಯನ್ನು ಮತ್ತು ಗಾತ್ರವನ್ನು ಹೆಚ್ಚಿಸುತ್ತದೆ. ಇದರ ಪರಿಣಾಮವಾಗಿ ಮಳೆ ಬರುವುದು ಸಾಧ್ಯವಾಗುತ್ತದೆ.

ಈ ಪ್ರಯೋಗದ ಫಲವಾಗಿ ೧೯೫೪-೫೫ ರಲ್ಲಿ ವಾಲ್ಟೇರಿನಲ್ಲಿ (ಆಂಧ್ರ) ಅವರು ಅದಕ್ಕೆ ಹಿಂದಿನ ೫೩ ವರ್ಷಗಳಲ್ಲಿ ಎಂದೂ ಬಾರದಿದ್ದಷ್ಟು ಮಳೆಯನ್ನು ಬರಿಸಲು ಸಮರ್ಥರಾದರೆಂದು ಹೇಳಲಾಗಿದೆ. ಮುಂಬಯಿಯ ತಮ್ಮ ಮನೆಯ ಮೇಲಿಂದ ಈ ಪ್ರಯೋಗವನ್ನು ಕಳೆದ ವರ್ಷ ಅವರು ಮಾಡಿ ಸಾಂತಾಕ್ರೂಸಿನಲ್ಲಿ ನೆರೆಯ ಕೊಲಾಬಾದಲ್ಲಿ ಬರುವುದಕ್ಕಿಂತ ಹೆಚ್ಚು ಮಳೆ ಸುರಿಸಿದರು.

ರಶಿಯದಲ್ಲಿ ಅನುಸರಿಸುವ ಕ್ರಮ ತತ್ವದಲ್ಲಿ ಉದಕಮಂಡಲದಲ್ಲಿ ಅನುಸರಿಸುವ ಕ್ರಮವನ್ನೇ ಹೋಲುತ್ತದೆ. ವಿಮಾನವೊಂದರಿಂದ ಮೋಡದೊಳಕ್ಕೆ ಒಂದು ಗ್ರಾಮ್ ತೂಕದಲ್ಲಿ ೧೦,೦೦೦ ಕೋಟಿಯಷ್ಟು ಇರಬಹುದಾದಷ್ಟು ಚಿಕ್ಕ ಒಣ ಬರ್ಫದ ಸ್ಫಟಿಕಗಳನ್ನು ಚಿಮುಕಿಸಲಾಗುತ್ತದೆ. ಮೋಡದಲ್ಲಿರುವ ನೀರಾವಿ ಈ ಸ್ಫಟಿಕಗಳ ಸುತ್ತ ಸಾಂದ್ರೀಕರಿಸಿ ಹಿಮವಾಗಿ ಪರಿವರ್ತನೆ ಹೊಂದುತ್ತದೆ. ಈ ಹಿಮ ಕರಗಿದಾಗ ಮಳೆಗರೆಯುತ್ತದೆ.

ಈಗ ಸಂಶೋಧನೆಯ ಹಂತದಲ್ಲಿರುವ ಈ ಪ್ರಯೋಗಗಳು ಯಶಸ್ವಿಯಾದರೆ ಮುಂದೆ ವರ್ಷವಿಡೀ ಬೆಳೆಯನ್ನು ಬೆಳೆಸುವುದು ಸಾಧ್ಯವಾಗಬಹುದು. ಅದು ಆದಾಗ ಮನುಷ್ಯ ಆಹಾರದ ಪ್ರಶ್ನೆಯನ್ನು ಪರಿಹರಿಸಿದಂತಾದೀತು.

# ವಿಚಿತ್ರ ವೃಕ್ಷಗಳು

ಪ್ರೊ. ಎಂ. ಎಸ್. ಎಸ್. ರಾವ್

## ಪ್ರಯಾಣಿಕರ ಮರ

ಮಡಗಾಸ್ಕರ್ ಪ್ರದೇಶದಲ್ಲಿ 'ಮ್ಯೂಲಸೇಸಿ' ಎಂಬ ಗುಂಪಿಗೆ ಸೇರಿದ 'ಪ್ರಯಾಣಿಕರ ಮರ' ಒಂದಿದೆ. ಅದರ ಹೆಸರು 'ರವನೇಲಾ ಮಡಗಾಸ್ಕರೆನ್ಸಿಸ್'. ಇದು ಬಾಳೆಯ ಗಿಡದ ಜಾತಿಗೆ ಸೇರಿದೆ. ಇದರ ಕಾಂಡ ೧೨ ಅಡಿ ಎತ್ತರ. ಅದರ ಎಲೆಗಳು ಕಾಂಡದ ಎರಡೂ ಕಡೆ ಮೇಲ್ಭಾಗದಲ್ಲಿ ಒತ್ತಾಗಿ ಬೆಳೆಯುತ್ತವೆ. ಎಲೆಗಳ ಉದ್ದ ಆರು ಅಡಿ, ಎಲೆಯ ತೊಟ್ಟಿನ ಉದ್ದ ಏಳು ಅಡಿ. ಒಟ್ಟು ಗಿಡವು ಒಂದು ಭೂತಾಕಾರದ ಬೀಸಣಿಕೆಯಂತೆ ಕಾಣುತ್ತದೆ. ಎಲೆಯ ತೊಟ್ಟಿನ ಕೆಳಭಾಗದಲ್ಲಿ ದೊಡ್ಡ ಬೋಗುಣಿಯಂತಹ ಭಾಗವಿರುತ್ತದೆ. ಅದರ ತುಂಬ ನೀರು ತುಂಬಿರುತ್ತದೆ. ನೀರಡಿಕೆಯಾದ ಪ್ರಯಾಣಿಕರು ಅದನ್ನು ಕೊರೆದು ಕೊಡದಷ್ಟು ದೊರೆಯುವ ನೀರನ್ನು ಕುಡಿದು ದಣಿವಾರಿಸಿಕೊಳ್ಳುತ್ತಾರೆ. ಅದರಿಂದಲೇ 'ಪ್ರಯಾಣಿಕರ ಮರ' ಎಂದು ಅದಕ್ಕೆ ಹೆಸರು ಬಂದಿದೆ. (ಕಲಕತ್ತೆಯ ಸಸ್ಯಶಾಸ್ತ್ರೋದ್ಯಾನದಲ್ಲಿ ಈ ವೃಕ್ಷವನ್ನು ನಟ್ಟು ಬೆಳೆಸಿದ್ದಾರೆ.)

## ಫಿರಂಗಿ ಗುಂಡಿನ ಮರ

ಅಮೇರಿಕದಲ್ಲಿ 'ತಿಸಿಥಿಡೇಸಿ' ಎಂಬ ಗುಂಪಿಗೆ ಸೇರಿದ ಒಂದು ವಿಚಿತ್ರ ಮರವಿದೆ. ಅದರ ಹೆಸರು 'ಕೊರೋವಿಟ'ಎಂದು. ಆ ಮರದಲ್ಲಿ ಅತಿ ದೊಡ್ಡ ಗಟ್ಟಿಯಾದ ದುಂಡನೆಯ ಹಣ್ಣುಗಳು ಬಿಡುತ್ತವೆ. ಅವು ಹಿಂದಿನ ಕಾಲದ ದೊಡ್ಡ ಫಿರಂಗಿ ಗುಂಡಿನಂತೆ ಕಾಣುತ್ತವೆ. ಅದಕ್ಕೇ ಅದರ ಹೆಸರು 'ಫಿರಂಗಿ ಗುಂಡಿನ ಗಿಡ' ಎಂದು. ಆ ಮರದಲ್ಲಿ ದೊಡ್ಡ ದೊಡ್ಡ ಬಿಳಿ ಇಲ್ಲವೇ ಕಂದು ಬಣ್ಣವುಳ್ಳ ಹೂಗಳು ನೇರವಾಗಿ ಕೊಂಬೆ ಮತ್ತು ಕಾಂಡಗಳ ಮೇಲೆ ಬೆಳೆಯುತ್ತವೆ. ದುಂಡನೆಯ ಮತ್ತು ಬಿರುಸಾದ ಕಾಯಿ ಸಿಹಿ, ಮತ್ತು ರುಚಿ; ಆದರೆ ಸ್ವಲ್ಪ ಹುಳಿ.

## ಮೋಣದ ಬತ್ತಿಯ ಮರ

ಪನಾಮ ದೇಶದಲ್ಲಿ 'ಬಿಗ್ನೋನಿಯೇಸಿ' ಎಂಬ ಗುಂಪಿಗೆ ಸೇರಿದ 'ಕ್ಯಾಂಡಲ್ ಮರ' ವೆಂಬುದಿದೆ. ಅದರ ಶಾಸ್ತ್ರೀಯ ಹೆಸರು 'ಫಾರ್ಮೆಂಟಿಯಿರಾ ಸೆರಿಫಿರಾ' ಎಂದು. ಆ ಮರದಲ್ಲಿ ನಾಲ್ಕು ನಾಲ್ಕು ಅಡಿ ಉದ್ದದ ಭೂತಾಕಾರದ ಮೇಣ ಬತ್ತಿಗಳಂಥ ಕಾಯಿ ಬಿಡುತ್ತವೆ. ಅಲ್ಲಿಯ



ದನಕರುಗಳಿಗೆ ಅದು ಬಹು ಇಷ್ಟ. ಆ ಕಾಯನ್ನು ತಿಂದ ಪ್ರಾಣಿಗಳ ದೇಹದ ಮಾಂಸದಲ್ಲಿ ಮೇಣ ಬತ್ತಿಗಳಲ್ಲಿರುವ ಸೇಬುಹಣ್ಣಿನ ವಾಸನೆಯೇ ಕಂಡುಬರುತ್ತದಂತೆ. ಈ ಕಾಯಿಗಳು ಆಕಾರ ದಲ್ಲಿಯೂ ಗಾತ್ರದಲ್ಲಿಯೂ ಬಣ್ಣದಲ್ಲಿಯೂ ದೊಡ್ಡದೊಡ್ಡ ಮೇಣದ ಬತ್ತಿಗಳನ್ನು ಹೋಲು ತ್ತವೆ. ಅದರಲ್ಲಿ ಸಾಕಷ್ಟು ಕೊಬ್ಬು ಇರುವುದ ರಿಂದ ಅದರ ಎಣ್ಣೆ ತೆಗೆದು, ದೀಪಗಳನ್ನು ಉರಿಸ ಲಿಕ್ಕೆ ಉಪಯೋಗಿಸುವುದು ಉಂಟು.

## ಹಾಲಿನ ಮರ ಅಥವಾ ಆಕಳ ಮರ

ವೆನಿಜೂಲಾ ಪ್ರದೇಶದಲ್ಲಿ "ಬ್ರೋಸಿಯಂ ಗ್ಯಾಲಕ್ಟೋಡೆಂಡ್ರಾನ್' ಎಂಬ ಮರವೊಂದಿದೆ. ಇದು 'ಮೋರೇಸಿ' ಎಂಬ ಗುಂಪಿಗೆ ಸೇರಿದ್ದು. ಅಲ್ಲಿಯ ಜನಗಳು ಅದರ ಕಾಂಡವನ್ನು ಚುಚ್ಚಿ ಅದರಿಂದ ಸಿಹಿಯಾದ ಬಿಳಿಯ ಹಾಲನ್ನು ತೆಗೆ ಯುತ್ತಾರೆ. ಇದು ಬೆಳ್ಳಗಿದ್ದು ಹಾಲನ್ನು ಎಲ್ಲ ವಿಧದಲ್ಲಿಯೂ ಹೋಲುತ್ತದೆ. ಅದರಲ್ಲಿ ಸಕ್ಕರೆ ಅಂಶ, ಕೊಬ್ಬು ಇರುತ್ತದೆ. ಆದರೆ ಸ್ವಲ್ಪ ಸುಗಂಧತೈಲದ ವಾಸನೆ. (ಹಾಲಿನ ಸಲುವಾಗಿ ಇದನ್ನು ಭಾರತದಲ್ಲಿ ಬೆಳೆಯುವ ಪ್ರಯತ್ನಗಳಾ ಗಿವೆ. ಅದಕ್ಕೆ ವಿಶೇಷ ಯಶ ಸಿಕ್ಕಿದಂತಿಲ್ಲ.)

## "ರಕ್ತದ ಮರ" (ಡ್ರಾಗನ್ ಟ್ರೀ)

'ಲಿಲಿಯೇಸಿ' ಗುಂಪಿಗೇ ಸೇರಿದ 'ಡ್ರಸೀನಾ ಡ್ರೇಕೋ' ಎಂಬ ಮರವೊಂದಿದೆ. ಇದು ಕೆನೇರಿ ದ್ವೀಪಗಳಲ್ಲಿ 'ಓರೋಟೋವಾ' ಎಂಬ ಪ್ರದೇಶ ದಲ್ಲಿ ಬೆಳೆಯುತ್ತದೆ. ಅದರ ವಯಸ್ಸು ೬,೦೦೦ ವರ್ಷಗಳಿರಬಹುದೆಂದು ಊಹಿಸಲಾಗಿದೆ. ಅದು ವಿಶ್ವದಲ್ಲೇ ಅತ್ಯಂತ ಪುರಾತನವಾದ ಮರ. ತೆಂಗಿನ ಮರದಂತೆ ಕಾಂಡ ೮೦ ಅಡಿ ಇರುತ್ತದೆ. ಅದರ ದಪ್ಪ ಅದ್ಭುತವಾಗಿದೆ. ಹತ್ತು ಜನ ಎರಡು ಕೈಗಳನ್ನು ನೀಡಿ, ಒಬ್ಬರ ಕೈಯನ್ನು ಒಬ್ಬರು ಹಿಡಿದುಕೊಂಡು ಸುತ್ತಿ ಹಾಕಿದರೂ ಅದನ್ನು ಬಳ ಸಲು ಸಾಲುವುದಿಲ್ಲವಂತೆ. ಆ ಮರದ ಕಾಂಡ ದಿಂದ ಒಂದು ತರದ ದಪ್ಪವಾದ ಮತ್ತು ರಕ್ತ ದಂತಹ ದ್ರವವು ಸುರಿಯುತ್ತದಂತೆ.

## ಬೆಣ್ಣೆಯ ಮರ

ಬಂಗಾಲ ಪ್ರಾಂತದಲ್ಲಿ 'ಸಪೋಟೇಸಿ' ಎಂಬ ಗುಂಪಿಗೆ ಸೇರಿದ 'ಬೇಸಿಯಾ ಲ್ಯಾಟ ಫೋಲಿಯಾ' ಎಂಬ ಮರವೊಂದಿದೆ. ಅದಕ್ಕೆ 'ಮಹುವಾ' ಅಥವಾ ಬೆಣ್ಣೆಯ ಮರವೆಂತಲೂ ಹೆಸರು. ಈ ಮರದಿಂದ ಬೆಣ್ಣೆ, ಮೇಣಬತ್ತಿ, ದೀಪದ ಎಣ್ಣೆ, ಅಮಲೇರಿಸುವ ಪಾನೀಯ, ಹುಲ್ಲುಗಾವಲಿಗೆ ಉಪಯೋಗವಾಗುವ ಗೊಬ್ಬರ ಮುಂತಾದವು ದೊರೆಯುತ್ತವೆ. ಆ ಗಿಡದ ಬೀಜದಿಂದ ಎಣ್ಣೆಯನ್ನು ತೆಗೆದು, ಮುಂದೆ ಅದರಿಂದ ಬೆಣ್ಣೆ, ಮೇಣಬತ್ತಿ, ಮುಂತಾದುವನ್ನು ತಯಾರಿಸುತ್ತಾರೆ. ಎಣ್ಣೆ ತೆಗೆದ ಮೇಲೆ ಉಳಿಯುವ ಹಿಂಡಿಯನ್ನು ಗೊಬ್ಬರ ಮಾಡುತ್ತಾರೆ. ಹೂಗಳಿಂದ ಅಮಲೇ-ರುವಂತಹ ಒಂದು ದ್ರವವಸ್ತುವನ್ನು ಭಟ್ಟಿ ಇಳಿಸುತ್ತಾರೆ. ಒಂದು ಕಾಲದಲ್ಲಿ ಅಲ್ಲಿಯ ಜನ ಗಳು, ವರ್ಷದಲ್ಲಿ ಕೆಲವು ತಿಂಗಳು ಆ ಗಿಡದ ಹೂಗಳಿಂದ ತಯಾರಿಸಿದ ಕೆಲವು ಆಹಾರಗಳ ಮೇಲೆಯೇ ಜೀವನ ಸಾಗಿಸುತ್ತಿದ್ದರಂತೆ.

## ಸಸ್ಯಜನ್ಯ ಕೂದಲು

ಅಮೇರಿಕದ ಸಂಯುಕ್ತಸಂಸ್ಥಾನಗಳ ದಕ್ಷಿಣ ಭಾಗದಲ್ಲಿ 'ಸ್ಪ್ಯಾನಿಷ್ ಮಾಸ್' ಅಥವಾ 'ಬ್ರೊಮಿಲಿಯೇಸಿ' ಗುಂಪಿಗೆ ಸೇರಿದ 'ಟಿಲಾಂಡ್ಸಿಯಾ ಉಸ್ನಿಯಾಯಿಡಿಸ್' ಎಂಬ ಗಿಡವೊಂದಿದೆ. ಇದು 'ಮಾಸ್‌ಗಿಡ'ವಲ್ಲವೇ ಅಲ್ಲ. ಆದರೆ ಅದು ಮೇಲೆ ಹೇಳಿದ ಗುಂಪಿಗೆ ಸೇರಿದ 'ಪೈನ್ ಆಪಲ್' (ಅನಾನಾಸ್) ಗಿಡದ ಜಾತಿಗೆ ಸೇರಿದುದು. ಇದು ದೊಡ್ಡ ದೊಡ್ಡ ಮರಗಳ ಕೊಂಬೆಗಳಿಂದ ಬೆಳ್ಳನೆಯ, ತೆಳ್ಳನೆಯ, ಉದ್ದುದ್ದ ಕೂದಲಿನಂತಹ ನೀಳವಾದ ಎಳೆ ಗಳಂತೆ ಜೋತಾಡುತ್ತದೆ. ಅದರ ನೀಳವಾದ ಎಲೆ ಮತ್ತು ಕಾಂಡಗಳನ್ನು ಕೆಲವು ವಿಧಾನ ಗಳಿಂದ ಶುದ್ಧಮಾಡಿ ಹಾಸಿಗೆ, ದಿಂಬು, ಕುಷನ್ ಗಳಲ್ಲಿ ಹತ್ತಿಗೆ ಬದಲಾಗಿ ತುಂಬಲು ಉಪಯೋ ಗಿಸುತ್ತಾರೆ.

## ಬ್ರೆಡ್ ಮರ

ಇದೂ 'ಮೋರೇಸಿ' ಗುಂಪಿಗೆ ಸೇರಿದ್ದು. ಇದರ ಹೆಸರು 'ಆರ್ಟೋರ್ಕಾರ್ಪಸ್ ಇನ್ಸೈಸಾ'. ಇದು ದಕ್ಷಿಣಸಮುದ್ರ (South Sea)ದ ಪ್ರದೇಶಗಳಲ್ಲಿ ದೊರೆಯುತ್ತದೆ. ಈ ಗಿಡದ ಹಣ್ಣಿನಲ್ಲಿ ಬಹು ದೊಡ್ಡ ಮೆತ್ತನೆಯ ಭಾಗವಿರುತ್ತದೆ. ಅದರಲ್ಲಿ ಸಣ್ಣ ಬೀಜಗಳು ಅಲ್ಲೊಂದು ಇಲ್ಲೊಂದು ಇರುತ್ತವೆ. ಒಂದೊಂದು ಹಣ್ಣೂ ಒಬ್ಬ ಮನುಷ್ಯನ ತಲೆಯ ಗಾತ್ರದಷ್ಟು ಇರುತ್ತದೆ. ಈ



ಬ್ರೆಡ್ ಮರ

ಹಣ್ಣನ್ನು ಬೀಜವು ಬಲಿಯುವುದಕ್ಕಿಂತ ಮುಂಚೆಯೇ ಕಿತ್ತು, ಬ್ರೆಡ್ಡನ್ನು ಕತ್ತರಿಸಿದಂತೆಯೇ ದಪ್ಪ ದಪ್ಪ ಪದರಗಳಾಗಿ ಕತ್ತರಿಸಿ, ಬೇಯಿಸುತ್ತಾರೆ. ನೋಡುವುದಕ್ಕಾಗಲಿ, ರುಚಿಯಲ್ಲಾಗಲೀ ಅದು ನಿಜವಾದ ಬ್ರೆಡ್ಡಿನಂತೆಯೇ ಇರುತ್ತದೆ. (ಕರ್ನಾಟಕದ ಮಲೆನಾಡಿನ ಭಾಗದಲ್ಲಿ ಇದನ್ನು ಯಶಸ್ವಿಯಾಗಿ ಬೆಳೆಸಲಾಗಿದೆ).

ಹೀಗೆ ಒಂದು ಗಿಡ ಹಾಲು ಕೊಟ್ಟರೆ, ಇನ್ನೊಂದು ಗಿಡ ಬ್ರೆಡ್ ಕೊಡುತ್ತದೆ. ಒಳ್ಳೆಯ ಜೋಡಿ ಅಲ್ಲವೇ?

## ವಿಷದ ಹಾಲಿನ ಮರ

ಜಾವಾ ದೇಶದಲ್ಲಿ 'ಮೋರೇಸಿ' ಗುಂಪಿಗೆ ಸೇರಿದ ಮತ್ತೊಂದು ಮರ ಇದೆ. ಅದರ ಹೆಸರು 'ಆಂಟಿಯೇರಿಸ್ ಟಾಕ್ಸಿಕೇರಿಯಾ'. ಆ ಮರದ ತೊಗಟೆಯನ್ನು ಚುಚ್ಚಿ ಬಿಟ್ಟರೆ ಒಂದೆರಡು ದಿನಗಳಲ್ಲಿ ಬೇಕಾದಷ್ಟು ವಿಷಯುಕ್ತವಾದ ಹಾಲು ಹೊರಬರುತ್ತದೆ. ಈ ಹಾಲು ರಾಳದಂತೆ ಗಟ್ಟಿಯಾಗುತ್ತದೆ ಅಲ್ಲಿಯ ಜನಗಳು ತಮ್ಮ ಬಾಣ, ಕತ್ತಿ, ಚಾಕು ಮುಂತಾದುವುಗಳಿಗೆ ಇದನ್ನು ತಿಕ್ಕಿ ವಿಷದ ಪದರವನ್ನು ಕೊಡುತ್ತಾರೆ.

## ಪೆಟ್ರೋಲಿನ ಹೂ

'ರೂಟೇಸಿ' ಗುಂಪಿಗೆ ಸೇರಿದ 'ಡಿಕ್ಟಾಮಸ್ ಫ್ರಾಕ್ಸಿನೆಲ್ಲಾ' ಎಂಬ ಗಿಡವು ಅನೇಕ ತೋಟಗಳಲ್ಲಿ ಬೆಳೆಯುತ್ತದೆ. ಆ ಗಿಡದ ಹೂಗಳ ಹತ್ತಿರ, ಬೆಂಕಿ ಕಡ್ಡಿಯನ್ನು ಕೊರೆದು ಹಿಡಿದರೆ ತಕ್ಷಣವೇ ಆ ಹೂವು ಹತ್ತಿಕೊಂಡು ಉರಿಯುತ್ತದೆ. ಕಾರಣ ಇಷ್ಟೆ! ಆ ಹೂಗಳ ತೊಟ್ಟು ಮತ್ತು ಇತರ ಭಾಗಗಳಲ್ಲಿರುವ ಎಣ್ಣೆಯ ಗ್ರಂಥಿಗಳು ತಕ್ಷಣವೇ ಹತ್ತಿ ಉರಿಯುವಂತಹ ಬಾಷ್ಪವನ್ನು ಹೊರಗೆಡವುತ್ತವೆ. ಇದು ಒಣ ಹವೆಯಲ್ಲಿ ಕೂಡಲೆ ಹೊತ್ತಿ ಉರಿಯಬಲ್ಲದು. ಹೊತ್ತಿಕೊಂಡು ಉರಿಯುವಾಗ ನೀಲಿಯ ಉರಿ ಕಾಣುತ್ತದೆ.

---

## ನುಡಿ ಮುತ್ತು

ಶ್ರೇಷ್ಠರಾದವರು ತಾವು ಶ್ರೇಷ್ಠರೆಂದು ಎಂದೂ ಎಣಿಸರು; ಸಾಮಾನ್ಯರಾದವರು ತಾವು ಸಾಮಾನ್ಯರೆಂದೂ ಎಣಿಸರು.

ಮುದಿತನದಿ ತೆಂಗನ್ನು ನೆಟ್ಟವನಂದದಿ ಆಗಲಿಚ್ಛಿಸುವೆ ನಾನು; ತೆಂಗನ್ನು ನೆಟ್ಟವನ ಮೊಮ್ಮಗನಾಗಲಿಚ್ಛಿಸೆನು ನಾನು.

ಸಂಗ್ರಾಹಕರು: ವಿ. ಎ. ಶೆಣೈ



೨೪ ತಾಸುಗಳಲ್ಲಿ ಈ ನಗರ ಹೇಳಹೆಸರಿಲ್ಲದೆ ನಿರ್ನಾಮವಾಗಿಹೋಯಿತು

# ಪಾಂಪೆಯ ಕೊನೆಯ ಕ್ಷಣಗಳು

ಸದಾನಂದ

ಕ್ರಿ. ಶ. ೭೯ ಅಗಸ್ಟ* ೨೪ನೆಯ ತಾರೀಖಿನ ದಿನ ದಕ್ಷಿಣ ಇಟಲಿಯಲ್ಲಿ ನಿತ್ಯದಂತೆ ಅರುಣೋದಯವಾಯಿತು. ಪಾಂಪೇ ನಗರದ ಪ್ರಾಸಾದಗಳು ಮತ್ತು ದೇವಾಲಯಗಳ ಶಿಖರಗಳು ಸೂರ್ಯನ ಹೊಂಬಣ್ಣದ ಕಿರಣಗಳಲ್ಲಿ ಮಿಂದು ಮಿರುಗುತ್ತಿದ್ದವು. ನಗರದಿಂದ ಐದು ಮೈಲು ದೂರದಲ್ಲಿದ್ದ ವೆಸುವಿಯಸ್ ಪರ್ವತದತ್ತ ಮಾತ್ರ ಪಾಂಪೆಯ ವಿಲಾಸಿ ನಾಗರಿಕರ ಲಕ್ಷ್ಯ ಹೋಗಿರಲಿಲ್ಲ. ಒಂದಾನೊಂದು ಕಾಲದಲ್ಲಿ ಜಾಗ್ರತವಿದ್ದ ಮತ್ತು ಇಟಲಿಯಲ್ಲೆಲ್ಲ ಅತಿ ದೊಡ್ಡದಾದ ಆ ಪ್ರಾಚೀನ ಜ್ವಾಲಾಮುಖಿಯ ಮುಖವು ಕಲ್ಲು

* ಕೆಲವರು ನವೆಂಬರ್ ಎಂದು ಅಭಿಪ್ರಾಯ ಪಡುತ್ತಾರೆ.

' ಅಮೃತ ' ದಿಂದ ಸಂಗ್ರಹ



ಬಹುಶಃ ತಾಯಿಮಗಳು ಮೃತ್ಯು ಮುಖದಲ್ಲಿ
ಒಬ್ಬರನ್ನೊಬ್ಬರು ಅಪ್ಪಿಕೊಂಡು ಸತ್ತಿದ್ದಾರೆ

ಗಳ ತರಗಳಿಂದ ಮುಚ್ಚಿಹೋಗಿತ್ತು. ದ್ರಾಕ್ಷೆಯ ಬಳ್ಳಿಗಳು ಪರ್ವತದ ತಪ್ಪಲಲ್ಲಿ ಹಬ್ಬಿದ್ದವು.

ವೆಸುವಿಯಸ್ ಬುಡದಲ್ಲಿ ನೇಪಲ್ಸ್ ಉಪಸಾಗರಕ್ಕೆ ಹೊಂದಿ ೬೦೦ ವರ್ಷಗಳಿಂದ ಪಾಂಪೇ ನಗರ ನೆಲೆಸಿತ್ತು. ಆಗ ಇಟೆಲಿ ತುಂಬ ಸಮೃದ್ಧ ದೇಶವಾಗಿತ್ತು. ಈ ಪಾಂಪೇ ನಗರ ಇಟೆಲಿಯಲ್ಲೆ ಸುಂದರವಾದ ನಗರವೆನಿಸಿತ್ತು. ರೋಮನ್ನರ ಶಿಲ್ಪಕಲಾಚಾತುರ್ಯವೆಲ್ಲ ಈ ನಗರದಲ್ಲಿ ಮೂರ್ತೀಭವಿಸಿದಂತಿತ್ತು. ಸಕಲ ವಿದ್ಯೆ ಮತ್ತು ಕಲೆಗಳ ತವರೂರಾದ ಪಾಂಪೆ ಶ್ರೀಮಂತರೂ ವಿಲಾಸಿಗಳೂ ಆದ ರೋಮನ್ ತರುಣ-ತರುಣಿಯರಿಗೆ ಬೇಸಿಗೆಯ ಕಾಲದಲ್ಲಿ ವಿಹಾರಸ್ಥಳವಾಗಿತ್ತು. ೨೦,೦೦೦ ಜನವಸತಿಯ ಈ ನಗರವು ದಿನದಿನಕ್ಕೂ ಬೆಳೆಯತೊಡಗಿತ್ತು.

ಆದರೆ ಕರಾಳ ಕಾಲನು ಆ ದುರ್ದೈವಿ ದಿನದಂದು ಸುಂದರವಾದ, ಸುಖಿಯಾದ ಈ ನಗರವನ್ನು ಭಸ್ಮೀಭೂತವನ್ನಾಗಿ ಮಾಡಿದನು. ವೆಸು-ವಿಯಸ್ ಜ್ವಾಲಾಮುಖಿಯು ತನ್ನ ಸರ್ವಭಕ್ಷಕ ಬಾಯಿಯನ್ನು ತೆರೆಯಿತು. ಆ ಮುಖದಿಂದ ಹೊರಬಿದ್ದ ಪ್ರಚಂಡ ಅಗ್ನಿಯು ಒಂದೇ ಒಂದು ದಿನದಲ್ಲಿ ಈ ನಗರವನ್ನು ಧ್ವಂಸ ಮಾಡಿತು.

ಕಪ್ಪು, ಬಾದಾಮಿ ಮತ್ತು ಕಂದು ಬಣ್ಣದ ಕಲ್ಲುಗಳ ಪರ್ವತದ ಪಾರ್ಶ್ವಭೂಮಿಯಲ್ಲಿ ಅವೇ ಬಗೆಯ ಕಲ್ಲುಗಳಿಂದ ಕಟ್ಟಿದ ಪಾಂಪೇ ನಗರದ ಪ್ರಾಸಾದಗಳು ಮತ್ತು ದೇವಾಲಯಗಳು ಆ ದಿನ ಮಧ್ಯಾಹ್ನದ ಉರಿಬಿಸಿಲಿನಲ್ಲಿ ಉರಿಹತ್ತಿರುವಂತೆ ದೀಪ್ತವಾಗಿದ್ದವು. ಬಿಸಿಲು ಗಡಿಯಾರ ೧ ಗಂಟೆಯನ್ನು ತೋರಿಸುತ್ತಿತ್ತು. ಅಂಗಡಿಕಾರರು. ಅಂಗಡಿಗಳನ್ನು ಮುಚ್ಚಿ ಊಟಕ್ಕೆಂದು ಮನೆಗೆ ಹೊರಡುವ ತಯಾರಿಯಲ್ಲಿದ್ದರು. ಹೂಜೆಯಂಥ ಕೊಡಗಳಲ್ಲಿ ನೀರು ತುಂಬಿಕೊಂಡು ಹೋಗುತ್ತಿದ್ದ ತರುಣಿಯರು ಕಾರಂಜಿಯ ಬಳಿ ನಿಂತು ಹರಟೆ ಹೊಡೆದು ಬಳಿಕ ಪರಸ್ಪರರ ನಿರೋಪ ತೆಗೆದುಕೊಳ್ಳುತ್ತಿದ್ದರು. ಒಬ್ಬ ಬ್ರೆಡ್ ತಯಾರಿಸುವವ ೮೧ ಬ್ರೆಡ್ಡುಗಳನ್ನು ಬೇಯಿಸಲೆಂದು ಭಟ್ಟಿಯಲ್ಲಿ ಹಾಕಿ ಭಟ್ಟಿಯ ಕಬ್ಬಿಣದ ಬಾಗಿಲನ್ನು ಮುಚ್ಚಿದ್ದನು. ಮದ್ಯದಂಗಡಿಯೊಂದರಲ್ಲಿ ಗಲ್ಲೇ ಪೆಟ್ಟಿಗೆಯ ಮೇಜಿನ ಮೇಲೆ ಒಬ್ಬ ಹಣವನ್ನಿಡುತ್ತಿದ್ದ.

ಅಷ್ಟರಲ್ಲಿ ಒಮ್ಮಿಂದೊಮ್ಮೆ ಭೂಕಂಪದಿಂದ ಇಡೀ ನಗರ ಅಲ್ಲಾಡತೊಡಗಿತು.

ಮದ್ಯದಂಗಡಿಯಲ್ಲಿ ಮೇಜಿನ ಮೇಲಿಟ್ಟಿದ್ದ ಹಣವನ್ನು ಅಂಗಡಿಯ ಪರಿಚಾರಿಕೆ ಗಲ್ಲೆ ಪೆಟ್ಟಿಗೆಯಲ್ಲಿ ಹಾಕಲಿಲ್ಲ. ಭಟ್ಟಿಯಲ್ಲಿದ್ದ ಬ್ರೆಡ್ಡು ಸುಟ್ಟು ಕರಕಿಹೋಯಿತು. (ಇಂದಿಗೂ ಈ ಹೊತ್ತಿ ಕರ್ರಗಾದ ಬ್ರೆಡ್ಡುಗಳನ್ನು ನೇಪಲ್ಸ ವಸ್ತುಸಂಗ್ರಹಾಲಯದಲ್ಲಿ ನೋಡಬಹುದು.) ಭೂಕಂಪದ ಮೊದಲಿನ ಆಘಾತಕ್ಕೇ ಪಾಂಪೆ ನಗರದ ಚಟುವಟಿಕೆಯೆಲ್ಲ ನಿಂತುಹೋಗಿತ್ತು.

ಈ ಭೂಕಂಪವು ಮುಂದೆ ಕೆಲ ನಿಮಿಷಗಳಲ್ಲಿ ವೆಸುವಿಯಸ್ ಜ್ವಾಲಾಮುಖಿ ಉಂಟುಮಾಡಲಿದ್ದ ಸರ್ವನಾಶದ ನಾಂದಿಯಾಗಿತ್ತು. ವೆಸು-ವಿಯಸ್ ಶಿಖರದಿಂದ ಬೆಂಕಿಯ ಪ್ರಚಂಡ

# ಪಾಂಪೆಯ ೫೦ ಅಡಿ ಕೆಸರನ್ನು ಅಗೆದಾಗ ಕಂಡ ದೃಶ್ಯ

ಪಾಂಪೆಯ ಈ ಕೊನೆಯ ದಿನಗಳಲ್ಲಿ ಜನರು ಕಲಾಸಕ್ತರಾಗಿದ್ದಂತೆ ಸುಖ-ಲೋಲುಪರೂ ಆಗಿದ್ದರು.

ಮೃಷ್ಟಾನ್ನ ಭೋಜನ, ಮೋಜು ಮಾಡುವುದು, ವಿಲಾಸಿನಿಯರ ಸಹವಾಸದಲ್ಲಿ ಕಾಲ ಕಳೆಯುವುದು ಈ ಶೂರ ಜನರ ಜೀವನ ಕ್ರಮವಾಗಿತ್ತು. ಆಗ ಗುಲಾಮರನ್ನಿಟ್ಟುಕೊಳ್ಳುವ ಪದ್ಧತಿಯಿದ್ದರೂ ಅದು ಇಳಿತರದಲ್ಲಿತ್ತು. ಯೋಗ್ಯರಾದಗುಲಾಮರಿಗೆ ಸ್ವಾತಂತ್ರ್ಯ ದೊರೆಯುತ್ತಿತ್ತು. ಆದರೆ ಸ್ವತಂತ್ರರಾದ ಮಾತ್ರಕ್ಕೆ ಗುಲಾಮರ ಸಾಮಾಜಿಕ ಅಂತಸ್ತೇನೂ ಒಮ್ಮೆಲೆ ದೊಡ್ಡದಾಗುತ್ತಿರಲಿಲ್ಲ. ರೋಮನ್ ಮತ್ತು ಗ್ರೀಕ್ ಜನರು ತಮ್ಮ ತಮ್ಮ ವಂಶ ಮತ್ತು ಸಂಸ್ಕೃತಿಗಳ ಬಗ್ಗೆ ಅಭಿಮಾನ ಪಡುತ್ತಿದ್ದರು. ಆದರೆ ರೋಮನ್ನರು ಗ್ರೀಕರನ್ನು ಗೆದ್ದವರಾದ್ದರಿಂದ ಗ್ರೀಕರು ತಮಗಿಂತ ಕಡಿಮೆಯೆಂದು ತಿಳಿ-ಯುತ್ತಿದ್ದರು.

ಸುಂದರವಾದ ಪಾಂಪೆ ನಗರ ಭಸ್ಮೀಭೂತವಾದ ದಿನ ಇಡೀ ನಗರಕ್ಕೆ ನಗರವೇ ಗದ್ದಲದಿಂದ ತುಂಬಿ ಹೋಗಿತ್ತು. ನಗರ ಸಭೆಯ ಸದಸ್ಯರನ್ನು ಆರಿಸುವ ದಿನ ಅದಾದ್ದರಿಂದ ಸುತ್ತಮುತ್ತಲಿನ ಹಳ್ಳಿಗಳ ಜನರೂ ನಗರಕ್ಕೆ ಬಂದಿದ್ದರು. ಮತದಾನಕ್ಕೆಂದು ನೆರೆದ ಜನ ವಾದ-ವಿವಾದ ಮಾಡುತ್ತ, ತಮ್ಮ ಹುರಿಯಾಳನ್ನು ಪ್ರಶಂಸಿಸುತ್ತ, ಎದುರಾಳಿಗಳನ್ನು ಹೀಯಾಳಿಸುತ್ತ, ಪ್ರತಿಭಟಿಸುವವರೊಂದಿಗೆ ಜಗಳಾಡುತ್ತ ಕೋಲಾಹಲವನ್ನೆಬ್ಬಿಸಿದ್ದರು.

ವೆಸುವಿಯಸ್ ಪರ್ವತ ಆಗ ಒಮ್ಮೆಲೇ ಅಗ್ನಿಯನ್ನು ಕಾರತೊಡಗಿತು. ಕೇವಲ ೨೪ ತಾಸುಗಳ ಅವಧಿಯಲ್ಲಿ ಪ್ರಕೃತಿಯ ಪ್ರಚಂಡ ಕೋಪಾಗ್ನಿಗೆ ತುತ್ತಾಗಿ ಪಾಂಪೆ ಮತ್ತು ಸಮೀಪದ ಹರಕ್ಯುಲೇನಿಯಂ ನಗರಗಳು ಉಧ್ವ-ಸ್ತವಾದವು.

ಪಾಂಪೆ ನಗರ ಭೂಗತವಾಗಿ ೧೫೦೦ ವರ್ಷಗಳ ನಂತರ ಅದರ ಪೂರ್ವಭಾಗದಲ್ಲಿ ಒಂದು ಒಡ್ಡನ್ನು ಕಟ್ಟುತ್ತಿರುವಾಗ ಡೊಮೆನಿಕೊ ಫೊಂಟಾನಾ ಎಂಬವನಿಗೆ ಅದರ ಕೆಲ ಅವಶೇಷಗಳು ದೊರೆತವು.

೧೮ ನೆಯ ಶತಮಾನದ ವರೆಗೂ ಇಲ್ಲಿ ಸುಯೋಜಿತ ರೀತಿಯಲ್ಲಿ ಉತ್ಖನನ ಕೆಲಸ ಪ್ರಾರಂಭವಾಗಲಿಲ್ಲ. ೧೮೬೧ ರಲ್ಲಿ ಇಟಲಿಯ ಸರಕಾರ ಸುಯೋಜಿತ ರೀತಿಯಲ್ಲಿ ಉತ್ಖನನ ಕಾರ್ಯವನ್ನಾರಂಭಿಸಿತು.

ಈ ಉತ್ಖನನದಿಂದ ಆ ಕರಾಳ ದಿನ ಪಾಂಪೆ ನಗರದಲ್ಲಿ ಸಂಭವಿಸಿದ ದುರಂತದ ಯಥಾರ್ಥ ಚಿತ್ರ ಪೂರ್ಣವಾ-ದಂತಾಗಿದೆ.

ಪಾಂಪೆಯಲ್ಲಿ ಈಗಲೂ ಕಂಡು ಬರುವ ಅವಶೇಷಗಳಿಂದ ಅದರ ವೈಭವ ಮತ್ತು ಆ ಕಾಲದ ಕಲಾ ನೈಪುಣ್ಯದ ಸ್ಪಷ್ಟ ಕಲ್ಪನೆಯುಂಟಾಗುತ್ತದೆ. ಈ ಪ್ರಾಚೀನ ಅವಶಿಷ್ಟ ಸೌಂದರ್ಯವನ್ನು ಈಕ್ಷಿಸಲೆಂದು ಜಗತ್ತಿನ ಎಲ್ಲೆಡೆಗಳಿಂದ ಸಹಸ್ರಾರು ಜನರು ಬರುತ್ತಿರುತ್ತಾರೆ. ಉತ್ಖನನದಲ್ಲಿ ಕಂಡುಬಂದ ಅಲ್ಲಿಯ ಗೋಡೆಗಳು ನಿನ್ನೆ ಮೊನ್ನೆ ಬಣ್ಣ ಕೊಟ್ಟವುಗಳಂತೆ ಹೊಳೆಯುತ್ತಿವೆ.

ಜ್ವಾಲೆಯೊಂದು ಶಹರದ ದಿಕ್ಕಿನಲ್ಲಿ ವೇಗದಿಂದ ಧಾವಿಸುತ್ತಿರುವುದು ಜನರಿಗೆ ಕಾಣಿಸಿತು. ಕ್ಷಣ ಮಾತ್ರ ಎಲ್ಲೆಡೆಯಲ್ಲಿ ಭೀತಿಯ ಮೂಲಕ ಸ್ಮಶಾನಶಾಂತಿ ಹಬ್ಬಿತು. ಮರುಕ್ಷಣದಲ್ಲಿ ಸ್ತ್ರೀಯರು ಆಕ್ರೋಶ ಮಾಡತೊಡಗಿದರು. ಜನರೆಲ್ಲ ಗಾಬರಿಯಿಂದ ದಿಕ್ಕುಗೆಟ್ಟರು.

ಭೂಮಿ ಮತ್ತೆ ನಡುಗತೊಡಗಿತು. ಮನೆಗಳು ಕುಸಿದು ಬೀಳುವ ಸಪ್ಪಳ ಕಿವಿ ಗಡಚಿಕ್ಕತೊಡಗಿತು. ನೋಡನೋಡುವಷ್ಟರಲ್ಲಿ ಬೆಂಕಿಯಿಂದ ಕಾಯ್ದು ಕೆಂಪಗಾದ ಕಲ್ಲುಗಳ ಮಳೆ ಸುರಿಯತೊಡಗಿತು. ಜನರು ಚಲ್ಲಾಪಿಲ್ಲಿಯಾಗಿ ಓಡತೊಡಗಿದರು. ಗದ್ದಲದಲ್ಲಿ ಕೆಳಗೆ ಬಿದ್ದವರು ಇತರರ ಪದಾಘಾತಕ್ಕೆ ಸಿಕ್ಕು ಸತ್ತರು. ಯಾರಿಗೂ ಯಾರ ಪರಿವೆಯೂ ಇರಲಿಲ್ಲ. ತನ್ನ ಜೀವ ಉಳಿಸಿಕೊಳ್ಳಬೇಕು ಎಂಬುದೊಂದೇ ಪ್ರತಿಯೊಬ್ಬನ ಆ ಕ್ಷಣದ ಪರಮಧ್ಯೇಯವಾಯಿತು.

ಪಾಂಪೆ ನಗರಧಲ್ಲಿ ಸರ್ವಸಂಹಾರಕ ಕಾಲನ ತಾಂಡವ ನೃತ್ಯ ಆರಂಭವಾಗಿತ್ತು. "ಜ್ವಾಲಾಮುಖಿ! ಭೂಕಂಪ! ಅಯ್ಯೊ! ಸತ್ತೆ!" ಎಂಬ ಕೂಗುಗಳು ಪ್ರತಿಧ್ವನಿಸತೊಡಗಿದವು.

ವೆಸುವಿಯಸ್ ಮುಖದಿಂದ ಹೊರ ಬೀಳುತ್ತಿದ್ದ ಧೂಳಿನ ಕಪ್ಪು ಮೋಡವು ಆಕಾಶವನ್ನೆಲ್ಲ ವ್ಯಾಪಿಸಿತು. ನಡುಮಧ್ಯಾಹ್ನದಲ್ಲಿ ಅಮಾವಾಸ್ಯೆಯ ಮಧ್ಯರಾತ್ರಿಯಂತೆ ಕತ್ತಲೆ ಹಬ್ಬಿತು. ಜ್ವಾಲಾಮುಖಿಯ ಹೊಟ್ಟೆಯಲ್ಲಿ ಭೀಕರ ಸಪ್ಪಳವಾಗುತ್ತಿತ್ತು. ಅದರ ಮುಖದಿಂದ ಹೊರ ಬೀಳುವ ಪ್ರಖರ ಜ್ವಾಲೆ ಹುಚ್ಚೆದ್ದು ನರ್ತಿಸುತ್ತಿತ್ತು. ಆಕಾಶದಲ್ಲಿ ಹಾರಾಡುತ್ತಿದ್ದ ಪಕ್ಷಿಗಳು ಉಸಿರುಗಟ್ಟಿ ಪಟಪಟ ಭೂಮಿಗೆ ಬಿದ್ದವು. ಭೂಕಂಪದಿಂದ ನೆಲದ ಮೇಲೆ ಅಲ್ಲಲ್ಲಿ ದೊಡ್ಡ ದೊಡ್ಡ ಬಿರುಕುಗಳಾಗಿ ಭೂಗರ್ಭದಲ್ಲಿಯ ನೀರು ಉಕ್ಕೇರಿ ಬಂದು ನಗರದ ಬೀದಿಗಳಲ್ಲಿ ಸ್ವಚ್ಛಂದವಾಗಿ ಹರಿಯಿತು.

ಈ ಆಕಸ್ಮಿಕವಾದ ಭಯಂಕರ ಸಂಕಟದಿಂದ ಜನರು ದಿಕ್ಕೆಟ್ಟರು. ಮೃತ್ಯುವಿನ ದವಡೆಯಿಂದ ಪಾರಾಗಲೆಂದು ಎಲ್ಲರೂ ಸಮುದ್ರದತ್ತ ಓಡುತ್ತಿದ್ದರು. ಪರ್ವತದಿಂದ ಹಾರಿ ಬೀಳುತ್ತಿದ್ದ ಬೂದಿ ಅಲ್ಲಲ್ಲಿ ದಿಬ್ಬವಾಗುತ್ತಿತ್ತು. ಅಲ್ಲಲ್ಲಿ ಯಾವನಾದರೊಬ್ಬ ಪಂಜು ಹೊತ್ತಿಸಿಕೊಂಡು ಹಾದಿ ಹುಡುಕುತ್ತ ಅಡ್ಡಾಡುತ್ತಿದ್ದ. ಆದರೆ ಗಾಳಿಯಿಂದ ಪಂಜು ನಂದಿ ಆ ಕ್ಷಣವೇ ಆ ಮನುಷ್ಯನ ಕೊನೆಯ ನಿಮಿಷವೂ ಆಗುತ್ತಿತ್ತು.

ಹೀಗಿದ್ದರೂ ಅನೇಕ ಜನರು ಇನ್ನೂ ನಗರದಲ್ಲಿ ಓಡಾಡುತ್ತಿದ್ದರು. ತಮ್ಮ ಶರೀರಗಳನ್ನೂ ಅಸ್ಥಿಪಂಜರಗಳನ್ನೂ ಭೂಗರ್ಭದಲ್ಲಿ ಹೂಳಿಟ್ಟು ಮುಂದೆ ೨೦೦೦ ವರ್ಷಗಳ ನಂತರ ಅವುಗಳ ದರ್ಶನವನ್ನು ಜನರಿಗೆ ಮಾಡಿಸಬೇಕಾಗಿತ್ತಲ್ಲವೆ ಅವರು! ಒಬ್ಬಾತ — ಬಹುಶಃ ಆತನೊಬ್ಬ ಲೂಟಿಗಾರನಿರಬೇಕು — ಮುಷ್ಟಿಯಲ್ಲಿ ಬಂಗಾರದ ನಾಣ್ಯಗಳನ್ನು ಹಿಡಿದುಕೊಂಡು ರಸ್ತೆಯಲ್ಲಿ ಸತ್ತು ಬಿದ್ದಿದ್ದ. ಕೆಲವರು ಸತ್ತ ಮನುಷ್ಯನೊಬ್ಬನ ಸಮ್ಮುಖದಲ್ಲಿ ಕೊನೆಯ ಭೋಜನ ಸಮಾರಂಭದಲ್ಲಿ ಮಗ್ನರಾಗಿದ್ದ ಹಾಗೆ ಮೃತ್ಯುವಶರಾಗಿದ್ದರು. ಅನೇಕರು ತಮ್ಮ ಒಡವೆ-ವಸ್ತುಗಳನ್ನು ಸುರಕ್ಷಿತವಾಗಿಡಲೆಂದು ಅವುಗಳನ್ನು ಹುಗಿಯುತ್ತಿದ್ದಂತೆ ಸತ್ತಿದ್ದರು. ಇನ್ನು ಹಲವರು ಮನೆಯ ಬಾಗಿಲು ಕಿಟಿಕಿಗಳನ್ನು ಮುಚ್ಚಿ ನೆಲಮನೆಗಳಲ್ಲಿ ಕುಳಿತಿದ್ದಾಗ ಅಲ್ಲಿಯೆ ಅವರ ಸಮಾಧಿಯಾಗಿತ್ತು. ಮತ್ತೆ ಕೆಲವರು ತಮ್ಮ ಸಾಮಾನುಗಳನ್ನು ಗಾಡಿಗಳಲ್ಲಿ ತುಂಬುವ ಉದ್ಯಮದಲ್ಲಿ ಬದುಕಬಹುದಾದ ಸಂಭವವನ್ನು ಕಳೆದುಕೊಂಡಿದ್ದರು.

ಪರ್ವತದಿಂದ ಹೊರಡುತ್ತಿದ್ದ ಕಪ್ಪು ಹೊಗೆ ದಟ್ಟವಾಗುತ್ತಲೇ ನಡೆದಿತ್ತು. ಕತ್ತಲೆ ಗಾಢವಾದಂತೆ ವೆಸುವಿಯಸ್ ಪರ್ವತದ ಶಿಖರದಲ್ಲಿ ಉರಿಯುತ್ತಿದ್ದ ಜ್ವಾಲೆ ಇನ್ನಷ್ಟು ಉಗ್ರವಾಗಿ ಕಾಣಿಸುತ್ತಿತ್ತು. ಕಾಮನ ಬಿಲ್ಲಿನ ಸೌಂದರ್ಯವನ್ನೂ ನಾಚಿಸುವಂಥ ವಿವಿಧ ಬಣ್ಣಗಳಿಂದ ರಾಜಿಸುವ ಅದರ ಸೌಂದರ್ಯ ಭಯಂಕರವಾಗಿತ್ತು.

ನಡುನಡುವೆ ಜ್ವಾಲಾಮುಖಿಯ ಮುಖದಿಂದ ಬೂದಿಯ ರಾಶಿಗೆ ರಾಶಿಯೆ ಹಾರಿ ನಗರದ ಮೇಲೆ ಬಂದು ಬೀಳುತ್ತಿತ್ತು. ರಸ್ತೆಗಳಲ್ಲೀಗ

ಟೊಂಕಮಟ ಬೂದಿ ಕೂಡಿ ಬಿದ್ದಿತ್ತು. ಪರ್ವತದ ಮೇಲಿಂದ ಕಾದು ಕೆಂಪಾಗಿದ್ದ ದೊಡ್ಡ ದೊಡ್ಡ ಬಂಡೆಗಳು ಉರುಳಿ ಬಂದು ಮನೆಗಳ ಮೇಲೆ ಅಪ್ಪಳಿಸುತ್ತಿದ್ದವು. ಮನೆಗಳು ಕುಸಿದು ರಸ್ತೆಯಲ್ಲಿ ಮಣ್ಣು ಕಲ್ಲು ಬೀಳುತ್ತಿತ್ತು. ಒಮ್ಮೊಮ್ಮೆ ಪರ್ವತದಿಂದ ಉರುಳಿ ಬರುತ್ತಿದ್ದ ಬಂಡೆಗಳು ನಡುವೆಯೆ ಒಂದಕ್ಕೊಂದು ಡಿಕ್ಕಿ ಹೊಡೆದು ಚೂರುಚೂರಾಗಿ ಉರಿಯುವ ತುಣುಕುಗಳು ಹಾರಿ ಬರುತ್ತಿದ್ದವು. ಅವು ಬಿದ್ದಲ್ಲಿ ಬೆಂಕಿ ಹತ್ತಿಕೊಳ್ಳುತ್ತಿತ್ತು.

ಇಷ್ಟು ಹೊತ್ತಿಗೆ ನೆಲ ವಿಪರೀತ ಕಂಪಿಸ ತೊಡಗಿತ್ತು. ಎದ್ದು ನಿಂತು ನಡೆಯುವುದೂ ಅಸಾಧ್ಯವಾಗಿತ್ತು. ಅರ್ಧಕ್ಕಿಂತ ಹೆಚ್ಚು ನಗರ ದಳ್ಳುರಿಯುತ್ತಿತ್ತು. ಉರಿಯುತ್ತಿದ್ದ ವಸ್ತುಗಳಿಂದ ಮತ್ತು ಕುದಿಯುವ ನೀರಿನಿಂದ ಹೊರಡುತ್ತಿದ್ದ ಬಿಸಿಗಾಳಿ ಎಲ್ಲವನ್ನೂ ಬೇಯಿಸಿ ಕರಗಿಸುತ್ತಿತ್ತು. ಆ ಉಷ್ಣವಾಯುವಿಗೆ ಸಿಕ್ಕು ಜನ ಉಸಿರುಗಟ್ಟಿ ಪಟಪಟ ಭೂಮಿಗುರುಳುತ್ತಿದ್ದರು.

ಸಮುದ್ರದತ್ತ ಓಡುತ್ತಿದ್ದ ಜನಸಮೂಹ ನಿಸರ್ಗದ ಈ ಆಕಸ್ಮಿಕ ಆಟದಿಂದ ಸಮುದ್ರವು ಒಳಸೇರಿ ದಂಡೆ ವಿಶಾಲವಾಗಿದ್ದುದನ್ನು ಕಂಡರು. ಅಲ್ಲಿ ಬಿಸಿ ಬೂದಿ, ಕಾದ ಕಲ್ಲುಗಳ ರಾಶಿ ಬಿದ್ದಿತ್ತು. ಅಲ್ಲಿ ನಿಂತುಕೊಳ್ಳುವುದು ಕೂಡ ಶಕ್ಯವಿರಲಿಲ್ಲ.

ಒಂದೇ ಒಂದು ದಿನದ ನಿಸರ್ಗ ಪ್ರಕೋಪದಿಂದ ಮಾನವೀ ಸಂಸ್ಕೃತಿ ಭಸ್ಮೀಭೂತವಾಗಿ ಹೋಗಿತ್ತು.

ಪಾಂಪೆಯ ಅವಸಾನ ಕಾಲದ ಸ್ಥಿತಿಯ ಮಾಹಿತಿಯು "ಪ್ಲಿನಿ ದಿ ಯಂಗರ್" (ಕಿರಿಯ ಪ್ಲಿನಿ) ಎಂದು ಸಾಮಾನ್ಯವಾಗಿ ಕರೆಯುವ ೧೮ ವರ್ಷ ವಯಸ್ಸಿನ ಗೇಅಸ್ ಪ್ಲಿನಿಯಸ್ ಎಂಬ ತರುಣನ ಬರೆಹಗಳಿಂದ ದೊರೆಯುತ್ತದೆ. ಆ ವೇಳೆಯಲ್ಲಿ ಕಿರಿಯ ಪ್ಲಿನಿ ತನ್ನ ತಾಯಿ ಮತ್ತು ಕಕ್ಕನ ಮಗ ಹಿರಿಯ ಪ್ಲಿನಿ ಇವರೊಡನೆ ನೇಪಲ್ಸ್ ಉಪಸಾಗರದ ಮಾಯಸೇನಮ್ ಬಂದರದಲ್ಲಿ ವಾಸಿಸುತ್ತಿದ್ದ. ಹಿರಿಯ ಪ್ಲಿನಿ ಆ ಕಾಲದ ಒಬ್ಬ ಪ್ರಸಿದ್ಧ ನಿಸರ್ಗಶಾಸ್ತ್ರಜ್ಞನಾಗಿದ್ದ. ಚಿಕ್ಕ ಪ್ಲಿನಿ ವೆಸುವಿಯಸ್ ಜ್ವಾಲಾಮುಖಿಯ ಪ್ರಕೋಪದಿಂದ ಉಳಿದುಕೊಂಡವರ ಬಾಯಿಂದ ಕೇಳಿದ ಸಂಗತಿಗಳ ಆಧಾರದಿಂದ ಪಾಂಪೆ ನಗರದ ಅವಸಾನದ ವಿಚಾರದಲ್ಲಿ ರೋಮನ್ ಸಮ್ರಾಟನಿಗೆ ಒಂದು ವರದಿಯನ್ನು ಒಪ್ಪಿಸಿದ.

ಆತ ತನ್ನ ವರದಿಯಲ್ಲಿ ಈ ರೀತಿ ಬರೆದಿದ್ದಾನೆ:— "ಇಷ್ಟು ದೂರದಲ್ಲಿಯೂ ವೆಸುವಿಯಸ್ ಶಿಖರದ ಮೇಲೆ ಅತಿ ಪ್ರಚಂಡ ಜ್ವಾಲೆ ಕಾಣಿಸುತ್ತಿತ್ತು. ಇಡೀ ಪರ್ವತಕ್ಕೇ ಬೆಂಕಿ ಹತ್ತಿದೆಯೇನೋ ಎನಿಸಿತು. ಆ ಜ್ವಾಲೆ ವೇಗದಿಂದ ಪಾಂಪೆ ನಗರದತ್ತ ಚಾಚುತ್ತಿದ್ದಂತೆ ಜ್ವಾಲಾಮುಖಿಯಿಂದ ಹೊರಬಿದ್ದ ಲಾವಾರಸದ ಪ್ರಚಂಡ ಪ್ರವಾಹ ಗುಡ್ಡದಿಂದ ಹರಿಯತೊಡಗಿತು. ಬೆನ್ನಹಿಂದೆಯೇ ದಟ್ಟ ಹೊಗೆಯೆದ್ದು ಆಕಾಶವನ್ನೆಲ್ಲ ವ್ಯಾಪಿಸಿತು. ನಂತರ ಬೂದಿಯ ರಾಶಿ ಹಾರಿ ನಗರದ ಮೇಲೆ ಬಿತ್ತು."

ಪಾಂಪೆ ನಗರದವರನ್ನು ಉಳಿಸಲೆಂದು ಹಿರಿಯ ಪ್ಲಿನಿ ಹಡಗುಗಳನ್ನು ತೆಗೆದುಕೊಂಡು ಆಚೆಯ ದಂಡೆಯ ಕಡೆಗೆ ಹೊರಟ. ಆದರೆ ಭೂಕಂಪ ಮತ್ತು ಜ್ವಾಲಾಮುಖಿಯ ಪ್ರಭಾವದಿಂದ ಸಾಗರವು ಪ್ರಕ್ಷುಬ್ಧವಾಗಿದ್ದುದರಿಂದ ಅವನಿಗೆ ಮುಂದೆ ಹೋಗುವುದು ಅಸಾಧ್ಯವಾಯಿತು.

"ರಾತ್ರಿಯಿಡೀ ಭೂಮಿ ನಡುಗುತ್ತಿತ್ತು. ನಡುನಡುವೆ ಮಿಂಚುತ್ತಿತ್ತು. ಅದರ ಬೆಳಕಿನಲ್ಲಿ ಭೀಕರ ದೃಶ್ಯವನ್ನು ಕಂಡು ಕಾಲುಗಳು ಇರುವಲ್ಲಿಯೇ ತಡೆದು ನಿಲ್ಲುತ್ತಿದ್ದವು. ಮೃತ್ಯುಮುಖದಲ್ಲಿ ಬಿದ್ದಿದ್ದ ಜನರ ಹಾಹಾಕಾರ, ಹೆಂಗಸರು ಮಕ್ಕಳ ಆರ್ತನಾದ ಕೇಳಿಬರುತ್ತಿತ್ತು. ಪರ್ವತದಿಂದ ಹೊರಡುತ್ತಿದ್ದ ಸದ್ದಂತೂ ಅತ್ಯಂತ ಭೀಕರವಾಗಿತ್ತು. ಮಿಂಚುಗಳ ಆರ್ಭಟ, ವಿಶ್ವ-ಸಂಹಾರಕ ಅಗ್ನಿಯ ಆರ್ಭಟ, ತ್ವೇಷದಿಂದ ಬೀಸುತ್ತಿದ್ದ ಗಾಳಿಯ ಆರ್ಭಟ! ಗಾಳಿಯೊಡನೆ ವಿಷಾಕ್ತ ಹೊಗೆ ಮತ್ತು ಉಗಿ ಬರುತ್ತಿತ್ತು.

ಜನ ಪ್ರಾಣ ಉಳಿಸಿಕೊಳ್ಳಲು ಒದ್ದಾಡುತ್ತಿದ್ದರು. ಮಕ್ಕಳನ್ನು ತೊಡೆಯ ಮೇಲೆ ಹಾಕಿಕೊಂಡು ಅವರ ಮೇಲೆ ಬಾಗಿ ಅವರನ್ನು ವಿಷಾಕ್ತ ವಾಯುವಿನಿಂದ ರಕ್ಷಿಸಲು ಹೆಣಗುತ್ತಿದ್ದರು. ನಿರಾಶೆ, ಅಸಹಾಯಕತೆ, ದೌರ್ಬಲ್ಯಗಳ ವಾತಾವರಣ ತಾನೇ ತಾನಾಗಿ ಮೆರೆಯುತ್ತಿತ್ತು."

ಆ ರಾತ್ರಿ ವೆಸುವಿಯಸ್‌ದ ಮುಖದಿಂದ ಹಾರಿದ ಬೂದಿ ನೂರಾರು ಮೈಲು ದೂರದ ಆಫ್ರಿಕ, ಇಜಿಪ್ತ, ಸಿರಿಯ ದೇಶಗಳವರೆಗೂ ಹೋಗಿ ಬಿದ್ದಿತೆಂದು ಇತಿಹಾಸದಲ್ಲಿ ಉಲ್ಲೇಖವಿದೆ.

ಅಂದು ರಾತ್ರಿ ಮಾಯಸೇನಮದಲ್ಲಿ ಕೂಡ ಬಿಸಿ ಬೂದಿ ಮತ್ತು ಕಲ್ಲುಗಳ ಮಳೆಯಾಯಿತು. ಜನರು ನಗರವನ್ನು ತ್ಯಜಿಸತೊಡಗಿದರು. ಪ್ಲಿನಿ ಕೂಡ ತನ್ನ ತಾಯಿಯೊಂದಿಗೆ ಹೊರಟ. ಪಾಂಪೆ ನಗರದ ಸೀಮೆಯನ್ನು ದಾಟಿ ಬದುಕಿಕೊಳ್ಳಲೆಂದು ಒದ್ದಾಡುತ್ತಿದ್ದ ನಾಗರಿಕರ ಶೋಚನೀಯ ಸ್ಥಿತಿ ಪ್ಲಿನಿಗೆ ಕಾಣಿಸುತ್ತಿತ್ತು. ಸ್ಟೇಬಿಯೇದ ದಂಡೆಯಲ್ಲಿ ಲಂಗರು ಹಾಕಿ ನಿಂತಿದ್ದ ಹಡಗದ ಮೇಲೆ ಇದ್ದ ಹಿರಿಯ ಪ್ಲಿನಿ ಒಮ್ಮೆ ದೊಡ್ಡ ಶ್ವಾಸವನ್ನೆಳೆದುಕೊಂಡು ಸತ್ತುಬಿದ್ದ.

ಆ ಕಾಳರಾತ್ರಿ ಕೊನೆಗೊಂಡಿತು. ೨೮ ತಾಸುಗಳ ಭಯಂಕರ ಉದ್ರೇಕದ ನಂತರ ವೆಸುವಿಯಸ್ ಶಾಂತವಾಯಿತು. ಅನಂತರ ಪ್ರಚಂಡ ಮಳೆ ಬೀಳಲಾರಂಭಿಸಿತು. ಆ ಮಳೆ ಬೂದಿಯ ರಾಶಿಯ ಅಡಿಯಲ್ಲಿ ಹುಗಿದು ಬಿದ್ದವರ ಮೇಲೆ ಗಿಲಾಯಿ ಕೆಲಸ ಮಾಡಿತು. ಹೀಗಾಗಿ ಶತಮಾನಗಳು ಕಳೆದರೂ ಆ ಜನರು ತಮ್ಮ ಜೀವಿತದ ಕೊನೆಯ ಅವಸ್ಥೆಯಲ್ಲೇ ಅಚ್ಚಳಿಯದೆ ಉಳಿಯುವಂತಾಯಿತು. ಅಂದು ಪಾಂಪೆ ನಗರ ಭೂಗರ್ಭದಲ್ಲಿ ಹುಗಿದುಹೋಯಿತು. ಹರ್ಕ್ಯುಲನಿಯಮ್ ನಗರದ ಮೇಲಂತೂ ೬೦ ಫೂಟು ದಪ್ಪದ ಕೆಸರಿನ ಥರ ಕೂತಿತು.

ಮರುದಿನ ಬೆಳಗಾಯಿತು. ಮುನ್ನಾ ದಿನದ ಅಗ್ನಿಯಿಂದ ಬೆಂದ ಆ ವಿಶಾಲ ಸಾಗರದ ಮೇಲೆ ಉಷಾದೇವಿ ನಗುತ್ತ, ನಾಚುತ್ತ, ಒಯ್ಯಾರದಿಂದ ಆಡತೊಡಗಿದಳು. ಗಾಳಿ ಶಾಂತವಾಯಿತು. ಸಾಗರದ ನೀರಿನ ಬಣ್ಣ ನೀಲಿಯಾಗತೊಡಗಿತು.

"೧೦ ಮೈಲು ದೂರದಲ್ಲಿ ವೆಸುವಿಯಸ್ ಮುಖದಲ್ಲಿ ಕಪ್ಪು ಮೋಡಗಳ ಚಿಕ್ಕ ಚಿಕ್ಕ ಅವಶೇಷಗಳು ಇನ್ನೂ ಸುಳಿದಾಡುತ್ತಿದ್ದವು. ಆಗೊಮ್ಮೆ ಈಗೊಮ್ಮೆ ಸಣ್ಣದೊಂದು ಜ್ವಾಲೆ ಕೂಡ ಏಳುತ್ತಿತ್ತು. ಯಾವ ದಂಡೆಯಲ್ಲಿ ಪಾಂಪೆ ಮತ್ತು ಹರ್ಕ್ಯುಲನಿಯಮ್ ನಗರಗಳು ನಿಂತಿದ್ದವೊ ಆ ದಂಡೆ ಇಂದು ನಿರ್ಮಾನುಷವಾಗಿ ರಣ ಸುರಿಯುತ್ತಿತ್ತು'' ಎಂದು ಕಿರಿಯ ಪ್ಲಿನಿ ಸಮುದ್ರ ಮಾರ್ಗವಾಗಿ ರೋಮಕ್ಕೆ ಹೊರಟಾಗ ವೆಸುವಿಯಸ್ ಶಾಂತವಾಗುತ್ತಿದ್ದಾಗಿನ ದೃಶ್ಯವನ್ನು ವರ್ಣಿಸಿದ್ದಾನೆ.



## ದೇಹದ ಪ್ರತಿಭಟನೆ

ದೇಹಕ್ಕೂ ಆತ್ಮಕ್ಕೂ ವಿವಾದವುಂಟಾದಾಗ ದೇಹಕ್ಕೆ ತನ್ನ ಅಭಿಪ್ರಾಯಗಳನ್ನು ತಿಳಿಯಾಗಿ ವಿವರಿಸಲು ಶಕ್ತಿಯಿದ್ದರೆ ಅದೇ ಗೆಲ್ಲುವುದು ಖಂಡಿತ. ಆದರೆ ಅದಕ್ಕೆ ಶಕ್ತಿಯಿಲ್ಲ. ಆತ್ಮವು ದೇಹದ ಮತವನ್ನು ತಪ್ಪಾಗಿ ಹೇಳಿದಾಗ ದೇಹವು ಕೆಮ್ಮು, ಮಲಬದ್ಧತೆ ಮೊದಲಾದ ಬಂಡಾಯದ ಕೃತಿಗಳಿಂದ ಉತ್ತರ ಕೊಡುತ್ತದಷ್ಟೇ. ಇದರಿಂದ ದೇಹಕ್ಕೆ ಯಾವಾಗಲೂ ಅನ್ಯಾಯವಾದ ಅಪವಾದವೇ ಬರುತ್ತದೆ.

—ಅಜ್ಞಾತ

ಕಣ್ಣೀರು ಸುರಿಸುವುದರಲ್ಲಿ ಒಂದು
ಮನೋವೈಜ್ಞಾನಿಕ ಉದ್ದೇಶ ಅಡಗಿದೆ

# ಅಳುವುದಕ್ಕೆ ನಾಚಬೇಡಿ!

ಕೆ. ಪ್ರಭಾಕರ ರಾವ್

ಅಳುವುದರಲ್ಲೂ ಹಲವು ಬಗೆಗಳುಂಟು. ಮೂಕ ಅಳು, ವೇದನೆಯ ಅಳು, ಪ್ರತ್ಯಕ್ಷ ಅಳು—ಹೀಗೆ ಅಳುವುದನ್ನು ಸ್ಥೂಲವಾಗಿ ಮೂರು ವಿಭಾಗಗಳಾಗಿ ಮನಃಶಾಸ್ತ್ರಜ್ಞರು ವಿಂಗಡಿಸಿದ್ದಾರೆ. ಮೂಕ ಅಳು ಮತ್ತು ವೇದನೆಯ ಅಳುವಿನಲ್ಲಿ ಕಣ್ಣೀರು ಬರುವುದಿಲ್ಲ; ಕರುಣೆಯೇ ಕಣ್ಣೀರ ಬದಲು ಹರಿಯುವುದು. ಪ್ರತ್ಯಕ್ಷ ಅಳುವಿನಲ್ಲಿ ನಮಗೆ ಕಣ್ಣೀರು ಕಾಣಿಸುತ್ತದೆ. ಆದರೆ, ಈ ಜಗತ್ತಿನಲ್ಲಿ ಅಳದವರು ಯಾರೂ ಇಲ್ಲ—ನಾವೆಲ್ಲ ಒಂದಲ್ಲ ಒಂದು ದಿನ ಅತ್ತಿದ್ದೇವೆ ಇನ್ನೂ ಅತ್ತಿಲ್ಲವಾದರೆ ನಾಳೆ ಅಳುವವರಿದ್ದೇವೆ, ಅಳುವುದು ಅಗತ್ಯ ಎಂದು ಮಾನಸಶಾಸ್ತ್ರಜ್ಞರು ಹೇಳುತ್ತಾರೆ.

ಶ್ರೀಧರ ಶಾಸ್ತ್ರಿಗಳ ಮೂರು ವರ್ಷದ ಮಗು ಮಾಳಿಗೆಯ ಮೆಟ್ಟಿಲ ಮೇಲಿನಿಂದ ಧಡಧಡನೆ ಹೊರಳಿ ಕೆಳಗೆ ಬಿದ್ದಾಗ, ಶಾಸ್ತ್ರಿಗಳಿಗೆ ಒಮ್ಮೆ ಜೀವವೇ ಹಾರಿಹೋದಂತಾಯಿತು. ಅವರು ಕೂಡಲೇ ಡಾಕ್ಟರರಿಗೆ ಫೋನು ಮಾಡಿದರು. ಆಗ ಡಾಕ್ಟರರು ಕೇಳಿದ ಮೊದಲನೇ ಪ್ರಶ್ನೆ: "ಮಗು ಈಗ ಏನು ಮಾಡುತ್ತಿದೆ?" "ಅಳುತ್ತಿದೆ" ಎಂದು ಶಾಸ್ತ್ರಿಗಳು ಉತ್ತರವಿತ್ತರು. "ಸರಿ; ಅದು ಒಳ್ಳೆಯ ಲಕ್ಷಣ" ಎಂದರು ಡಾಕ್ಟರರು. ಅಳುವುದು ಒಳ್ಳೆಯ ಲಕ್ಷಣ ಎಂದು ಹೇಳಿದ ಡಾಕ್ಟರರ ಮಾತು ಶಾಸ್ತ್ರಿಗಳಿಗೇನೂ ರುಚಿಸಲಿಲ್ಲ. ಅವರು ಮತ್ತೂ ಗಲಿಬಿಲಿಗೊಂಡರೆಂದೇ ಹೇಳಬೇಕು. ಸ್ವಲ್ಪ ಹೊತ್ತಿನಲ್ಲೇ ಮಗು ಅಳು ನಿಲ್ಲಿಸಿತು. ಆ ಹೊತ್ತಿಗಾಗಲೇ ಡಾಕ್ಟರರು ಬಂದು ಚಿಕಿತ್ಸೆಯನ್ನು ನಡೆಸಿದ್ದರು. ಮಗು ಅತ್ತದ್ದು ಒಳ್ಳೆಯದಾಯಿತು. ಇಲ್ಲದಿದ್ದರೆ ಅದು ದೀರ್ಘಕಾಲ ನರಳಬೇಕಾಗುತ್ತಿತ್ತು ಅತ್ತದ್ದರಿಂದ ಪ್ರಾಣದ ಭಯವೂ ತಪ್ಪಿತು ಎಂದು ಡಾಕ್ಟರರು ಮಕ್ಕಳು ಬಿದ್ದಾಗ, ಪೆಟ್ಟು ತಗಲಿದಾಗ ಏಕೆ ಅಳಬೇಕೆಂಬುದನ್ನು ಶಾಸ್ತ್ರಿಗಳಿಗೆ ವಿವರಿಸಿ ಹೇಳಿದರು.



ಆರೋಗ್ಯವುಳ್ಳ ದೃಢಕಾಯರು ಅಳುವುದಿಲ್ಲವೆಂದು ನಾವು ಶಾಲೆಗೆ ಹೋಗುತ್ತಿದ್ದಾಗ ಚಿಕ್ಕಂದಿನಲ್ಲಿ ಓದಿದ್ದೇವೆ. ಮಕ್ಕಳು, ಹೆಂಗಸರು



ಮತ್ತು ಹೆಣ್ಣಿಗರುಳಿನ ಹೇಡಿ ಗಂಡಸರು ಮಾತ್ರ ಅಳುತ್ತಾರೆಯೆಂದೂ ನಾವು ಕೇಳಿದ್ದೇವೆ. ಆದರೆ, ಆ ಅಭಿಪ್ರಾಯವು ತಪ್ಪಾಗಿದೆಯೆಂದು ಬುದ್ಧಿವಂತರು ಹೇಳುತ್ತಾರೆ.

ಮಕ್ಕಳು ಬಿದ್ದಾಗ, ಪೆಟ್ಟು ತಗಲಿದಾಗ ಅಳುವುದು ಸ್ವಾಭಾವಿಕವಾದ ಕ್ರಿಯೆ. ನಾವು ಆ ಅಳುವಿನಲ್ಲಿ ವಿಶೇಷವನ್ನು ಕಾಣುವುದಿಲ್ಲ. ಆದರೆ, ಆದ ನೋವನ್ನು, ಆಘಾತವನ್ನು, ವೇದನೆಯನ್ನು ನಿರೋಧಿಸುವ ಮತ್ತು ಆ ಪೆಟ್ಟಿನಿಂದಾದ ಮಾನಸಿಕ ಆಘಾತದ ಬಲವನ್ನು ಮುರಿಯುವ ಸಾಧನವಾಗಿ, ಆ ಅಳು ಸಹಾಯಕವಾಗಿದೆಯೆಂದು ನಮಗಿನ್ನೂ ಗೊತ್ತಿಲ್ಲ. ಕಣ್ಣಿನಿಂದ ನೀರು ಹರಿದು ಹೋದಾಗ, ವೇದನೆಯ ಅಥವಾ ಆಘಾತದ ಪ್ರಮಾಣವು ಕಡಿಮೆಯಾಗುವುದು. ಈ ಈ ಮಾತು ಬರೀ ಮಕ್ಕಳಿಗಲ್ಲ, ಪ್ರಾಯಪ್ರಬುದ್ಧರಿಗೂ ಅನ್ವಯಿಸುವುದು. ಕಣ್ಣಿನಿಂದ ನೀರು ಹರಿದು ಹೋಗದಿದ್ದರೆ, ಮನಸ್ಸಿಗಾಗಲಿ ದೇಹಕ್ಕಾಗಲಿ ಉಂಟಾದ ಆಘಾತವು ಅಲ್ಲೇ ಹೃದಯದಲ್ಲಿ ದಳ್ಳುರಿಯಾಗಿ ಇಡಿಯ ದೇಹವನ್ನೇ ದಹಿಸುವುದು. ಮನಸ್ಸಿಗೆ ಭಯವಾದಾಗಲೂ ಕಣ್ಣಿನಿಂದ ನೀರು ಬರುವುದು; ನೀರು ಹರಿದು ಹೋದಂತೆ ಭಯವು ಕಡಿಮೆಯಾಗುವುದು.

ನಾವು ನಮ್ಮ ಜೀವನದ ಪರಿಮಿತಗಳಲ್ಲಿ ಎಂದಾದರೊಮ್ಮೆ ಯಾವುದೇ ಒಂದು ಘಟನೆಯಲ್ಲಿ ಪರಾಜಿತರಾಗಿರಬಹುದು; ನಮ್ಮ ಆಶೆ ಭಂಗವಾಗಿರಬಹುದು. ಆಗ ನಮಗೆ ಅಳುವ ಇಚ್ಛೆಯಾಗಿತ್ತು. ಆದರೆ ಸಮಾಜವು ಏನು ಹೇಳಬಹುದೋ ಎಂಬ ಭಯದಿಂದ ನಾವು ನಾಲ್ಕು ಜನರಿಗೆ ತಿಳಿಯುವಂತೆ ಅಳಲಿಲ್ಲ. ಮರೆಯಲ್ಲಿ ನಿಂತು ಕಣ್ಣೀರೊರಸಿಕೊಂಡಿದ್ದೇವೆ. ಹಾಗಾದರೆ ನಿಜವಾಗಿಯೂ ನಾವು ಪ್ರಾಮಾಣಿಕರು. ಆದರೂ ಹೃದಯದ ಬಿಗಿತವನ್ನು ಸಡಲಿಸುವಲ್ಲಿ, ಬಹಿರಂಗವಾಗಿ ಅತ್ತರೂ ಅದರಿಂದ ನಾಚಿಕೆಯೇನಿಲ್ಲ. ನಾವು ಚಲಚ್ಚಿತ್ರಗಳನ್ನು ನೋಡಿದ್ದೇವೆ. ಕಾದಂಬರಿಗಳನ್ನು ಓದಿದ್ದೇವೆ. ಅವುಗಳಲ್ಲಿನ ಹೃದಯವನ್ನು ಹಿಂಡುವ ಘಟನೆಗಳನ್ನು ಕಂಡಾಗ ಅಥವಾ ಓದಿದಾಗ, ಎಷ್ಟೋ ವೇಳೆ ನಮಗರಿವಿಲ್ಲದಂತೆಯೇ ಒಂದೆರಡು ಹನಿ ಕಣ್ಣಿನಿಂದ ಜಾರಿ ಹೋಗಿದೆ.

ಸ್ನೇಹಿತರ ದಹನ ಅಥವಾ ದಫನ ಕ್ರಿಯೆಗೆ ನಾವು ಹೋಗಿರಬಹುದು; ಅಪಘಾತದಿಂದ ಎಳೆಯ ವಯಸ್ಸಿನಲ್ಲಿ ಸತ್ತ ಮಗುವಿಗಾಗಿ ಹೆತ್ತ ತಾಯಿ ಪ್ರಲಾಪಿಸುವುದನ್ನು ನಾವು ನೋಡಿರಬಹುದು; ಆಗ ನಮ್ಮ ಹೃದಯ ಮತ್ತು ಮನಸ್ಸಿನಲ್ಲಿ ಯಾವ ಭಾವನೆಯಾಗಿರಬೇಕು? ಅದನ್ನು ವಿವರಿಸಲು ಸಾಧ್ಯವಿಲ್ಲ. ಅದು ಮನುಷ್ಯನ ಅಂತರಂಗಕ್ಕೆ ಸಂಬಂಧಿಸಿದ ವಿಷಯವಾಗಿರುತ್ತದೆ. ನಾವು ಹೆಚ್ಚು ಹೊತ್ತು ಅಲ್ಲಿ ನಿಂತಿರಲಾರೆವು;—ಕಾರಣ, ಅಂಥ ಕರುಣಾಜನಕ ದೃಶ್ಯಗಳು ನಮಗೆ ಕಣ್ಣೀರು ಬರುವಂತೆ ಮಾಡುವವು. ಒಂದು ವೇಳೆ ನಾವು ಅಲ್ಲೇ ನಿಂತಿದ್ದರೆ ನಾವು ಅತ್ತಿರಲೇಬೇಕು.

ಅಳುವುದರಲ್ಲಿ ಇನ್ನೂ ಒಂದು ವಿಧವಿದೆ.—ಹೃದಯದೊಳಗೇ ಅಳುವುದು. ಈ ವಿಧಾನ ಮನುಷ್ಯನ ಆರೋಗ್ಯದ ಮೇಲೆ ಭಯಂಕರವಾದ ಪರಿಣಾಮವನ್ನುಂಟುಮಾಡುವುದೆಂದು ಮಾನಸ

ಶಾಸ್ತ್ರಪರಿಣತರು ಹೇಳುತ್ತಾರೆ ಹಾಗೆ ಮಾಡುವುದರಿಂದ ಚರ್ಮರೋಗಗಳು ಬರುವುವು. ನ್ಯೂಯಾರ್ಕಿನ ಮನಃಶಾಸ್ತ್ರಜ್ಞ ಸೆಲ್ವಿನ್ ಬ್ರಾಡಿಯವರ ಅಭಿಪ್ರಾಯದಂತೆ ಹುಣ್ಣು-ವ್ರಣಗಳು, ದಮ್ಮು, ಹೃದಯಕ್ಕೆ ಸಂಬಂಧಿಸಿದ ರೋಗಗಳು-ಮೊದಲಾದುವು ಕಣ್ಣಿನಿಂದ ನೀರನ್ನು ಹರಿಸದೆ ಬಲಾತ್ಕಾರವಾಗಿ ತಡೆದಿರಿಸಿಕೊಂಡುದರಿಂದ ಬರಬಹುದು. "ಮಕ್ಕಳನ್ನು ಅಳಲು ಬಿಡದ ತಾಯಿ ತಂದೆಗಳು ಅವುಗಳನ್ನು ಎಲ್ಲ ಬಗೆಯ ವಿಕಾರಗಳಿಗೆ ಗುರಿಮಾಡುತ್ತಾರೆ," ಎನ್ನುತ್ತಾರೆ ಅವರು.

ಡಾ. ಬ್ರಾಡಿಯವರಿಗೆ ಒಬ್ಬಳು ರೋಗಿ ಇದ್ದಳು. ಅವಳು ಸಂಗೀತಗಾರಳಾಗಿದ್ದಳು. ೨೫ ನೇ ವಯಸ್ಸಿನಲ್ಲಿ ಅವಳು ಒಂದು ವಿಧವಾದ ಚರ್ಮರೋಗಕ್ಕೆ ಬಲಿಯಾದಳು. ತೋರಿಕೆಗೆ ಸಾಮಾನ್ಯವಾದ ರೋಗವಾಗಿದ್ದರೂ ಯಾವ ಆಧುನಿಕ ಔಷಧಿಯೂ ಆ ರೋಗವನ್ನು ಗುಣಪಡಿಸಲು ಸಮರ್ಥವಾಗಲಿಲ್ಲ. ಕೊನೆಗೆ ಡಾಕ್ಟರರು ಅವಳ ಮೈಮೇಲಿನ ವ್ರಣಗಳನ್ನು "ಅಳುವ ಹುಣ್ಣುಗಳು" ಎಂದು ಕರೆದರು. ■ ಸಂಗೀತಗಾರಳು, ಅವಳ ಜೀವನದಲ್ಲಿ ಒಮ್ಮೆಯೂ—ಎಂಥ ಸಂದರ್ಭದಲ್ಲೂ—ಕಣ್ಣೀರಿಳಿಸಿದವಳಲ್ಲವಂತೆ. ಬೋಸ್ಟನ್‌ನ ಆಸ್ಪತ್ರೆಯ ಒಬ್ಬಳು ನರ್ಸಳಿಗೆ, ಅವಳ ತಂದೆಯು ತೀರಿಕೊಂಡಾಗ ಅಳಬಾರದೆಂದು ಅವಳ ಡಾಕ್ಟರರು ಕಟ್ಟಪ್ಪಣೆಯನ್ನು ವಿಧಿಸಿದರು. ಮೊದಲೇ ಶೋಕಸಾಗರದಲ್ಲಿ ಮುಳುಗಿದ್ದ ಅವಳ ತಾಯಿ, ಮಗಳ ಅಳುವಿಕೆಯಿಂದ ಮತ್ತೂ ಭಯಂಕರವಾದ ದುಃಖಕ್ಕೆ ಒಳಗಾಗಬಹುದೆಂದು ಆ ಡಾಕ್ಟರರ ಅಭಿಪ್ರಾಯವಾಗಿತ್ತು. ಆದರೆ, ■ ಅಭಿಪ್ರಾಯ ತಪ್ಪು. ನರ್ಸು ಬಂದ ಅಳುವನ್ನು ಹತ್ತಿಕ್ಕಿಕೊಂಡಳೇನೋ ನಿಜ. ಆದರೆ, ಸ್ವಲ್ಪ ಸಮಯದಲ್ಲೇ ಮೈತುಂಬ ಎದ್ದ ಸೋರುವ ಹುಣ್ಣುಗಳಿಂದ ಆ ನರ್ಸ್ ತೀರಿಕೊಂಡಳು. ಈ ವಿಷಯವನ್ನು ಬೇರೆಯವರು ಹೇಳುತ್ತಿದ್ದರೆ ನಂಬಲು ಕಷ್ಟವಾಗುತ್ತಿತ್ತು. ಆದರೆ, ಮ್ಯಾಸಾಚುಸೆಟ್ಸ್ ಜನರಲ್ ಹಾಸ್ಪಿಟಲ್‌ನ ಮುಖ್ಯ ಮನಃಶಾಸ್ತ್ರಜ್ಞರಾದ ಡಾ. ಎರಿಕ್ ಲಿಂಡ್‌ಮನ್ ಈ ವಿಷಯವನ್ನು ಹೇಳಿದುದರಿಂದ ನಾವು ನಂಬುತ್ತೇವೆ.

ತಲೆನೋವು ಮತ್ತು ಒಳಜ್ವರವು ಅಳದೇ ಇರುವುದರಿಂದ ಬರುವ ರೋಗಗಳಾಗಿವೆ. ಅಳುವುದು ಹೇಗೆಂದರಿಯದ ಮಕ್ಕಳಾಗಲೀ ಗಂಡಸರಾಗಲೀ ಹೆಂಗಸರಾಗಲೀ ಈ ಜಗತ್ತಿನಲ್ಲಿ ಇದ್ದಾರೆಯೆಂದು ಹೇಳಿದರೆ ನೀವು ನಂಬುತ್ತೀರಾ? ಡಾ. ಬ್ರಾಡಿ ಹೇಳುತ್ತಾರೆ: "ಅಳುವುದು ನಗುವುದರಷ್ಟು ಮೋಜೆನಿಸಲಿಕ್ಕಿಲ್ಲ. ಆದರೆ ಅದಕ್ಕಿಂತ ಹೆಚ್ಚು ಉಪಕಾರಿಯಾಗಿದೆ."

ಕಣ್ಣೀರು ನಿಶ್ಶಕ್ತಿಯ ಕುರುಹು ಎನ್ನುವವರೂ ನಮ್ಮಲ್ಲುಂಟು. ಹಾಗೆ ಹೇಳುವುದು ವಿಷಯದ ಕುರಿತಾದ ಅಜ್ಞಾನವನ್ನು ಸೂಚಿಸುತ್ತದೆ ಸೀಜರನ ಹೆಸರನ್ನು ನೀವು ಕೇಳಿರಬಹುದು. ಅವನ ಕಾಲದಲ್ಲಿ ಅವನು ಜಗತ್ತಿನ ಏಕಮೇವಾದ್ವಿತೀಯ ವೀರನಾಗಿದ್ದ. ಆತನೊಮ್ಮೆ ರೋಮನರ ಮೂರು ಬಲಾಢ್ಯವಾದ ದಂಡುಗಳನ್ನು





ಪ್ರತಿಯೊಬ್ಬರ ಕೈಯಲ್ಲೂ ರೋಮದ ವಿಜಯ ಚಿಹ್ನೆಯಾದ ಚಿನ್ನ-ಬೆಳ್ಳಿಯ ಹದ್ದುಗಳುಳ್ಳ ಪತಾಕೆಗಳನ್ನು ಕೊಟ್ಟು ಜರ್ಮನಿಯ ಮೇಲೆ ಕಳುಹಿದನು. ಕೆಲ ತಿಂಗಳಲ್ಲೆ ೨೫,೦೦೦ ಸೈನ್ಯವು ನಿರ್ನಾಮವಾಗಿ, ಅಮೂಲ್ಯವಾದ ಪತಾಕೆಗಳನ್ನು ವೈರಿಗಳು ವಶಪಡಿಸಿಕೊಂಡರೆಂಬ ಸುದ್ದಿ ಸೀಜರನಿಗೆ ತಲುಪಿತು. ಕೂಡಲೇ, ಆತ ಪ್ರಜ್ಞಾಶೂನ್ಯನಾಗಿ ನೆಲಕ್ಕೆ ಬಿದ್ದ. ಆತ ಮತ್ತೆ ಎಚ್ಚರ ತಿಳಿದಾಗ, ದೊಡ್ಡ ಧ್ವನಿಯಿಂದ ಮಕ್ಕಳಂತೆ ಅತ್ತುಬಿಟ್ಟ. ವಿಖ್ಯಾತ ಪುರುಷರು ಅತ್ತರೆ ಒಂದು ಇತಿಹಾಸವೇ ಆಗುತ್ತದೆ. ಕೊರಿಯಾದಲ್ಲಿ ತಾತ್ಕಾಲಿಕ ಯುದ್ಧ ನಿವರ್ತನೆಯ ಸಂಧಿಗೆ ಸಹಿ ಹಾಕಿದಾಗ, ಪ್ರಥಮ ಅಮೇರಿಕನ್ ಜನರಲನಾಗಿದ್ದು ತನಗೆ ಸ್ಪಷ್ಟವಾದ ವಿಜಯವನ್ನು ಸಂಪಾದಿಸಲಾಗಲಿಲ್ಲವೆಂದು ಜ. ಮಾರ್ಕ್ ಕ್ಲಾರ್ಕ್ ಪಶ್ಚಾತ್ತಾಪದಿಂದ ಕಣ್ಣೀರಿಳಿಸಿದನು.

ನಮ್ಮ ಸಮಾಜದಲ್ಲಿ ಹೇಳಲಾಗುತ್ತಿರುವ ನಾಣ್ಣುಡಿಯಂತೆ ಇವರೆಲ್ಲ ಹೆಂಗಸರ ಸ್ವಭಾವದ "ಅಳುಬುರುಕ" ಗಂಡಸರೇ ? ಅಲ್ಲ. ಅವರೆಲ್ಲ ಪ್ರಾಮಾಣಿಕತೆಯ ಕಣ್ಣೀರಿಳಿಸಿದ್ದಾರೆ. ಅಳುವುದು ನಾಚಿಕೆಯೆಂದಾಗಲೀ ಅಪಮಾನವೆಂದಾಗಲೀ ತಿಳಿಯುವುದು ತಪ್ಪೆಂದು, ನಿತ್ಯವೂ ಅಪ್ರಾಮಾಣಿಕತೆಯ ಕಣ್ಣೀರಿಳಿಸುತ್ತಿರುವ ನಮ್ಮ ಸಮಾಜಸುಧಾರಕರಿಗೆ ತೋರಿಸಿಕೊಟ್ಟಿದ್ದಾರೆ.

ಆಧುನಿಕ ಮನಃಶಾಸ್ತ್ರಕ್ಕೆ ಸಂಬಂಧಿಸಿದ ವೈದ್ಯಕ ಪದ್ಧತಿಯಂತೆ, ಅಳುವುದು ನಿಜವಾಗಿಯೂ ಆರೋಗ್ಯದ ಚಿಹ್ನೆಯೆಂಬುದು ಸಿದ್ಧಾಂತವಾಗಿದೆ. ಗಂಡಸರಿಗೆ ಹೆಂಗಸರಿಗಿಂತಲೂ ತೀವ್ರವಾಗಿ ಯಾವುದೊಂದು ಘಟನೆಯ ಪರಿಣಾಮ ಗಾಢವಾಗಿ ಮನಸ್ಸಿನ ಮೇಲೆ ಆಗುವುದು ಎಂದು ತಿಳಿದುಬಂದಿದೆ. ಆದರೂ ಎಂಥ ದುಃಖವನ್ನೂ ಸಹಿಸಿಕೊಳ್ಳಬಲ್ಲ ಗಂಡಸರಿದ್ದಾರೆ. ಸಾಮಾನ್ಯವಾದ ಹೆಂಗಸರಿಂದ ಅದು ಸಾಧ್ಯವಿಲ್ಲ. ಫ್ಲೋರಿಡಾದ ಡಾ। ಜೇಮ್ಸ್ ಬಾಂಡ್ ಹೇಳುವಂತೆ, ದುಃಖವನ್ನು ಬಚ್ಚಿಟ್ಟುಕೊಳ್ಳದೆ, ಸುಲಭವಾಗಿ ಕಣ್ಣೀರಿನ ಮೂಲಕ ಹೊರಗೆ ಹಾಕುವ ವಿಧಾನವನ್ನು ಗಂಡಸು ಹೆಂಗಸಿನಿಂದ ತಿಳಿಯಬೇಕು. ಚಾರ್ಲ್ಸ್ ಡಿಕನ್ಸ್ ಹೇಳಿದುದನ್ನು ಅವನ ಮಾತಿನಲ್ಲೇ ಹೇಳಿದರೆ ಚೆಂದ: "ನಮ್ಮ ಕಣ್ಣೀರಿಗಾಗಿ ನಾವು ನಾಚಬೇಕಿಲ್ಲೆಂಬುದನ್ನು ದೇವರು ಬಲ್ಲ. ಏಕೆಂದರೆ ನಮ್ಮ ಕಲ್ಲೆದೆಯ ಮೇಲೆ ಹಬ್ಬಿರುವ, ಕಣ್ಣುಕುರುಡಾಗಿಸುವಂಥ ಧೂಳಿನ ಮೇಲೆ ಬೀಳುವ ಮಳೆ ಅದು."

ನಮ್ಮ ದೇಶದಲ್ಲಿ, ಗಂಡುಸು ಅಳುವುದನ್ನು ವಿಚಿತ್ರವಾಗಿ ನೋಡುವ ಪದ್ಧತಿ ಇದ್ದರೆ, ಸ್ಕಾಂಡಿನೇವಿಯ, ನದರ್ಲಂಡ್ಸ್, ಸ್ವೀಡನ್, ಫ್ರಾನ್ಸ್ ಮೊದಲಾದೆಡೆಗಳಲ್ಲಿ, ಗಂಡಸು ಅಳುವುದು ಸರ್ವಸಾಮಾನ್ಯವಾದ ವಿಷಯವೇ ಆಗಿದೆ.

ಕಣ್ಣೀರೇ ಬಾರದಿರುವವರ ದೇಹರಚನೆಯಲ್ಲಿ ಖಂಡಿತವಾಗಿಯೂ ದೋಷವಿದೆ; ಅವರ ಮನೋರಚನೆಯಲ್ಲೂ ದೋಷವಿದೆ. ಹಾಗೆ ಡಾಕ್ಟರರು ಹೇಳುತ್ತಾರೆ.



**ಈ ಲೇಖ ಬರೆದವರು ಅನುಭವಗಳನ್ನರಸುತ್ತ ಭಾರತವನ್ನೆಲ್ಲ ಸಂಚರಿಸಿದವರು. ಅವರು ಸ್ವಂತ ಕಂಡ ಈ ಸಂಗತಿ ಯೋಗದ ಅಗಾಧ ಮಹಿಮೆಗೊಂದು ಉದಾಹರಣೆಯಾಗಿದೆ.**



# ಸೂರ್ಯ ವಿಜ್ಞಾನಿ

**ಕಪಿಲ**

ಎಲ್ಲರಿಗೂ ಅವರು ಬೇಕಾಗಿದ್ದರು. ಆದರೆ ಅವರಿಗೆ ಮಾತ್ರ ಯಾರೂ ಬೇಡವಾಗಿದ್ದರು. ಊರು ಮನೆ, ಜನಗಳನ್ನು ತೊರೆದು ನಿರ್ಜನ ಕಾಡಿನಲ್ಲಿ ಗುಡಿಸಲು ಕಟ್ಟಿ ಬದುಕಿದ್ದರು. ನಾನು ಅವರನ್ನೇ ಹುಡುಕಿಕೊಂಡು ಹೊರಡದಿದ್ದರೂ ನೀರಿನಲ್ಲಿ ಮುಳುಗುವವನಿಗೆ ಮರದ ತುಂಡಾಗಿ ದೊರಕಿದರು.

ನಾನು ನನ್ನ ಊರು ಬಿಟ್ಟು ಬಹಳ ದೂರ ಬಂದಿದ್ದೆ. ಎಲ್ಲಿಗೆ ಮುಟ್ಟಬೇಕೆಂಬ ನಿಶ್ಚಯವಿಲ್ಲದ ನನಗೆ ಎಲ್ಲಿದ್ದೇನೆಂಬ ಯೋಚನೆಯೂ ಇರಲಿಲ್ಲ. ನಾನು ನೋಡದ ದೇಶ, ಕಾಣದ ಜನ, ತಿಳಿಯದ ಭಾಷೆ; ಕೈಬಾಯಿ ಸನ್ನೆಯಿಂದ ಅವರ ಗುಡಿಸಲ ಗುರುತು ಸಂಪಾದಿಸಿದ್ದೆ. ಅವರನ್ನು ನಾನು ಕಂಡದ್ದು ಸಂಜೆಯಲ್ಲಿ ಒಂದು ಜಲಾಶಯದ ಮೇಲುಗಡೆ ಕುಳಿತಾಗ. ಸಂನ್ಯಾಸಿಯ ಲಾಂಛನ ಒಂದೂ ಕಾಣಲಿಲ್ಲ. ಆದರೆ ಆ ಕಣ್ಣುಗಳನ್ನು ನನ್ನ ತೊಗಲುಗಣ್ಣಿನಿಂದ ನೋಡುವುದು ನನಗಾಗಲಿಲ್ಲ. ನೋಡುವವರ ದೃಷ್ಟಿಯನ್ನೇ ಆಹುತಿಗೊಂಡು ಧಗಧಗ ಉರಿಯುವ ಅಗ್ನಿಕುಂಡಗಳೆರಡು ಕಣ್ಣಿನ ನೆವದಿಂದ ಅವರ ಮುಖದಲ್ಲಿದ್ದವು. ಅವರೆಡೆಗೆ ನೋಡುತ್ತಿದ್ದ ನನ್ನನ್ನು ಒಮ್ಮೆ ಅವರು ನೋಡಿದರು. ಅವರ ದೃಷ್ಟಿ ತಡೆದುಕೊಳ್ಳುವ ಕೋತು ನನ್ನದಾಗಲಿಲ್ಲ. ಕುಳಿತಲ್ಲಿಯೆ ಕುಸಿದೆ. ಅವರು ಅಲ್ಲಿಂದ ಎದ್ದು ಗುಡಿಸಲು ಸೇರಿದರು. ಬಹಳ ಹೊತ್ತಿನ ಮೇಲೆ ನಾನೂ ಸಾವರಿಸಿಕೊಂಡೆ.

ನಾನು ಎದ್ದು ಗುಡಿಸಲಿನೆಡೆಗೆ ನಡೆದು ಹೋದೆ. ಗುಡಿಸಲ ಬಾಗಿಲು ಒಳಗಳಿ ಹಾಕಿ ಮುಚ್ಚಲಾಗಿತ್ತು. ಹೊರಗೆ ನಿಂತು ಕಾಯ್ದೆ. ತೆರೆಯುವ ಲಕ್ಷಣ ಕಾಣಲಿಲ್ಲ. ಕತ್ತಲಾಯಿತು.

ನನ್ನ ಕುತೂಹಲ ಕೆರಳಿತು. ನಿಶ್ಚಯವೂ ಗಟ್ಟಿಗೊಂಡಿತು. ಗುಡಿಸಲಿನಿಂದ ಜಲಾಶಯಕ್ಕೆ ಹೋಗುವುದಕ್ಕೆ ಒಂದು ಚಿಕ್ಕ ಕಾಲುದಾರಿ ಬಿದ್ದಿತ್ತು. ದಾರಿಯ ತುಂಬ ಸಣ್ಣ ನುಣುಪಾದ ಹಸನು ಉಸುಕು. ನಾನು ಆ ರಾತ್ರಿ ಆ ದಾರಿಗೆ ಅಡ್ಡಬಿದ್ದುಕೊಂಡೆ.

ಬೆಳಗಿನ ಜಾವ ಮಳಲು ತಣ್ಣಿಸಿತ್ತು. ನನ್ನದು ಬರಿ ಮೈ. ಕೌಪೀನದ ಹೊರತು ಮೈಯನ್ನು ಮರೆಮಾಡಲೇನೂ ಇಲ್ಲ. ಬೆಳಗಿನ ಸುಳಿಗಾಳಿ ಮೈಗೆ ಹಿಗ್ಗನಿಸಿತ್ತು. ಮೂಡಲಲ್ಲಿ ಬೆಳ್ಳಿ ಚಿಕ್ಕೆ ಆದೇ ಮೂಡಿದ್ದರೂ ತಿಂಗಳ ಬೆಳಕಿರಲಿಲ್ಲವಾದ್ದರಿಂದ ಇನ್ನೂ ಕತ್ತಲೆಯ ಮಬ್ಬು ಇತ್ತು.

ಬಾಗಿಲು ತೆರೆಯಿತು. ಅವರು ಗುಡಿಸಲಿನಿಂದ ಹೊರಬಿದ್ದ ಸಂಕೇತ ಕೇಳಬಂತು. ಒಂದೊಂ-

ದು ಹೆಜ್ಜೆ ಮುಂದೆ ಬಂದುದನ್ನೂ ನನ್ನ ತೆರೆದ ಕಿವಿಗಳು ಕೇಳಿದವು. ನಡೆದು ಬಂದ ಅವರು ನನ್ನನ್ನು ಎಡವಿದರು. ನನಗೆ ಆ ಶ್ರೀಪಾದ ಸ್ಪರ್ಶದ ಆನಂದದ ಹಿಗ್ಗು. ನನ್ನ ಹೃದಯ ಅದನ್ನು ತಾಳಿಕೊಳ್ಳಲು ಅಸಮರ್ಥವಾಗಿತ್ತು. ಬಿಕ್ಕಿ ಬಿಕ್ಕಿ ಅಳಹತ್ತಿದೆ. ಅವರು ನಡಿಗೆ ತಡೆಯ ಲಿಲ್ಲ. ನನ್ನನ್ನು ದಾಟಿ ಮುಂದೆ ನಡೆದರು. ಬರುವಾಗ ಮಾತ್ರ ಆ ಪಾದಸ್ಪರ್ಶದ ಯೋಗ ನನಗೆ ಲಭ್ಯವಾಗಲಿಲ್ಲ.

ನನ್ನ ನಿಶ್ಚಯಕ್ಕೆ ವಜ್ರದ ಕಸುವು ಬಂದಿತ್ತು. ಸೂರ್ಯ ಮೇಲೆ ಬಂದರೂ ನಾನು ಮೇಲೇಳಲಿಲ್ಲ. ಹೊಟ್ಟೆ ಹಚ್ಚಿದವ ಮಗ್ಗಲು ಕೂಡ ಆಗಲಿಲ್ಲ. ಬಿಸಿಲು ಏರತೊಡಗಿತು. ನನ್ನನ್ನು ಎಬ್ಬಿಸಬೇ-ಕೆಂದು ಹಟವನ್ನೂ ತೊಟ್ಟಿತು. ಆದರೆ ಅದರ ಪ್ರಯತ್ನ ಫಲಕಾರಿಯಾಗಲಿಲ್ಲ. ಮತ್ತೆ ಸಂಜೆಯಾಯಿತು. ಮತ್ತೆ ಅವರು ಬಂದರು. ನನ್ನ ಮಗ್ಗುಲ ಹಾಯ್ದು ಮುಂದೆ ಹೋಗಿ ಜಲಾಶಯದ ಬಳಿ ಕುಳಿತರು. ತಮ್ಮ ಹೊತ್ತು ಆದೊಡನೆ ಎದ್ದು ಗುಡಿಸಲಿಗೆ ಹೋದರು.

ಆಗ ನನಗೆ ಸ್ವಲ್ಪ ನಿರಾಶೆಯಾಯಿತು. ಎದೆಯಳಲನ್ನು ಮಳಲಿಸಲ್ಲಿ ಚೆಲ್ಲಿ ಅತ್ತೆ. ನನಗೆ ಅವರ ಅನುಗ್ರಹ, ಆಶೀರ್ವಾದ ಅನಿವಾರ್ಯವಾದವು. ಅವುಗಳನ್ನು ಪಡೆಯದೆ ಏಳದ ನಿಶ್ಚಯವಾಗಿತ್ತು. ಆ ರಾತ್ರಿ ಮತ್ತೆ ಎರಡು ಹಗಲುಗಳನ್ನು ಆ ಬೆಂಕಿಯಂತಹ ಬಿಸಿಲಲ್ಲಿ ಬರಿ ಮೈಯಿಂದ ಕಳೆದೆ. ಅಂದು ಮೂರನೆಯ ದಿನದ ಸಂಜೆ ಎಂದಿನಂತೆ ಅವರು ಬಂದರು. ನನ್ನನ್ನೆತ್ತಿ ಮೈಮೇಲೆ ಕೈಯಾಡಿಸಿದರು. ಆ ಸುಖವನ್ನು ಈ ಮಾತುಗಳು ಬದುಕಿ ಹೇಳಲಾರವು. ನಾನು ಅವರ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಕಂಬನಿಯಲ್ಲಿ ತೊಳೆದಿರಬೇಕು. ಅಂದು ಅದರಿಂದ ಬಂದ ಸುಖವನ್ನು ನಾನೆಂದಿಗೂ ಮರೆತಿಲ್ಲ.

"ಹೋಗು. ಪುರಿಗೆ ಇನ್ನೂ ಆರೆಂಟು ಮೈಲು ಇರುವಲ್ಲಿ ನಿನಗೆ ಕಣ್ಣು ಕೊಡುವವನಿದ್ದಾನೆ ಹೋಗು" ಎಂದು ಅವರು ಹೇಳಿದರು. ಅವರ ಮಾತು ನಾಲಗೆಯಿಂದ ಹೊರಡದೆ ತಂತಿಯಿಂದ ಹೊರಟಷ್ಟು ಮಧುರವಿತ್ತು. ಮೊದಲೇ ಸಂಸ್ಕೃತದ ಮಾಧುರ್ಯ, ಅಲ್ಲದೆ ಅದೆಷ್ಟು ದಿನದ ಮೌನದ ಮೀಸಲು ಮುರಿದು ಆ ಶಬ್ದ ಬಂದಿದ್ದವೋ ಯಾರಿಗೆ ಗೊತ್ತು ? ಮುಂದೆ ಮಾತನಾಡಲಿಲ್ಲ. ನನ್ನ ಕಡೆಗೆ ನೋಡಲಿಲ್ಲ.

ಈ ಸಂಗತಿ ನಡೆದುದು ಮದ್ರಾಸಿನ ಹತ್ತಿರದ ಕುರ್ತಾಲಂದಿಂದ ಹತ್ತು ಮೈಲು ದೂರದಲ್ಲಿ, ಇಂದಿಗೆ ಈ ಹನ್ನೆರಡು ವರುಷಗಳ ಹಿಂದೆ. ಅವರ ಗುಡಿಸಲಿನ ಕಡೆಗೆ ನೋಡಿ ಕೈಮುಗಿದೆ. ಬೇಸಿಗೆಯ ಉರಿಬಿಸಿಲಿನಲ್ಲಿ ಅದೂ ಮದ್ರಾಸು ಪ್ರಾಂತದ ಉಸುಬಿನಲ್ಲಿ ಬರಿಮೈಯಿಂದ ನಾನು ಹೇಗೆ ಮಲಗಿದ್ದೆನೋ ಯಾರಿಗೆ ಗೊತ್ತು ? ಈಗ ನನ್ನ ಮನಸ್ಸಿನಲ್ಲಿ ಸಮಾಧಾನವಿತ್ತು. ನಾನು ಉತ್ತರಕ್ಕೆ ಮುಖ ಮಾಡಿ ಹೊರಟೆ. ಸಮೀಪದ ನಿಲ್ದಾಣದಲ್ಲಿ ರೈಲು ಹತ್ತಿದೆ. ಗಾಡಿಗೆ ತಿಕೀಟು ತೆಗೆಯುವ ಯೋಚನೆ ನನ್ನದಿಲ್ಲದಾಗ ಯಾವ ಗಾಡಿ ಎಂಬುದನ್ನೂ ವಿಚಾರಿಸಲಿಲ್ಲ. ರೈಲಿನ ಅಧಿಕಾರಿಗಳು ವಾಲ್ಟೇರದಲ್ಲಿ ಅನೇಕ ಭಿಕ್ಷುಕರನ್ನು ಬಂಡಿಯಿಂದ ಬೈದು ಇಳಿಸುವ ಹಾಗೆ ನನ್ನನ್ನೂ ಇಳಿಸಿದರು. ಆಂಧ್ರ ದೇಶದಿಂದ ನಿತ್ಯವೂ ನಿರ್ಯಾತವಾಗುವ ಅನಂತ ಭಿಕ್ಷುಕರ ಅನಿಯಮಿತ ಸಂಘದಲ್ಲಿ ನಾನೂ ಒಬ್ಬ ಚರಂತಿ ಸದಸ್ಯನಾಗಿದ್ದೆ.

ವಾಲ್ಟೇರ ರೈಲು ನಿಲ್ದಾಣದಲ್ಲಿಳಿದಾಗ ನನ-ಗೇಕೋ ಹೊಳೆಯಿತು. ದಾರಿಯ ದಣಿವಿಗೆ ಹೆದರಿ ರೈಲಿನ ನೆರವು ಪಡೆದು ಸಾಗುವುದು ನನಗೆ ವಾಮಮಾರ್ಗವೆನ್ನಿಸಿತು. ಮುಂದೆ ಕಾಲು ಕುದುರೆಯಿಂದ ನನ್ನ ದಾರಿ ಸಾಗಿತು. ಅದೆಷ್ಟೋ ವಾರಗಳು ಕಳೆದವು. ಒಂದು ದಿನ ದಾರಿಯ ಮೈಲುಗಲ್ಲು ಪುರಿ ೧೨ ಮೈಲು ಎಂದು ತೋರಿಸಿತು. ನನ್ನ ಕಣ್ಣು ಅತ್ತಿತ್ತ ಹುಡುಕಾಡತೊಡಗಿದವು. ದಾರಿಯಿಂದ ನಾನು ಮೂರು ಮೈಲು

ಒಳಗೆ ಹೋದೆ. ಬಹಳ ದೂರದಿಂದ ಜೋಡಾದ ಗಾಡಿಯವನೊಬ್ಬನ ಊರು ಅದಾಗಿತ್ತು. ಅಲ್ಲಿಂದ ಪುರಿಗೆ ಒಳಹಾದಿಯಿತ್ತು.

ಚಿಕ್ಕದೊಂದು ತೊರೆಯ ದಂಡೆಯ ಮೇಲೆ ದೊಡ್ಡದಾಗಿ ಬೆಳೆದ ಆಲದ ಮರ. ಮರದ ಬುಡಕ್ಕೆ ಎಂದೋ ಯಾವ ಶತಮಾನದ ಐತಿಹಾಸಿಕ ಅವಶೇಷವೆನ್ನುವ ರೀತಿಯಲ್ಲಿ ವೃದ್ಧನ ಚಿತ್ರದಂತೆ ನಿಂತ ಎದೆಮಟ ಮಣ್ಣುಗೋಡೆ. ಅದರ ಮೇಲೆ ತಾಳೆಯ ಗರಿಗಳು ಹರವಿ ಗುಡ್ಡಗಾಡು ಸ್ತ್ರೀಯ ಎಣ್ಣೆ ಕಾಣದ ತಲೆಯ ನೆನಪು ತರುತ್ತಿದ್ದವು. ಈ ಮನೆಯ ಮುಂದೆಯೆ ಒಂದು ಸುಂದರ ಕೈದೋಟ. ತೋಟದಲ್ಲಿ ಹಣ್ಣಿನ ಗಿಡ ಕಾಣದಿದ್ದರೂ ಅರಳಿದ ಹೂವು ಕಣ್ಣಿಗೆ ಸಾಕಾಗಿದ್ದವು. ಸುಂದರವೆಂಬುದಕ್ಕೆ ಈ ಕೈದೋಟ ನೋಡಿಯೇ ಹೆಸರು ಕೊಟ್ಟಿರಬೇಕು! ತೋಟದ ಮಗ್ಗುಲಿಗೆ ನಿಂತವನಿಗೆ ಗಿಡಗಳು ಕಾಣಿಸದೆ ಹೂವಿನ ಹಾಸಿಗೆಯಂತೆ ತೋಟವೇ ಕಾಣಿಸುವುದು. ಅದನ್ನು ಬೆಳಸಿದ ರೀತಿಗಿಂತಲೂ ಆಶ್ಚರಕರವೆಂದರೆ ಹೂವು ಇಷ್ಟು ಪ್ರಫುಲ್ಲವಾಗಿ ಬೆಳೆಯುವವು ಎಂಬುದಿತ್ತು. ಮೋಹ, ಆಕರ್ಷಣೆಗಳನ್ನು ಗೆದ್ದೆವೆನ್ನುವವರಿಗೆ ಇದೊಂದು ಆಹ್ವಾನವಾಗಿತ್ತು. ಬಣ್ಣ ಬಣ್ಣದ ಹೂಗಳು ಕುಶಲ ಚಿತ್ರಕಾರನ ಸುಳಿವಿನ ಚಿತ್ರವಾಗಿ ಅರಳಿದ್ದವು. ಒಂದೊಂದು ಹೂವೂ ನೃತ್ಯಮಗ್ನ ನರ್ತಕಿಯ ಭಂಗಿಯಲ್ಲಿದ್ದವು. ಒಂದು ಹೂವಿನ ಗಿಡ ಬೆಳೆದು ಬಹಳ ಹೂವು ಕೊಡಬಹುದು. ಆದರೆ ತೋಟಕ್ಕೆ ತೋಟವೆ ಇಷ್ಟು ರಮಣೀಯವಾಗುವುದು ಹೆಚ್ಚಿನ ಮಾತು.

ನಾನು ಬೇಲಿಯ ಒಂದು ಬದಿಗೆ ನಿಂತೆ. ಅಲ್ಲಿ ಆ ಮುರುಕು ಗುಡಿಸಲು, ಮುಂದೆ ಈ ರಮ್ಯ ಪುಷ್ಪಾರಾಮ! ಈ ವಿಷಮಾಲಂಕಾರವನ್ನೊಮ್ಮೆ ನೆನೆದೆ. ನನ್ನ ನೀಳಗೊರಳು ಚಾಚಿ ಗುಡಿಸಲ ಮನೆಯತ್ತ ನೋಡುತ್ತಿದ್ದೆ. ಅದೆಷ್ಟೋ ಹೊತ್ತು ನಿಂತೇ ನಿಂತುಕೊಂಡೆ. ಒಳಗೆ ಯಾರೂ ಇಲ್ಲವೆನ್ನುವಷ್ಟು ವ್ಯತ್ಯನೀರವವಿತ್ತು. ಗುಡಿಸಲಿಗೆ ಬಾಗಿಲೇ ಇರಲಿಲ್ಲ. ತೋಟ ಕೈಮಾಡಿ ಕರೆಯುವಂತಿದ್ದರೂ ಅದರಲ್ಲಿ ಕಾಲಿಡಲು ಮಾತ್ರ ಎಡೆಯಾಗುತ್ತಿದ್ದಿಲ್ಲ. ಒಂದೆರಡು ಹಳೆಯ ಬಿದುರುಗಳನ್ನು ಮಾತ್ರ ತೋಟದ ಬಾಗಿಲಿಗೆ ಅಡ್ಡವಾಗಿಸಿದ್ದರು. ಚಿಕ್ಕ ಮಗುವೂ ಅದನ್ನು ತೆಗೆದು ಒಳಹೋಗಬಹುದಿತ್ತು. ಆದರೆ ಮಕ್ಕಳು ಇರಲಿ, ಆ ಕಡೆಗೆ ಸುಳಿಯುವ ಬಂಟತನ ತೋರಿಸುವ ವೀರರೂ ಅಪರೂಪ! ಆ ಪ್ರದೇಶ ಕೊಲೆ ಸುಲಿಗೆಯ ಗಂಡುಮೆಟ್ಟಾಗಿತ್ತು.

ಹೊತ್ತು ನೆತ್ತಿಗೆ ಬಂತು. ಗುಡಿಸಲ ಮುರುಕಿನೊಳಗಿಂದ ಒಂದು ವ್ಯಕ್ತಿ ಎದ್ದು ಬಂದಿತು. ನಾಭಿಯುದ್ದಕ್ಕೂ ಮಿಂಚುವ ಬಿಳಿ ಗಡ್ಡ ಮೀಸೆಗಳ ಬರಿ ಮೈ ಮಾತ್ರ ತೋರಿತು. ಆಕೃತಿ ಆಕರ್ಷಕ. ಕೈಯಲ್ಲಿ ಒಂದು ಹಸಿರೆಲೆಯ ದೊನ್ನೆ ಗುಡಿಸಲಿನ ಮುಂಭಾಗದ ಕಟ್ಟೆಗೆ ಬಂದು ನಿಂತು ತೋಟವನ್ನೊಮ್ಮೆ ತನ್ನ ಅರಳುಗಣ್ಣಿನಿಂದ ನೋಡಿ ಮೆಟ್ಟಲಿಳಿದು ಹೂವು ಹರಿಯತೊಡಗಿದ. ತೋಟದ ಅಂಚಿಗೆ ನಿಂತ ಈ ಕ್ಷುದ್ರ ಜಂತುವನ್ನು ವ್ಯಕ್ತಿ ಗಮನಿಸಲೇ ಇಲ್ಲ. ಆ ವ್ಯಕ್ತಿ ಹೂ ಕೊಯ್ಯತೊಡಗಿದಾಗಲೇ ನಾನೂ ಹೂವಿನ ಮೇಲೆ ಕಣ್ಣು ಹಾಯಿಸಿದೆ. ಅಲ್ಲಿ ಒಂದು ಮಹೇಂದ್ರಜಾಲವೇ ನಡೆದುಹೋಗಿತ್ತು. ಬಣ್ಣ ಬಣ್ಣದ ಹೂವಿನ ಸಂತೆಯಾಗಿದ್ದ ತೋಟವೆಲ್ಲ ಬರಿ ತಿಳಿನೀಲಿಯ ಹೂವಿನಿಂದ ತುಂಬಿದ ಚಿಕ್ಕ ಗಗನವಾಗಿತ್ತು. ಔಷಧಕ್ಕೆ ಒಂದು ಬೇರೆ ಬಣ್ಣದ ಹೂವಿರಲಿಲ್ಲ. ನಾನು ಬಿಸಿಲಲ್ಲಿ ನಿಂತು ನೋಡಿದ್ದಕ್ಕೆ ಆದ ದೃಷ್ಟಿವಿಕಾರ ಎಂದು ಕಣ್ಣು ತಿಕ್ಕಿಕೊಂಡು ಹೂವಿನೆಡೆ ನೋಡಿದೆ. ತೋಟವೆಲ್ಲ ಗಗನಕುಂಡದಂತೆ ಕಂಡಿತು. ಆ ನೀಲಿಯಲ್ಲಿ ನೋಡುವವನನ್ನು ಎಳೆದು ಮುಳುಗಿಸಿಕೊಳ್ಳುವ ಮರುಕವಿತ್ತು. ಹೂ ತುಂಬಿದ ದೊನ್ನೆಯೊಡನೆ ವ್ಯಕ್ತಿ ಒಳಗೆ ಹೋಯಿತು. ಇರುಳ ಮುಗಿಲಲ್ಲಿ ಮೂಡುವ ಚಿಕ್ಕೆಗಳಂತೆ ಮೆಲ್ಲನೆ ಒಂದೊಂದೆ

ಹೂವು ತನ್ನ ಮೊದಲಿನ ಬಣ್ಣಕ್ಕೆ ತಿರುಗಿತು.

ನಾನು ಬಂದುದು ಈ ವ್ಯಕ್ತಿಯ ಕಡೆಗೇ ಎಂದು ನಿಶ್ಚಯಿಸಿಕೊಂಡೆ. ಇಂತಹ ಕೆಲಸದಲ್ಲಿ ಏಕೆ, ಹೇಗೆ ಎಂದು ತರ್ಕದ ತಿಕ್ಕಾಟಕ್ಕೆ ನನ್ನಿಂದ ಯಾರಿಗೂ ಉತ್ತರ ಹೇಳಲಾಗಿಲ್ಲ; ಹೇಳುವ ಅಗತ್ಯವೂ ಇರಲಿಲ್ಲ. ಮುಂದೆ ಬೇಲಿಯ ಹೊರಬದಿಗೇ ಕುಳಿತುಕೊಂಡು ಅವರ ದಾರಿ ಕಾಯಹತ್ತಿದೆ. ಆ ಅರಣ್ಯದ ನಿರ್ಜನ ಮೌನ ಸೀಳಿ ಅವರ ಆವರಣ ಪೂಜೆಯ ಮಂತ್ರ ಕೇಳುತ್ತಿತ್ತು. ಅದೆಷ್ಟೋ ಹೊತ್ತಿನ ವರೆಗೆ ಮತ್ತೆ ಮೌನ ವ್ಯಾಪಿಸಿತು. ವ್ಯಕ್ತಿ ಇನ್ನೂ ಹೊರಬೀಳಲಿಲ್ಲ.

ನಾನು ಆಗಿನ ವರೆಗೂ ಸಿದ್ಧಿಗಳನ್ನು ನಿರಾಕರಿಸುವ ಮನೋವೃತ್ತಿಯವನಾಗಿದ್ದರೂ ಅವರ ಈ ಅದ್ಭುತ ಸಾಮರ್ಥ್ಯದ ಪ್ರಕಟನೆ ಕಂಡು ನನ್ನ ಅವಮನಸ್ಸಿನಲ್ಲಿ ಆಶೆಬುರುಕುತನ ತಲೆದೋರಹತ್ತಿತು. ಆಗ ಸಿದ್ಧಿಗಳು ಕೈಸೇರಿದವೆಂಬ ವಿಚಾರವನ್ನು ಹಿಡಿದು ನನ್ನ ಮನಸ್ಸು ಗಾಳಿಗುದುರೆ ಸವಾರಿ ಏರಿಹೊರಟಿತು ಏನೇ ಆದರೂ ಅವರಿಂದ ಅದನ್ನು ದೊರಕಿಸುವ ಹಟ ತೊಟ್ಟೆ.

ಸಂಜೆಯ ಹೊತ್ತು ಇನ್ನೂ ಮಾರು ಇತ್ತು. ಅವರು ಬಲಿಹರಣದ ಮಂತ್ರಹೇಳುತ್ತ ತೋಟದ ಸುತ್ತು ಸುತ್ತಿ ಬರುತ್ತಿದ್ದರು. ಬಾಗಿಲಿಗೆ ದಿಗ್ಬಂಧನ ಮಾಡಿ ಬಲಿ ಇಡುವ ಹೊತ್ತಿಗೆ ನಾನು ಮುಂದೆ ಜಗ್ಗಿ ಅಲ್ಲೆ ದಂಡಪ್ರಣಾಮ ಮಾಡಿದೆ! ವ್ಯಕ್ತಿ ನಿರ್ದಯವಾಗಿ ನನ್ನನ್ನು ನಿವಾರಿಸಿ,

"ಗಚ್ಛ ಗಚ್ಛ!" ಎಂದು ಹೇಳಿ ಮುಂದುವರಿಯಿತು. ಈಗ ಕೈಯಳತೆಯಲ್ಲಿಯೆ ವ್ಯಕ್ತಿಯನ್ನು ಕಣ್ತುಂಬ ನೋಡಿದೆ. ನನ್ನ ಭಕ್ತಿಭಾವ ಆ ವ್ಯಕ್ತಿಯಲ್ಲಿ ಅಷ್ಟು ಭವ್ಯತೆ ತುಂಬಿತ್ತೋ ಆ ವ್ಯಕ್ತಿಯ ದಿವ್ಯತೆಯೆ ನನ್ನ ಹೃದಯವನ್ನು ಇಷ್ಟು ಭಕ್ತಿನಮ್ರ ಮಾಡಿತ್ತೋ ತಿಳಿಯಲಿಲ್ಲ. ರಾತ್ರಿ ಇಡೀ ಮಂತ್ರ ಕೇಳಬರುತ್ತಿದ್ದವು. ಮಹಾಭೈರವಿಯ ಮಂಗಲಾರುತಿಯಾದುದು ರಾತ್ರಿಯ ಕೊನೆಯ ಜಾವದ ಮೊದಲಲ್ಲಿ.

ಬೆಳಗಿನ ಸೂರ್ಯ ಮೂಡಣದ ಎವೆ ತೆರೆದು ಮೇಲೆ ಬಂದ; ವ್ಯಕ್ತಿಯೂ ಗುಡಿಸಲಿನಿಂದ ಹೊರಗೆ ಬಂದಿತು. ಮತ್ತೆ ಅದೇ ಕಟ್ಟೆಯ ಮೇಲೆ ನಿಂತು ತೋಟದ ಮೇಲೆ ಕಣ್ಣು ಹಾಯಿಸಿತು. ಎಲ್ಲ ಹೂಗಳೂ ಚಿನ್ನದ ನೀರಿನಲ್ಲಿ ಅದ್ದಿ ತೊಳೆದಂತೆ ಹೊಳೆಯಹತ್ತಿದವು. ಅವರು ಕೆಳಗಿಳಿದು ಆ ಹಿರಣ್ಮಯ ಪುಷ್ಪಗಳನ್ನು ಆಯ್ದುಕೊಳ್ಳುತ್ತಿದ್ದರು. ನನಗೆ ತಡೆಯಲಾಗಲಿಲ್ಲ. ನಾನು ಬಾಗಿಲ ಬಿದಿರುಗಳನ್ನು ಬದಿಗೆ ಸರಿಸಿ ಹೊಳಹೊಕ್ಕೆ. ಅವರ ಮುಂದೆ ಅಡ್ಡಬಿದ್ದೆ. ಅವರು ನನ್ನನ್ನು ಮನ್ನಿಸಲಿಲ್ಲ. ಆ ಶಾಂತ ಮುಖ ಆಹುತಿಗೊಂಡ ಅಗ್ನಿಯಂತೆ ಉರಿಯತೊಡಗಿತು. ಮಗ್ಗುಲಲ್ಲಿದ್ದ ಹೂವಿನ ಹಂದರದ ಕಟ್ಟಿಗೆಯೊಂದನ್ನು ಕಿತ್ತು ನನ್ನ ಬೆನ್ನಮೇಲೆ, ತಲೆಗೆ ಎಣಿಸದೆ ಹೊಡೆದರು. ಅದರಿಂದ ನನ್ನ ತಲೆಯೊಡೆದು ನೆತ್ತರು ಸೋರುತ್ತಿದ್ದರೂ ಅನುಗ್ರಹದ ಸಾಮೀಪ್ಯವನ್ನು ಅನುಭವಿಸಿ ಆನಂದಿಸುತ್ತಿದ್ದೆ. ಅವರು ನನ್ನ ಮೊಂಡತನಕ್ಕೆ ಕಟ್ಟಿಗೆ ಒಗೆದು ಮುಂದೆ ಸಾಗುತ್ತ :

"ಶಠ! ಮೂರ್ಖ!" ಎಂದು ಮರೆಯಾದರು. ನಾನು ಅಲ್ಲಿಂದ ಮುಂದೆ ಹೊರಗೆ ಹೋಗಲೇ ಇಲ್ಲ. ಮಧ್ಯಾಹ್ನ ಮತ್ತೆ ಮುಂಚಿನ ದಿನದ ಹೊತ್ತಿಗೇ ಹೊರಬಂದರು. ಆಗ ತೋಟದ ಹೂಗಳನ್ನು ಕೆಂಪು ಬಣ್ಣದವಾಗಿ ಮಾಡಿ ಆಯ್ದುಕೊಂಡರು. ನನ್ನನ್ನೊಮ್ಮೆ ಉದಾಸೀನವಾಗಿ ನೋಡಿ ಹೋದರು. ತಿರುಗಿ ಸಂಜೆಗೆ ಮತ್ತೆ ಬಲಿಹರಣಕ್ಕಾಗಿ ಹೊರಬಂದರು. ನಾನಿನ್ನೂ ಅಲ್ಲಿಯೇ ನಿಂತಿದ್ದೆ. ನನ್ನ ಕಣ್ಣುಗಳಿಂದ ನೀರು ಇಳಿಯುತ್ತಿತ್ತು. ಇನ್ನು ಮತ್ತೆಲ್ಲಿ ನನ್ನನ್ನು ನಿರಾಕರಿಸಿ ದೂಡುವರೋ ಎಂದು ಎದೆಗುದಿ ಹೆಚ್ಚಾಗಿತ್ತು. ನನ್ನನ್ನು ನೋಡಿದವರೇ,

"ಇಲ್ಲೇ ಸತ್ತೀಯಾ ಇನ್ನೂ?" ಎಂದರು. ಅವರ ಮಾತಿನಲ್ಲಿ ಸಾಕಷ್ಟು ತಿರಸ್ಕಾರವಿತ್ತು. ಆದರೂ ಅವರ ಮಾತಿನ ತಳದಲ್ಲಿ ಅಪಾರಕರುಣೆ

ಯನ್ನು ನನ್ನ ಹೃದಯ ಕಂಡಿತು.

"ಇಲ್ಲೀ ಜೀವ ಹಿಡಿದುಕೊಂಡಿದ್ದೇನೆ."

ನನ್ನ ಮಾತಿನಲ್ಲೂ ಸಾಕಷ್ಟು ಹಟವಿತ್ತು. ಅದನ್ನು ಕಂಡು, "ಸಭ್ಯರನ್ನು ಪೀಡಿಸಬಾರದೆಂಬುದನ್ನು ಗಮನಿಸಲಾರೆಯಾ?" ಎಂದರು. ಆ ಮಾತು ಕೇಳಿದೊಡನೆಯೆ ನಿಂತಲ್ಲಿ ಕುಸಿದು ಅವರ ಕಾಲಿಗೆ ಕೈಚಾಚಿದೆ. ನನ್ನ ತುದಿ ಬೆರಳು ಅವರ ಪಾದಸ್ಪರ್ಶ ಮಾಡಿರಬೇಕು. ಅವರ ಸರ್ವಸಿದ್ಧಿಕರವಾದ ಅಂಗುಲಿಗಳು ನನ್ನ ತಲೆಯ ಮೇಲಾಡಿದವು. ಎದ್ದು ಕುಳಿತೆ. ನಾನಿರುವಂತೆಯೆ ಅವರು ಬಾಗಿಲಿಗೆ ದಿಗ್ಬಂಧನ ಹೇಳಿ ಬಲಿಹರಣವಿತ್ತು ಮುಂದೆ ಸಾಗಿದಾಗ ನನ್ನ ಎದೆ ಗರಿಗೆದರಿ ಹಾರಾಡಿತು. ಅವರ ಹಿಂದೆ ಮೂಕನಾಗಿ ಸಾಗಿದೆ. ಬಾಗಿಲಲ್ಲಿ ಎರಡು ಹೂಗಳನ್ನು ಚೆಲ್ಲಿ ಅಲ್ಲೇ ಕೂಡಲು ಹೇಳಿದರು.

ಮಹಾನಿಶೀಥ ಕಳೆದು ಹೋದ ಬಳಿಕ ಅವರು ಹೊರಬಂದರು. ತಣ್ಣನ್ನ ನೀರನ್ನು ಹೂವಿನೊಡನೆ ನನ್ನ ಮುಖಕ್ಕೆ ಎರಚಿ,

"ಏನು ಬೇಕು?"

ಆ ನಿರ್ಧಾರವನ್ನು ಕಂಡು ನನ್ನ ಹೃದಯ ತತ್ತರಿಸಿತು.

"ಅನುಗ್ರಹ ಮಾತ್ರ ಸಾಕು," ಎಂದೆ.

"ಸ್ವಸ್ತಿ!" ಅವರು ಬದಿಯ ತಾಳೆಯ ಚಾಪೆಯ ಮೇಲೆ ಕುಳಿತರು. ನಾನು ಅನುಗ್ರಹವೆಂದು ಉಪಚಾರಕ್ಕೆ ಹೇಳಿದ್ದರೂ ನನ್ನ ಮನಸ್ಸು ಅವರು ನಿನ್ನೆಯಿಂದಲೂ ತೋಟದ ಹೂಗಳನ್ನು ಕಾಮರೂಪಗೈದುದನ್ನು ಕಂಡು ಆ ಶಕ್ತಿಗಾಗಿ ಕಾತರಿಸಿತ್ತು.

"ಭಗವನ್! ಪುಷ್ಪವರ್ಣಪರಿವರ್ತನೆಯ ಸಂಕೇತವನ್ನು ವಿವರಿಸುವಿರಾ?" ಎಂದು ನನ್ನ ಚಾಂಚಲ್ಯಕ್ಕೆ ನಾನೇ ನಾಚಿದೆ.

"ಆಶೆಬುರುಕ! ಆ ಮಾತು ಎತ್ತಬೇಡ. ಈ ಸಿದ್ಧಿ ಪಡೆದುಕೊಂಡು ಅದರ ಜಾಲದಿಂದ ನಾನೇ ಪಾರಾಗದೆ ಒದ್ದಾಡಹತ್ತಿದ್ದೇನೆ. ಅದನ್ನು ನೆನಸಬೇಡ ಕೂಡ. ನೀನು ಜಾಣನಾಗಿದ್ದೀ. ಸಿದ್ಧಿಯನ್ನು ದಾಟುತ್ತೀ" ಎಂದರು.

ಹೃದಯದಲ್ಲಿ ಆ ಸಿದ್ಧಿಗಾಗಿ ತುಂಬ ಹಾತೊರೆಯುತ್ತಿದ್ದೆ. ಆದರೆ ಅವರ ಈ ಮಾತು ಕೇಳಿ ನಾನು ವಿಮುಖನಾದೆ. ಆದರೂ ಕುತೂಹಲದಿಂದ ಕೇಳಿದೆ. "ಭಗವನ್, ಇದೆಂತಹ ಸಿದ್ಧಿ? ಇದರಿಂದ ತಮ್ಮಂಥ ವೀತರಾಗರಿಗೇನು ಬಂಧನ?" ನನ್ನ ಮಾತಿನಲ್ಲಿದ್ದ ಕಳಕಳಿ ಅವರಿಗೆ ತಾಗಿತು.

"ಇದು ಸೂರ್ಯವಿಜ್ಞಾನವೆಂಬ ಸಿದ್ಧಿ. ಕಣ್ಣಿನಲ್ಲಿರುವ ಅಗ್ನಿಯ ಮೇಲೆ ಸಂಯಮ ಮಾಡಿದ ಬಳಿಕ ಬರುವ ಸಾವಿತ್ರ ಸಿದ್ಧಿಯ ಒಂದು ಅಂಗ. ನನ್ನ ಗುರುದೇವ ಬೇಡವೆಂದರೂ ಚಿತ್ತದ ವಿನೋದಲಹರಿಯಿಂದ ಇದನ್ನು ಒಮ್ಮೆ ಪ್ರಕಟಿಸಿದೆ. ಇದು ಈಗ ನನ್ನನ್ನು ಬಂಧಿಸಿದೆ. ಇದರಿಂದ ಬಿಡುಗಡೆಯ ದಾರಿ ಇಲ್ಲ. ಒಬ್ಬ ಸಾಂಸಾರಿಕನಂತೆಯೆ ಈ ಸಿದ್ಧಿಯ ಲೋಕದಲ್ಲಿ ನಾನು ತೊಳಲುವೆ. ದಿನವೂ ಈ ಪುಷ್ಪಗಳ ವರ್ಣಾಂತರ ಮಾಡಿ ಕೊಯ್ಯುವ ಆಸೆ ತಾಳಲಾರದಾಗಿದ್ದೇನೆ. ಆದರೆ ನನ್ನ ಬೆನ್ನಿಗೆ ನನ್ನ ತಾಯಿ ಇದ್ದು ಕಾಯುವ ನಿಶ್ಚಯವಿದೆ. ನಾನು ಮಾಡಿದ ತಪ್ಪಿಗೆ ಅವಳು ಕೊಟ್ಟ ಶಿಕ್ಷೆ ಇದು. ನನ್ನನ್ನು ಶಿಕ್ಷಿಸಿ ನನ್ನ ಎದುರು ಕುಳಿತು ನೋಡುತ್ತಾಳೆ. ಇದೇ ನನ್ನ ಸಂತೋಷ."

"ಇದು ಎಲ್ಲರಿಗೂ ಸಾಧ್ಯವೇ?" ನನ್ನ ಮಾತಿನಲ್ಲಿ ಇನ್ನೂ ಆಶೆಯಿತ್ತು.

"ತಪ್ಪು ಮಾಡುವುದು ಬಹಳ ಜನಕ್ಕೆ ಬರುತ್ತದೆ. ನೀನು ಅದರ ನೆರೆಗೆ ಹಾಯಬಾರದು. ಹೋಗು, ಇನ್ನು ನಿಲ್ಲಬೇಡ ಸಾಯುವ ಮೊದಲು ಬರುವ ಮರಣವನ್ನು ಗೆಲ್ಲು, ಅಂದರೆ ಬದುಕುವಿ" ಎಂದು ಹೇಳಿದವರೇ ಮತ್ತೆ ಗುಡಿಸಲು ಸೇರಿದರು. ಅವರ ಮುಂದೆ ಇಟ್ಟುಕೊಂಡ ಆ ರಕ್ತ ಪುಷ್ಪಗಳನ್ನು ನನ್ನ ಉತ್ತರೀಯದಲ್ಲಿ ಕಟ್ಟಿಕೊಂಡು ಹಾದಿ ಹಿಡಿದೆ.



ಹೂವಿನಂತೆ...

## ನಿಮ್ಮ ಸೌಂದರ್ಯ **ರೆಕ್ಸೋನದ** ಉಪಯೋಗದಿಂದ ಅರಳುತ್ತದೆ

ರೆಕ್ಸೋನ ಸೋಪಿನಲ್ಲಿರುವ ಕ್ಯಾಡಿಲ್–ಎಣ್ಣೆಗಳ ಒಂದು ವಿಶಿಷ್ಟ ಮಿಶ್ರಣ–ಚರ್ಮಕ್ಕೆ ಪೋಷಣೆಯನ್ನು ಕೊಟ್ಟು ನಿಮ್ಮ ಸ್ವಾಭಾವಿಕ ಸೌಂದರ್ಯವನ್ನು ಹೊರಗೆಡಹುವುದಕ್ಕೆ ಸಹಾಯ ಮಾಡುತ್ತದೆ.






ಕ್ಯಾಡಿಲ್ ಇರುವ ಒಂದೇ ಟಾಯಿಲೆಟ್ ಸೋಪು

ರುಚಿ ಕಟ್ಟಾಗಿ ಅಡಿಗೆ ಮಾಡುವುದಷ್ಟೇ ಪಾಕಶಾಸ್ತ್ರವಲ್ಲ

# ತರಕಾರಿಗಳನ್ನು ಹೇಗೆ ಉಪಯೋಗಿಸಬೇಕು?

ಇಸಳೂರು ಮೋಹನರಾಯ

ವಾರಕ್ಕೊಂದು ಹೊಸ ನಮೂನೆಯ ಅಡಿಗೆ ತಯಾರಿಸಿಯೋ, ರುಚಿಕಟ್ಟಾದ ತಿಂಡಿ-ತಿನಿಸುಗಳನ್ನು ಮಾಡಿಯೋ 'ಪಾಕಶಾಸ್ತ್ರ ಪ್ರವೀಣ'ರೆಂದು ಮೆರೆಯುವ ಗೃಹಿಣಿಯರು ಅದೆಷ್ಟೋ ಇರುವರು. ಪಾಕಶಾಸ್ತ್ರಜ್ಞರೆನಿಸಿಕೊಳ್ಳಲು ಅವರಿಗೆ ತೊಪ್ಪಲು ಹಾಗೂ ಕಾಯಿಪಲ್ಲೆಗಳನ್ನು ಹೇಗೆ ಶಾಸ್ತ್ರೀಯವಾಗಿ ಉಪಯೋಗಿಸಿಕೊಳ್ಳಬೇಕೆಂಬುದರ ಜ್ಞಾನವು ಸಹ ಅವಶ್ಯವಾಗಿರಬೇಕು.

ನಮ್ಮ ನಿತ್ಯ ಆಹಾರದಲ್ಲಿ ತೊಪ್ಪಲು ಹಾಗೂ ಕಾಯಿಪಲ್ಲೆಗಳು ಸಮಾವೇಶವಾಗಿರಬೇಕೆಂಬುದು ಎಲ್ಲರಿಗೂ ತಿಳಿದ ಸಂಗತಿ. ಅವು ನಮ್ಮ ಶರೀರದ ಬೆಳವಣಿಗೆಗೆ ಸಹಾಯ ಮಾಡುವ ಮತ್ತು ಆರೋಗ್ಯರಕ್ಷಣೆಯ ಕಾರ್ಯವನ್ನು ಮಾಡುತ್ತವೆ. ಈ ಕಾರ್ಯ ಮಾಡುವಂತೆ ಅವುಗಳಲ್ಲಿ ಆಹಾರಘಟಕಗಳೆನಿಸುವ ಎಲ್ಲ ತರದ ಖನಿಜಾಂಶಗಳು ಹಾಗೂ ಜೀವನಸತ್ವಗಳು ವಿಪುಲವಾಗಿರುವುದೇ ಕಾರಣವಾಗಿದೆ. ಇಷ್ಟೇ ಅಲ್ಲದೇ, ತೊಪ್ಪಲು ಪಲ್ಲೆಗಳಲ್ಲಿರುವ 'ಸೆಲ್ಯುಲೋಜ್' ಎಂಬ ನಾರಿನಂಥಹ ಪದಾರ್ಥವು ಕರಳುಗಳಿಗೆ ಚಾಲನೆಯನ್ನು ಕೊಡುವುದರಿಂದ ಮಲವಿಸರ್ಜನೆಗೆ ಸಹಾಯ ಮಾಡುತ್ತದೆ. ಮಲಬದ್ಧತೆಯಿಂದ ದೂರವಾಗಿರಲು ತೊಪ್ಪಲು ಪಲ್ಯ ಎಷ್ಟೋ ಮಟ್ಟಿಗೆ ನೆರವಾಗುತ್ತದೆ.

ಇಂದಿನ ನಾಗರಿಕ ಜೀವನದಲ್ಲಿ ನಾವು ಆಹಾರ ಪದಾರ್ಥಗಳನ್ನು ಬೇಯಿಸಿ ತಿನ್ನುವುದೇ ಹೆಚ್ಚಾಗುತ್ತ ನಡೆದಿದೆ ಆದರೆ ತೊಪ್ಪಲು ಕಾಯಿಪಲ್ಲೆಗಳಲ್ಲಿ ಕೆಲವನ್ನು ಬೇಯಿಸದೇ, ಕಚ್ಚಾ ಸ್ಥಿತಿಯಲ್ಲಿ ತಿನ್ನುವುದೇ ಒಳಿತು. ಕಚ್ಚಾ ಸ್ಥಿತಿಯಲ್ಲಿ ಹಾಗೆ ತಿನ್ನುವುದರಿಂದ ಅವುಗಳಲ್ಲಿನ ಜೀವನಸತ್ವಗಳೆಲ್ಲವೂ ದೊರೆಯುವವು. ಬೇಯಿಸುವುದರಿಂದ ಕೆಲವು ಜೀವನಸತ್ವಗಳು ನಾಶವಾಗುವವು. ಸೌತೆಕಾಯಿ, ನೆಲ್ಲಿಕಾಯಿ, ಉಳ್ಳೆಗಡ್ಡೆ, ಗಜ್ಜರೆ, ಮೂಲಂಗಿ, ಮೆಂತೆಸೊಪ್ಪು ಇತ್ಯಾದಿಗಳನ್ನು ಹಾಗೆಯೇ ತಿನ್ನಬಹುದಲ್ಲವೇ? ಕಚ್ಚಾ ಸ್ಥಿತಿಯಲ್ಲಿಯೇ ತಯಾರಿಸಿದ ಕೋಸಂಬರಿ, ಚಟ್ನಿ, ಉಸುಳಿ, ಪಚ್ಚಡಿಗಳು ಎಷ್ಟು ರುಚಿಕರವಾಗಿರುವವು!

ತೊಪ್ಪಲು ಕಾಯಿಪಲ್ಲೆಗಳನ್ನು ಹೆಚ್ಚಿ, ಹೋಳುಗಳನ್ನಾಗಿ ಇಲ್ಲವೆ ಕಾಯಿಗಳ ಮೇಲಿನ ಸಿಪ್ಪೆ ತೆಗೆದು ಇಡುವುದರಿಂದ, ಕೆಲವು 'ಎನ್‌ಝೈಮ್' ಎನ್ನುವ ರಾಸಾಯನಿಕ ದ್ರವ್ಯಗಳು ಉತ್ಪನ್ನವಾಗುತ್ತವೆ. ಇವುಗಳ ಮೂಲಕ ಜೀವನಸತ್ವ 'ಕ' ಎಂಬುದು ನಾಶವಾಗುವುದು. ಹೀಗೆ ಆಗುವುದನ್ನು ತಪ್ಪಿಸಬೇಕಾದರೆ, ಹೋಳು ಮಾಡಿದ್ದನ್ನು ಹೆಚ್ಚು ವೇಳೆ ಹಾಗೇ ಇಡದೇ ಕೂಡಲೇ ಬೇಯಿಸುವುದು ಒಳಿತು. ಇಲ್ಲವೇ ಬೇಯಿಸಿದ ತರುವಾಯ ಸಿಪ್ಪೆ ತೆಗೆಯಬೇಕು ಅಥವಾ ಹೋಳುಗಳನ್ನು ಮಾಡಬೇಕು. ಒಂದು ವೇಳೆ ಹೋಳುಗಳನ್ನು ಬೇಯಿಸದೇ ಹೆಚ್ಚು ಕಾಲ

ಹಾಗೇ ಇಡಬೇಕಾದ ಪ್ರಸಂಗಗಳಲ್ಲಿ, ಮೊಸರು, ಮಜ್ಜಿಗೆ, ನೀರಿನಲ್ಲಿ ತೆಗೆದ ಹುಣಸೇ ರಸ, ಲಿಂಬೇ ರಸ ಯಾವುದಾದರೊಂದರಲ್ಲಿ ಚೆನ್ನಾಗಿ ಕಲಿಸಿ ತೆಗೆದಿಡುವುದರಿಂದಲೂ ನಿಮ್ಮ ಕಾರ್ಯವು ಸಾಧಿಸುವುದು.

ಆಹಾರವಿಜ್ಞಾನಿಗಳು ನಿಮಗೆ ಹೇಳಿ ಸೋಜಿಗಗೊಳಿಸುವ ಸಂಗತಿಯೊಂದಿದೆ. ನಾವು ಸಾಧ್ಯವಿದ್ದ ಮಟ್ಟಿಗೆ ತೊಪ್ಪಲು-ಕಾಯಿಪಲ್ಲೆಗಳ ಮೇಲಿನ ಸಿಪ್ಪೆಸಮೇತ ಸೇವಿಸುವುದು ಒಳಿತಂತೆ. ಒಂದು ಕಾಯಿಯ ಒಳಗಿನ ತಿಳಲಿನಲ್ಲಿರುವುದಕ್ಕಿಂತ, ಸಿಪ್ಪೆಯಲ್ಲಿ ಅಥವಾ ಸಿಪ್ಪೆಯ ತಳಭಾಗದಲ್ಲಿ ಜೀವನಸತ್ವ ಮತ್ತು ಖನಿಜಾಂಶಗಳು ಎಷ್ಟೋಪಟ್ಟು ಹೆಚ್ಚಿಗೆ ಇರುತ್ತಿರುವುದೇ ಹೀಗೆ ಹೇಳುವುದಕ್ಕೆ ಕಾರಣವಾಗಿದೆ ಸಿಪ್ಪೆಯಲ್ಲಿರುವ ಈ ಅಧಿಕ ಪ್ರಮಾಣದ ಪೋಷಣಾಂಶಗಳ ಲಾಭ ಪಡೆಯುವುದಕ್ಕೋಸ್ಕರ ಸಿಪ್ಪೆ ಸಮೇತ ಅದನ್ನು ಅಡಿಗೆಯಲ್ಲಿ ಉಪಯೋಗಿಸಬೇಕೆನ್ನುವುದು. ಒಂದು ವೇಳೆ ಹಾಗೆ ಉಪಯೋಗಿಸುವುದು ಸಾಧ್ಯವಿಲ್ಲದಲ್ಲಿ ಬೇಯಿಸಿದ ತರುವಾಯ ಸಿಪ್ಪೆ ತೆಗೆದರೂ ನಡೆದೀತು. ಉದಾಹರಣೆಗಾಗಿ ಬಟಾಟೆಯ ಭಾಜಿ ತಯಾರಿಸಬೇಕಾಗಿದೆ ಎಂದು ಇಟ್ಟುಕೊಳ್ಳೋಣ. ಸಿಪ್ಪೆ ತೆಗೆಯದೆಯೇ ಇಡಿಯಾಗಿಯೇ ಬಟಾಟೆಗಳನ್ನು ಬೇಯಿಸಿ, ತರುವಾಯ ಹೋಳುಗಳನ್ನು ಮಾಡಿರಿ. ಬೇಕಾದರೆ ಬೇಯಿಸಿ ಆದ ಮೇಲೆ ಸಿಪ್ಪೆಗಳನ್ನು ತೆಗೆದೊಗೆದು ಹೋಳುಗಳನ್ನು ಮಾಡಬಹುದು.

ತರಕಾರಿಗಳನ್ನು ಬೇಯಿಸುವುದಾದಲ್ಲಿ ಅಗತ್ಯವಿದ್ದಷ್ಟೇ ನೀರನ್ನು ಉಪಯೋಗಿಸಿ, ಕುದಿಯಲು ಪ್ರಾರಂಭವಾದಾಗ ತರಕಾರಿಗಳನ್ನು ಹಾಕಿರಿ. ತಕ್ಷಣವೇ ಪಾತ್ರೆಯ ಬಾಯನ್ನು ಮುಚ್ಚಿಬಿಡಿರಿ. ಬೇಯಿಸಿ ಆದ ಮೇಲೆ ನೀರು ಹೆಚ್ಚಿಗೆ ಉಳಿದರೆ, ಆ ನೀರನ್ನು ಚೆಲ್ಲದೇ, ಬೇಳೆ ಸಾರು ಇತ್ಯಾದಿಗಳನ್ನು ಮಾಡಲು ಉಪಯೋಗಿಸಿರಿ. ಅಂದರೆ ನೀರಿನಲ್ಲಿ ಕರಗಿಹೋದ ಜೀವನಸತ್ವ ಮತ್ತು ಖನಿಜಾಂಶಗಳ ಉಳಿತಾಯ ಮಾಡಿದಂತಾಗುವುದು. ಹಾಗೆಯೇ ಸಣ್ಣ ಬೆಂಕಿಯ ಮೇಲಿಟ್ಟೇ ಬೇಯಲು ಬಿಡಿರಿ. ಬೆಂಕಿಯ ಜ್ವಾಲೆ ದೊಡ್ಡದಾಗದಂತೆಯೂ ತರಕಾರಿ ದೀರ್ಘಾವಧಿಯವರೆಗೆ ಬೆಂಕಿಯ ಮೇಲೆ ಉಳಿಯದಂತೆಯೂ ಜಾಗ್ರತೆ ವಹಿಸಿರಿ. ಅದರಂತೆ ಬೇಯುವಾಗ ಸೋಡಾ ಬೆರಸುವುದು ಎಂದಿಗೂ ಹಿತಕರವಲ್ಲ.

ಕ್ಯಾಬೇಜು ಮತ್ತು ಕಾಲಿಫ್ಲಾವರ್‌ಗಳ ಪದಾರ್ಥಗಳನ್ನು ಮಾಡುವಾಗ ಅವುಗಳ ಮೇಲಿನ ಹಸಿರು ಎಲೆಗಳನ್ನು ತೆಗೆದು ಚೆಲ್ಲಿಕೊಟ್ಟು ಒಳಗಿನ ಬಿಳಿ ಬಣ್ಣದ ಎಲೆಗಳನ್ನು ಮಾತ್ರ ಉಪಯೋಗಿಸುತ್ತೀರಲ್ಲವೇ? ಆದರೆ ಹಸಿರು ಎಲೆಗಳಲ್ಲಿಯೇ ಬಿಳೀ ಎಲೆಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಪೋಷಣಾಂಶಗಳಿರುತ್ತವೆಂಬುದನ್ನು ತಿಳಿದಾಗ ಇನ್ನು ಮುಂದೆ ಆ ಹಸಿರು ಎಲೆಗಳನ್ನೂ ಪದಾರ್ಥ ಮಾಡುವುದರಲ್ಲಿ ಉಪಯೋಗಿಸಲು ಆರಂಭಿಸುವಿರಲ್ಲವೇ?

ತೊಪ್ಪಲು ಪಲ್ಲೆಗಳ ಪದಾರ್ಥ ತಯಾರಿಸುವಾಗ ಉಪ್ಪನ್ನು ಹೇಗೆ ಹಾಕಬೇಕೆನ್ನುವುದರಲ್ಲಿಯೂ ಆಹಾರವಿಜ್ಞಾನ ಕೆಲ ಸಲಹೆಗಳನ್ನು ಕೊಡಬಲ್ಲದು. ತೊಪ್ಪಲು ಪಲ್ಲೆಗಳನ್ನು ಬೇಯಿಸುವ ಮೊದಲೇ ಉಪ್ಪನ್ನು ಹಾಕದೇ, ಬೇಯಿಸಿದ ತರುವಾಯ ಹಾಕಬೇಕಂತೆ. ಕಾರಣವು ಹೀಗಿದೆ: ತೊಪ್ಪಲು ಪಲ್ಲೆಗಳು 'ಅಲ್ಕ' ಗುಣಧರ್ಮದವು. ನಮ್ಮಶರೀರಕ್ಕೆ ಅಲ್ಕಗುಣಧರ್ಮದ ಮತ್ತು ಆಮ್ಲ ಗುಣಧರ್ಮದ ಆಹಾರಪದಾರ್ಥಗಳು ಬೇಕಾಗಿದ್ದು, ಅವೆರಡೂ ಸಮತೋಲ ಪ್ರಮಾಣದಲ್ಲಿರಬೇಕು. ತೊಪ್ಪಲು ಪಲ್ಲೆಗಳನ್ನು ಬೇಯಿಸುವಾಗಲೇ ಉಪ್ಪನ್ನು ಹಾಕಿದರೆ ಅವು ಆಮ್ಲ ಪದಾರ್ಥವಾಗಿ ರೂಪಾಂತರಹೊಂದಿ, ಸಮತೋಲವು ಹೆಚ್ಚುಕಡಿಮೆಯಾಗುವ ಸಂಭವವಿರುತ್ತದೆ. ಹೀಗಾಗುವುದರಿಂದ ಶರೀರಕ್ಕೆ ಕೆಡಕು.

ಹೀಗೆ ಪಾಕಶಾಸ್ತ್ರವು, ಹೊಸ ನಮೂನೆಯ ಮತ್ತು ರುಚಿಕಟ್ಟಾದ ಅಡಿಗೆ ತಯಾರಿಸುವ ಕಲೆಯು ಮಾತ್ರ ಆಗಿರದೇ, ಅದರಲ್ಲಿ ವಿಜ್ಞಾನವು ಸಹ ಒಳಗೊಂಡಿದೆ. ಅದರ ಬಗ್ಗೆ ಇಂದಿನ ಗೃಹಿಣಿಯರು ತಿಳಿದಿರಬೇಕು.

# ಪದ್ಮಿನಿಗೆ ಇರುವಂತಹ
# ಆಕರ್ಷಕ ಮುಖಕಾಂತಿಯನ್ನು
# ನೀವೂ ಪಡೆಯಿರಿ !

ಸುಂದರಿ ಪದ್ಮಿನಿ,
ಭಾರತ್ ಪ್ರೊಡಕ್ಷನ್ಸ್
ಅವರ 'ವಿಕ್ರಮಾಧಿತನ್'
ಚಿತ್ರದ ತಾರೆ




ಪದ್ಮಿನಿ ಉತ್ತಮ ನರ್ತಕಿ ಹಾಗೂ ನಟಿಯಾಗಿರುವುದು ಮಾತ್ರವಲ್ಲದೆ ಬಹಳ ಸೌಂದರ್ಯವತಿಯೂ ಆಗಿದ್ದಾಳೆ. ಕೊರತೆಯಿಲ್ಲದ ಚರ್ಮವು ಪದ್ಮಿನಿಯಂತಹ ಆಕರ್ಷಕ ಸಿನೆಮ ತಾರೆಯರಿಗೆ ಹೇಗೋ ಹಾಗೆಯೇ ನಿಮಗೆ ಕೂಡ ಅಮೂಲ್ಯವಾಗಿದೆ. "ಮೈಯ ಕಾಂತಿಗೆ ನಾನು ಉಪಯೋಗಿಸುವ ಅತ್ಯಂತ ಸೌಮ್ಯವಾದ, ಶುದ್ಧವಾದ ಮತ್ತು ಬೆಳ್ಳಗಿರುವ ಲಕ್ಸ್ ಟಾಯಿಲೆಟ್ ಸೋಪನ್ನು ಮೀರಿಸಿದ್ದು ಬೇರಿಲ್ಲ." ಇದು ಸುಂದರಿ ಪದ್ಮಿನಿಯ ಸಲಹೆ. ಆಕೆ ಲಕ್ಸ್ ಟಾಯಿಲೆಟ್ ಸೋಪಿನ ಕೆನೆಯಂತಹ ನೊರೆ ಮತ್ತು ಮನಮೋಹಕ ಸುವಾಸನೆಯಿಂದ ಆನಂದ ಪಡುತ್ತಾಳೆ. ನೀವು ಕೂಡ ಇಂದೇ ಲಕ್ಸನ್ನು ಉಪಯೋಗಿಸಿ ನೋಡಿರಿ.

ಶುದ್ಧವಾದ, ಬಿಳಿಯಾದ **ಲಕ್ಸ್ ಟಾಯಿಲೆಟ್ ಸೋಪು**

ಸಿನೆಮ ತಾರೆಯರ ಸೌಂದರ್ಯದ ಸೋಪು

ಹಿಂದೂಸ್ಥಾನ್ ಲೀವರ್ ಲಿಮಿಟೆಡ್, ಅವರಿಂದ ತಯಾರಿಸಲ್ಪಟ್ಟದ್ದು.

LTS. 565-50 KN

ಮಿಟುಕು ಇಲ್ಲ. ಚಂದಿರನ ಸುಳಿವಿಲ್ಲ, ಹೊಳವಿಲ್ಲ. ಕಪ್ಪು ಮೋಡ, ಕಾರ್ಗತ್ತಲೆ. ನನ್ನ ಮಾತಿನ ಗಾಳಿ ಸೋಂಕಿದರೆ ಸಾಕು, ಹನಿಯೊಡೆದೀತೆಂಬ ಭಯ.

ನಾನು ದಿಂಬನ್ನೇ ಸಂತೈಸುತ್ತ ಹಾಗೇ ಬಿದ್ದುಕೊಂಡೆ.

ಎರಡೂ ಕಾಲಿನ ಮೇಲೆ ನಿಂತು ಕೊಂಡಿದ್ದ ಮಗ ಈಗ ಒಂದೇ ಕಾಲಿನ ಮೇಲೆ ನಿಂತಿದ್ದಾನೆ.

ಇವನು ಹೀಗೇಕೆ ತಪ್ಪುಮಾಡಿದವನಂತೆ ನಿಂತಿದ್ದಾನೆ— ಎಂದು ಕೇಳಬೇಕೆನ್ನುವಾಗ ಮೇಲೆ ದಡದಡ ಸದ್ದಾಯಿತು. ಮೇಲಿನಿಂದ ವಿವೇಕನ ತಾಯಿ ಇಳಿದು ಬರುತ್ತಿದ್ದಾಳೆ. ಮಗ ತಟ್ಟನೆ ಇನ್ನೊಂದು ಕಾಲೂರಿ— ತಪ್ಪು ಒಪ್ಪದವರಂತೆ ದಾರಿ ಮಾಡಿಕೊಟ್ಟ.

ಮೋಡಗವಿದಿತ್ತು. ಈಗ ಮಿಂಚು, ಸಿಡಿಲು.

'' ಈ ಮನೆಯಲ್ಲಿ ನಾನಿರಬೇಕು— ಎಂದಿದ್ದರೆ ಈ ನೀಚ ಹೊರಬೀಳಬೇಕು ! ''

ನೀಚನೆಂದಾಗ ವಿವೇಕನನ್ನು ನಿರ್ದೇಶಿಸಿದ ಹಸ್ತ ಈಗ ಕಿವಿ ಹಿಂಡಿದಂತೆ ಮಾಡಿ ಗಲ್ಲ ಸವರಿ ಅಲ್ಲೇ ನಿಂತಿತು— ಬೆರಳು ಮಾತ್ರ ಊರಿತ್ತು. ಕಾರಣ ಹೊಳೆದಂತಾಗಿ ನನಗೆ ಒಳಗೇ ಒಂದಿಷ್ಟು ಸಮಾಧಾನವೆನಿಸಿತು. ಆದರೆ ಅದನ್ನು ತೋರಗೊಡುವಂತಿಲ್ಲ ಇದು ನನ್ನ ಮುಂದೆ ಬಂದ ನ್ಯಾಯವಿಚಾರಣೆ ಮಾತ್ರ. ಈ ಕ್ಷಣಕ್ಕೆ ಅಪರಾಧಿ ನಾನಲ್ಲ; ನನ್ನ ಮಗ. ಯಾಕೆ? ಏನಾಯಿತು? ಎಂಬ ನನ್ನ ಮನಸ್ಸಿನ ಪ್ರಶ್ನೆ ಬಾಯಂಗಳದಿಂದ ಹೊರಕ್ಕೆ ಬರಲೇ ಇಲ್ಲ ಮನೆಯ ಹೊರಗಿನ ನಾಟಕ ಇಲ್ಲೂ ಅವಶ್ಯವೆನಿಸಿತು. ನಗಲು ಯತ್ನಿಸಿದೆ. ಕರೆದರೆ ನಗು ಬರುತ್ತದೆಯೆ? ಬಾಯಿ ಒಣಗಿತ್ತು. ಸಿಟ್ಟು ಬಂದಿತ್ತು. ಅದನ್ನೂ ಹಿಡಿದಿಟ್ಟೆ

"ಎರಡರಲ್ಲೊಂದಾಗಲೇಬೇಕು. ಒಂದೋ ಈ ಮನೆಯಲ್ಲಿ ನಾನಿರಬೇಕು; ಇಲ್ಲ, ಅವನಿರಬೇಕು."

ಒಂದಾದರೂ ಭಾರ ಇಳಿದಂತಾಯಿತೆಂದು ನನ್ನ ಮಾನಸಪುತ್ರ–ಅವಿವೇಕ–ಕೂಗಬೇಕೆಂದ. ಆದರೆ ಔರಸಪುತ್ರ ವಿವೇಕನನ್ನು ಕಂಡಾಗ ಕತ್ತು ಹಿಡಿದಂತಾಯಿತು. ನಾನು ತನ್ನನ್ನು ನೋಡಿದೆನೆಂದು ವಿವೇಕ ಏನನ್ನೊ ಹೇಳಬೇಕೆಂದ. ಆದರೆ ಅವನಿಗೆ "ಬಾಯಿ ತೆರೆದಿಯಾದರೆ ನೋಡು"— ಎಂದು ಬಾಯಿಯವರ ಆಜ್ಞೆ.

ಆಜ್ಞಾಧಾರಕ ಮಗ ಬಿಡಿಸಿದ ತುಟಿ ಹೊಲಿದುಕೊಂಡ. ಆದರೆ ಉದ್ವೇಗದಿಂದ ತುಟಿ ಅದುರುತ್ತಿತ್ತು. ಕಣ್ಣು ತೊಟ್ಟಿಕ್ಕಿತು.

ನನಗೆ ಕಳವಳವಾಯಿತು. ಅಷ್ಟರಲ್ಲಿ,

"ಅಳುತ್ತಾನೆ! ಡೋಂಗಿ! ಬಾಯಿ ಮುಚ್ಚು"

ಎಂಬ ಆಜ್ಞೆ ಜಾರಿಯಾಯಿತು. ಈ ಆಜ್ಞೆಯನ್ನು ಪಾಲಿಸುವುದು ವಿವೇಕನಿಗೆ ಸಾಧ್ಯವಾಗಲಿಲ್ಲ.

"ನೀವು ಬಾಯಿ ಹೊಲಿದುಕೊಂಡು ಕೂತಿರಿ. ನೀವು ಕೊಟ್ಟ ಸಲಿಗೆ ಅವನ ತಲೆಗೇರಿದೆ. ನಾನೆಂದರೆ ಕಾಲುಕಸ. ಬಾಯಿಗೆ ಬಂದಂತೆ ಬೊಗಳುತ್ತಾನೆ. ಈಗ ನಿಮ್ಮ ಮುಂದೆ ಸಂಭಾವಿತನಾಗಿದ್ದಾನೆ— ಅಪ್ಪ. ಈಗ ಬೊಗಳೋ— ಪರಮ ನೀಚ! ಯಾಕೆ–ನಾಲಗೆ ಸೇದಿ ಹೋಯಿತೇನು?"

'' ಅವನು ಏನೋ ಹೇಳಬೇಕೆನ್ನುತ್ತಾನೆ; ನೀನು ಗದರಿಸುತ್ತೀ— '' ಎಂದು ಹೇಳಬೇಕೆಂದು ಬಾಯಿ ತೆರೆದರೆ ಅವಳು ಅವಕಾಶವನ್ನೇ ಕೊಡಲಿಲ್ಲ

'' ಅವನು ನಿಮ್ಮ ಮಗ. ನಾನೇನೂ ಅವನಿಗೆ ಅನ್ನಲಾಗದು. ನೀವೂ ಅವನನ್ನು ತಲೆಯ ಮೇಲಿಟ್ಟುಕೊಂಡು ಕುಣಿಯುತ್ತಿದ್ದೀರಿ. ಅದರಿಂದಲೇ ಅವ . . . . '' ಗಂಗಾ-ಯಮುನಾ ಪ್ರಸನ್ನ.

ನಾನು ಏನಾದರೂ ಅಂದೇನೆಂದರೆ ಬಿಡುವುದಿಲ್ಲ. ಒಂದು ದಿನ ಇವಳ ಮಾತನ್ನು ಕೇಳಿ ಅವನಿಗೊಮ್ಮೆ ಬಲವಾಗಿ ಕೈ ಬೀಸಿದ್ದೆ. ಇವಳೇ ಮಧ್ಯೆ ಬಂದು— '' ನನ್ನನ್ನು ಹೊಡೆಯಿರಿ— ಬೇಕಾದರೆ ಅವನನ್ನು ಕೊಲ್ಲಬೇಡಿರಿ. ನನ್ನ ತಪ್ಪಿಗೆ ಅವನಿಗೇಕೆ ಶಿಕ್ಷೆ?'' ಎನ್ನುವಾಗ ಬೀಸಿದ ಕೈ ವಿವೇಕನಿಗೆ ತಾಗಿ ಅವನು "ಅಯ್ಯೋ ''— ಎಂದು ಕಿರುಚಿಕೊಂಡ. '' ಕೊಂದರು— ನನ್ನ ಕೂಸಿನ್ನ ಕೊಂದರು ಕಟುಕರ ಜಾತಿ. ಇವರ ಕೈ ಸೇದಿಹೋಗಲಿ. ಬಾ, ಮಗನೇ ಇವರಿಗೆ

ನಾವಿಬ್ಬರೂ ಬೇಡವಾಗಿದ್ದೇವೆ" ಎಂದು ವಿವೇಕ ನನ್ನ ತಬ್ಬಿ ಹಿಡಿದಳು. ಇಬ್ಬರೂ ಒಂದಾದರು. ಒಂದೇ ಏಟಿನಲ್ಲಿ ನನ್ನ ಕೆಲಸ ಮುಗಿದಿತ್ತು. ಆಗ ಇಬ್ಬರೂ ಬೇಡವಾದರೆಂದು, ಇಂದು ಒಂದೇ ಸೀಟು ಖಾಲಿ ಎಂದು— ಏನಿದ್ದರೂ ನನ್ನ ಸಂಸಾರಶಕಟಕ್ಕೆ ಇವರ ಭಾರವಿದ್ದದ್ದೇ. ನಾನು ಹೊರಗೆ ತಿಂದು ತಂದ ಅವಮಾನದ ಹಣ್ಣನ್ನು ಮನೆಯಲ್ಲಿ ಹಂಚಬೇಕೆಂದರೆ ಇಲ್ಲಿ ನನಗೆ ಬೇರೆಯೇ ಎಡೆ ಬಡಿಸಿ ಇಟ್ಟಿದೆ. ದೇವರೇ ಗತಿ.

ಕುಂದಾ, ಮಂದಾ ಓಡಿಬಂದು ವರದಿ ಮಾಡಿದರು:

" ಅಪ್ಪ, ಅವ್ವ . . . ಅಣ್ಣ . . . ಹತ್ತಾ."

" ಪಪ್ಪ, ಅಣ್ಣ . . . ಅವ್ವ . . . ಹತ್ತಾ."

ಈ ಎರಡು ವರದಿಗಳಲ್ಲಿ ಯಾವುದು ನಿಜ? ಅವ್ವ ಅಣ್ಣನ್ನ ಹೊಡೆದಳೆ? ಅಣ್ಣ ಅವ್ವನ್ನ ಹೊಡೆದನೇ? ಈ ಮಕ್ಕಳು ಆಡಿದ ಮಾತು ಎರಡೆರಡು ಅರ್ಥ ಕೊಡಬಾರದು. ಒಂದೇ ಮಾತನ್ನು ಎರಡು ರೀತಿಯಲ್ಲಿ ಹೇಳುವುದೇ ಅವರ ವೈಶಿಷ್ಟ್ಯ. ಮಕ್ಕಳು ಸುಳ್ಳು ಹೇಳುವುದಿಲ್ಲ . . . ಒಂದೇ ಅರ್ಥವಿರಲಿ-- ಹೊಡೆದಾಟವಂತೂ ಆಗಿದೆ. ಅವ್ವ ಅಣ್ಣನ್ನ ಹೊಡೆದಿದ್ದಾಳೆ. ಇದೇ ನಿಜ; ಇದೇ ಸಹಜ; ಇದೇ ಸ್ವಾಭಾವಿಕ. ಇದು ನಿತ್ಯದ ಹಾಡು. ವಿವೇಕ ಹೋದರೆ, ಬಂದರೆ ಅವನಿಗೆ ಇವಳದು ಬಾಯಿಂದಲೋ ಕೈಯಿಂದಲೋ ಪ್ರಸಾದ ವಿನಿಯೋಗ ಇದ್ದೇ ಇದೆ. ಅದು ವರದಿಯಾಗುವಷ್ಟು ಮಹತ್ವ ಪಡೆದಂಥದಲ್ಲ. ಆದರೆ ಮಹತ್ವವಿರಲಿ, ಇಲ್ಲದಿರಲಿ ವರದಿಯಾಗಲೇಬೇಕು. ಆಗಿಯೇ ಆಗುತ್ತದೆ. "ಅಪ್ಪ, ಅಣ್ಣ ನಗುತ್ತಾನೆ. ಅವ್ವನಿಗೆ ಸಿಟ್ಟು. (ಅಲ್ಲ ಅಣ್ಣನಿಗೆ ಸಿಟ್ಟು, ಅವ್ವನ ನಗೆ– ಒಂದು ತಿದ್ದುಪಡಿ). ನಳದಲ್ಲಿ ನೀರು ಬಂತು; ಚಟ್ನಿ ಖಾರ, ಬೆಲ್ಲ ಸಿಹಿ, ಮೊಸರು ಹುಳಿ, ಕಟ್ಟಿಗೆ ಉರಿಯುವುದೇ ಇಲ್ಲ; ಮನೆತುಂಬ ಹೊಗೆ ಇಡುಗಿದೆ. ಇಂದು ಬಹಳ ಸೆಕೆ; ಬೆಳಗ್ಗೆ ತಂಪಿತ್ತು. ಮಧ್ಯಾಹ್ನ ಸಂಕಟವಾಗುತ್ತದೆ"– ಇದೆಲ್ಲ ನಿತ್ಯ ಗಾಯತ್ರಿ.

ಇವರ ಹೊಡೆದಾಟ—ಅದೂ ನಿತ್ಯದ್ದೇ. ಅದು ನನ್ನ ನ್ಯಾಯಾಸ್ಥಾನಕ್ಕೆ ವಾರಕ್ಕೊಂದಾವರ್ತಿ ಮಾತ್ರ ಬರುತ್ತದೆ. ಆಗಲೇ ನಿರ್ಣಯವಾಗಿ ಬಿಡುತ್ತದೆ. ವಾದಿ, ಪ್ರತಿವಾದಿ ರಾಜಿಯಾಗುವುದೇ ಹೆಚ್ಚು. ಅಲ್ಲಿ ನನ್ನ ಆವಶ್ಯಕತೆ ಎನಿಸುತ್ತದೆ–ಎಂದರ್ಥವಲ್ಲ. ನಾನು ಅದೇ ಸಮಯ ಬಂದರೆ ಮಾತ್ರ ನನ್ನ ನಿದರ್ಶನಕ್ಕೆ, ಗಮನಕ್ಕೆ, ಸಮಕ್ಷಮಕ್ಕೆ ವರದಿಯಾಗುತ್ತದೆ. ಅದು ಬಾಯಿಂದ ಅಲ್ಲವೇ ಅಲ್ಲ, ಆದರೂ ಹೌದು. ವಿವೇಕ ಅತ್ತರೆ ತಾಯಿ ಕರಗುತ್ತಾಳೆ. ತಾಯಿ ಅತ್ತರೆ—ಅತ್ತೇ ಅಳುತ್ತಾಳೆ—ಅವನು ಬಾಲ ಆಡಿಸುತ್ತಾನೆ. ಕಣ್ಣಲ್ಲಿ ನೀರಿದ್ದಾಗಲೇ ಇಬ್ಬರೂ ನಗುತ್ತಾರೆ. ಮಕ್ಕಳು ಕುಣಿಯುತ್ತಾರೆ.

" ನೀಚ," ವಿವೇಕನಿಗೆ ತಾಯಿಯ ತಾರೀಫಿನ ಕರೆ.

" ಹೌದು !" ಅವನ ಉತ್ತರ.

" ಕಟುಕರು" ನನ್ನನ್ನು ಸಂಬೋಧಿಸುವ ಮರ್ಯಾದೆ.

" ಹೆ-ಹೆ-ಹೆ" ನನ್ನ ನಿರುದ್ದೇಶಪೂರ್ಣ ನಗೆ.

" ನಗೆ ಹೇಗೆ ಬರುತ್ತದೆ?" ಆಕೆಯ ಪ್ರತಿಕ್ರಿಯೆ.

" ಸಾಕು ಇನ್ನು" ನನ್ನ ಜಬರದಸ್ತಿ.

". ಇನ್ನು ನಿಮ್ಮ ಪಾಳಿ."

" ಊಟ ಉಂಟೋ ?" ವಿಷಯಾಂತರದ ನನ್ನ ಯತ್ನ.

" ಇರದೇನು ಮಾಡೀತು? ಮನೆಯಲ್ಲಿ ಆಳಿಟ್ಟಿದ್ದೀರಿ."

" ಹಸಿವೆಯಾಗುತ್ತದೆ."

"ಯಾಕೆ–ಹೊರಗೆ ಏನೂ ಬಿದ್ದಿಲ್ಲವೇನೋ !"

"ಓಹೋ, ಬೀಳದೆಯೇನು? ನಿಮ್ಮಪ್ಪ ಬಂದು ದೋಸೆ ಕೊಡಿಸಿದ್ದ."

" ಅವನ್ಯಾಕೆ ತರುತ್ತೀರಿ? ನೀಗಿ ಹೋಗಿದ್ದಾರೆ."

" ಮತ್ತೆ ನೀನೇ—"

" ಹೌದು, ನಾನೇ—"

ತಾಟು ; ಮಣೆ ; ಊಟ—ಇದು ಪದ್ಧತಿ.

ಇಂದು ತಾಟು-ಮಣೆ ಬಹು ದೂರವಾದಂತಿದೆ. ಒಲೆಯಲ್ಲಿ ಬೆಂಕಿ ಇಲ್ಲ. ಎಲ್ಲಾ ಉರಿ ಯಜಮಾನಿಯ ಮುಖದಲ್ಲೇ ಇದೆ. ಹಣೆಗೆ ಬೆವರು—ಮುತ್ತಿನ ಹನಿ. ಮುಖ ತಪ್ತಕಾಂಚನ. ಕಣ್ಣು ನಿಮಿಷ ನಿಮಿಷಕ್ಕೆ ಸೆಳೆದು ಭಲ್ಲೆಯಂತೆ ಚುಚ್ಚುತ್ತಿದೆ.

"ನಿಮ್ಮ ಮಗ ನನ್ನ ಮೇಲೆ ಕೈ ಮಾಡುತ್ತಾನೆ."

ಸತ್ಯ ಹೊರ ಬಂತು. ವಾಸ್ತವ ತಿರುವುಮುರುವಾಗಿದೆ. ಅಂತೆಯೇ ಈ ಕಾಳಿಕಾವತಾರ. ಆದರೆ ಕಾವು ಆರಿ ಕಣ್ಣ ಕೋಡಿ ಹರಿಯಿತು.

"ಇಲ್ಲ—ಇಲ್ಲ—ನಾನು— —"

ವಿವೇಕ ತೊದಲಿ ತೊದಲಿ ಅಳುತ್ತ ನೆಲಕ್ಕೆ ಬಿದ್ದ.

ನನಗೆ ನಗೆ ಬಂತು ; ಹೋಯಿತು.

"ನಗೆ ಹೇಗೆ ಬರುತ್ತದೋ—" ಮೂಗೊರಸುತ್ತಿದ್ದಾಳೆ.

". . . . ನನ್ನ ಕರ್ಮಕ್ಕೆ" ಹಣೆ ಮುಟ್ಟಿಕೊಂಡೆ. "ಹೂ—ಈಗೇನು ಮಾಡಬೇಕೆನ್ನುತ್ತೀ? ಅವ ಇಲ್ಲ ಎನ್ನುತ್ತಾನೆ. ಅವನ ಅಳು—ಅವನು ಬಿದ್ದ ರೀತಿ ಹೌದು—ತಪ್ಪು ಅಂದಂತೆ—"

"ಅದೆಲ್ಲಾ ನನಗೆ ಬೇಡ. ನನ್ನನ್ನೇ ಕಳಿಸಿಬಿಡಿ. ನೀವು ನೀವೇ ಇದ್ದು ಲೋಲಾಡಿರಿ."

"ಅಲ್ಲ; ಈಗ ಮಧ್ಯಾಹ್ನ ಊಟ—ಉಡಿಗೆ—ಅದನ್ನು ಕೇಳಿದೆ."

"ನನ್ನ ಹೊಟ್ಟೆ ತುಂಬಿದೆ."

"ತೇಗಿ ಬಿಡು, ಗೃಹದೇವತೇ. ನಿನ್ನ ಹೊಟ್ಟೆ ತುಂಬಿದರೆ ನಮ್ಮದೂ ತುಂಬಿದಂತೆ!"

"ಈ ಪುರಾಣ, ಈ ಕಥೆ, ಈ ಚೇಷ್ಟೆ ಇಂದು ಬೇಡ. ಇದರಿಂದಲೇ ಹೊಟ್ಟೆ ತುಂಬುವುದಿಲ್ಲ."

"ಹೌದು; ಮಕ್ಕಳೊಡನೆ ಜಗಳವಾಡಿದರೆ ತುಂಬುತ್ತದೆ."

"ಇನ್ನು ನೀವಷ್ಟು ಜಗಳ ಕಾಯುವಂತಿದೆ."

"ಛೇ—ಛೇ ಉಂಟೇ? ಈಗ . . ."

"ಇಂದು ಮನೆಯಲ್ಲಿ ಅಡುಗೆ ಇಲ್ಲ; ನನ್ನನ್ನು ಕಳಿಸಿಬಿಡಿ . . . ."

"ಅವ್ವ ನಾನೂ."

"ಅವ್ವ ನಾನೂ."

ಕುಂದಾ-ಮಂದಾ ಅವಳಿಗೆ ತೆಕ್ಕೆ ಬಿದ್ದು ಮುಖ ನೋಡಿದರು. ಮಕ್ಕಳನ್ನು ಸೆಳೆದುಕೊಂಡ ತಾಯಿ ಎರಡು-ಮೂರು ಗಂಟೆಯಿಂದ ದೂರ ವಿದ್ದ ಮಕ್ಕಳನ್ನು, ತಾವೇ ಅತ್ತು, ತಾವೇ ಆಡಿಕೊಂಡಿದ್ದ ಮಕ್ಕಳನ್ನು ಬಾಚಿ, ತಬ್ಬಿ ಮುತ್ತಿಟ್ಟಳು. ಒಂದಕ್ಕೆ ಮುತ್ತಿಟ್ಟರೆ ಇನ್ನೊಂದು ಮುಂದೆ ಬಂದು "ನಂಗೆ-ನಂಗೆ" ಎಂದು ತಾಯಿ ಮೈಮೇಲೆ ಬೀಳುತ್ತಿದೆ. ತಾಯಿ ನಗುತ್ತಿದ್ದಾಳೆ. ಕಣ್ಣಂಚಿನಲ್ಲಿ ನೀರು ನಿಂತದ್ದು ಅಲ್ಲೇ ಇದೆ. ಮುಖ ಸಿಟ್ಟಿನಿಂದ ಕೆಂಪಾಗಿ, ಈಗ ಆರಿ ಬಂಗಾರವಾಗಿದೆ. ವಿವೇಕ ಅಷ್ಟಷ್ಟೆ ಮುಖವೆತ್ತಿ ಕದ್ದು ತಾಯನ್ನು ನೋಡುತ್ತಿದ್ದಾನೆ.

"ಅವ್ವ . . . ಅಣ್ಣ . . ಹತ್ತಾ."

"ಸುಮ್ಮನಿರೇ-ಸಾಕು . . . . ಮೂದೇವಿ—ಮಾಂಕಾಳಿ—"

"ಅವ್ವ . . ದಾದಾ . . . ."

ಅಶೋಕ ಬಂದ. ಕೈಯಲ್ಲಿ ಕೆಂಪು ಕರಪತ್ರ. ಓದುತ್ತ ಬಂದ:

"ಜಂಗೀ ಸರ್ಕಸ್! ನಾಲ್ಕು ಸಿಂಹ, ಐದು ಕರಡಿ, ಆರು ಹುಲಿ, ಏಳು ಆನಿ . . ."

ಮಕ್ಕಳೆಲ್ಲ ತಾಯನ್ನು ಸುತ್ತಿ ರಿಂಗಣಗುಣಿತ ಮಾಡುತ್ತಿದ್ದಾರೆ. ಮಧ್ಯೆ ನಿಂತ ಯಜಮಾನಿ ನಗುತ್ತ ನನ್ನನ್ನೊಮ್ಮೆ ನೋಡಿದಳು:

ಪ್ರಸನ್ನ ವದನ!

ನನ್ನ ಹಸಿವೆ ಮಾಯವಾದದ್ದೂ ನೆನಪಿಲ್ಲ.



ಅವರು ಸಂಸ್ಕೃತದ ಮಹಾಕೋಶವೊಂದನ್ನು ರಚಿಸುತ್ತಿದ್ದಾರೆ

# ಭಾಷಾಶಾಸ್ತ್ರದ ದಿಗ್ಗಜ: ಡಾ. ಕತ್ರೆ

"ಸಂಶೋಧಕ"

ಕನ್ನಡ ನಾಡಿನ ಕಡಲ ಕರೆಯ ಹೊನ್ನಾವರ ದಲ್ಲಿ ಹುಟ್ಟಿ, ಮಂಗಳೂರಲ್ಲಿ ವಿದ್ಯಾಭ್ಯಾಸ ಪೂರೈಸಿದ ಕನ್ನಡಿಗರೊಬ್ಬರು ಇಂದು ಭಾರತದ —ಏಕೆ, ಜಗತ್ತಿನ—ಪ್ರಥಮ ಶ್ರೇಣಿಯ ಭಾಷಾ ಶಾಸ್ತ್ರಿಗಳಾಗಿದ್ದಾರೆಂದು ಹೇಳಿದರೆ ಹೆಮ್ಮೆಯಿಂದ ತಲೆ ಎತ್ತುವ ಕನ್ನಡಿಗರು, ಈ ವಿದ್ವಾಂಸರು ಕರ್ನಾಟಕದ ಯಾವುದೊಂದು ವಿಶ್ವವಿದ್ಯಾಲ-ಯದಲ್ಲಿರದೆ ಮಹಾರಾಷ್ಟ್ರದಲ್ಲಿ ತಮ್ಮ ಪಾಂಡಿತ್ಯದ ಪ್ರಭೆಯನ್ನು ಪಸರಿಸಬೇಕಾಗಿದೆಯೆಂದೊಡನೆ ತುಸು ತಲೆ ತಗ್ಗಿಸಬೇಕಾಗುವುದು.

ಕನ್ನಡನಾಡು ಎಂದೂ ಮರೆಯಲಾರದ ಪಂಜೆ ಮಂಗೇಶ ರಾವ್, ಬೆನಗಲ್ ರಾಮ ರಾವ್ ಮೊದಲಾದ ನಾಡೋಜರನ್ನು ಕೊಟ್ಟ ಸಾರಸ್ವತ ಸಮಾಜವೇ ಇಂದು ಪುಣೆಯ ಡೆಕ್ಕನ್ ಕಾಲೇಜ್ ಹಾಗು ಸ್ನಾತಕೋತ್ತರ ಸಂಸ್ಥೆಯ ಭಾಷಾ ಶಾಸ್ತ್ರವೇತ್ತರಾಗಿರುವ ಡಾ. ಸುಮಿತ್ರ ಮಂಗೇಶ ಕತ್ರೆಯವರನ್ನು ಕೊಟ್ಟಿತು. ಅವರ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸ ಮಂಗಳೂರಿನಲ್ಲಿ ಮುಗಿಯಿತು. ಮಂಗಳೂರಿನ ಗಣಪತಿ ಹೈಸ್ಕೂಲಿನಲ್ಲಿ ಕಲಿಯುತ್ತಿದ್ದಾಗಲೇ ಅಲ್ಲಿನ ಪ್ರಸಿದ್ಧ ಸಂಸ್ಕೃತ ವೈಯಾಕರಣಿಯಾದ ಶ್ರೀನಿ-ವಾಸಾಚಾರ್ಯರ ಸಹವಾಸದಿಂದ ಕತ್ರೆಯವರಿಗೆ ಸಂಸ್ಕೃತದ ಪೂರ್ಣ ಪರಿಚಯವಾಯಿತು. ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಉಚ್ಚ ಶಿಕ್ಷಣ ಪಡೆಯುತ್ತಿದ್ದಾಗ ತಮ್ಮ ಸಂಬಂಧಿಕರಾದ ಡಾ. ಎಸ್. ಆರ್. ಯು. ಸವೂರರ ನೆರವಿನಿಂದ ಜರ್ಮನ್ ಮತ್ತು ಫ್ರೆಂಚ ಭಾಷೆಗಳ ಅಧ್ಯಯನ ಮಾಡಿದರು. ಭಾಷಾಶಾಸ್ತ್ರದ ಹುಚ್ಚು ಅವರಿಗೆ ಹಿಡಿಯಿತು. ಅದರ ವಿಶೇಷಾಭ್ಯಾಸಕ್ಕಾಗಿ ಅವರು ೧೯೨೮ ರಲ್ಲಿ ಇಂಗ್ಲಂಡಿಗೆ ತೆರಳಿದರು.

ಲಂಡನ್ನಿನ ಪ್ರಾಚ್ಯವಿದ್ಯಾಲಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಅವರು ಸಂಸ್ಕೃತ ಪ್ರಾಕೃತ ಭಾಷೆಗಳ ಕೂಲಂಕಷ ಅಭ್ಯಾಸ ಮಾಡಿ ಲಂಡನ್ ವಿಶ್ವವಿದ್ಯಾಲಯದ ಬಿ. ಎ. (ಆನರ್ಸ್) ಪದವಿ ದೊರಕಿಸಿದರು. ಆ ಮೇಲೆ ಜಗತ್ಪ್ರಸಿದ್ಧ ಭಾಷಾ ಶಾಸ್ತ್ರಜ್ಞರಾದ ಸರ್ ರಾಲ್ಫ್ ಟರ್ನರ್, ವಿಲಿಯಂ ಸ್ಟೀಡ್, ಎಸ್. ಡಬ್ಲ್ಯೂ. ಬೇಲಿ ಮೊದಲಾದವರ ಮಾರ್ಗದರ್ಶನದಲ್ಲಿ ಅವೇ ಭಾಷೆಗಳ ಅಭ್ಯಾಸವನ್ನು ಮುಂದುವರಿಸಿ ಇಂಡೋ-ಆರ್ಯನ್ ಭಾಷಾಶಾಸ್ತ್ರದ ಮೇಲೆ ಪ್ರಬಂಧ ಬರೆದು ಪಿಎಚ್. ಡಿ. ಪದವಿಯನ್ನು ಸಂಪಾದಿಸಿದರು. ಅನಂತರ ಜರ್ಮನಿಗೆ ಹೋಗಿ ಭಾರತೀಯಶಾಸ್ತ್ರ (Indology) ವೇತ್ತರಾದ ಡಾ. ಕಿಪ್ಲರರ ಶಿಷ್ಯರಾಗಿ ಭಾಷಾ ಹಾಗು ಉಚ್ಚಾರ ಶಾಸ್ತ್ರಗಳಲ್ಲಿ ಪಾರಂಗತರಾಗಿ ೧೯೩೨ ರಲ್ಲಿ ಭಾರತಕ್ಕೆ ಮರಳಿದರು.

ಭಾರತಕ್ಕೆ ಬಂದಾಗ ಇವರಿಗೆ ಅನೇಕ ವಿಶೇ

'ಕಿರ್ಲೋಸ್ಕರ' ಆಧಾರದಿಂದ

ಷಜ್ಞರಿಗೊದಗಿದ ಅವಸ್ಥೆಯೇ ಒದಗಿತು. ಭಾಷಾ ಶಾಸ್ತ್ರದ ಅಭ್ಯಾಸಕ್ರಮವುಳ್ಳ ಯಾವುದೇ ವಿಶ್ವ ವಿದ್ಯಾಲಯ ಅಥವಾ ಸಂಸ್ಥೆ ಇಲ್ಲಿ ಇದ್ದಿತಾದರೂ ಎಲ್ಲಿ? ಪಾಂಡಿತ್ಯವು ಆಶ್ರಯವನ್ನು ಅರಸಿ ಕೊಂಡು ಹೋಗುವ ಸ್ಥಿತಿ ಅವರದಾಯಿತು. ಆದ್ದರಿಂದ ಅವರು ಪುಣೆಯ ವಾಡಿಯಾ ಕಾ-ಲೇಜು, ಪರಶುರಾಮಭಾವು ಕಾಲೇಜು, ಮುಂಬ ಯಿಯ ರುಯಿಯಾ ಕಾಲೇಜುಗಳಲ್ಲಿ ಸಂಸ್ಕೃತ, ಪ್ರಾಕೃತ ಮತ್ತು ಪಾಲಿ ಭಾಷೆಗಳನ್ನು ಕಲಿಸುತ್ತ ಕಾಲಯಾಪನೆ ಮಾಡುವ ಪ್ರಸಂಗ ಬಂತು. ಭಾಷಾಶಾಸ್ತ್ರದ ಅವರ ಅಪ್ರತಿಮ ಪಾಂಡಿತ್ಯಕ್ಕೆ ಯೋಗ್ಯ ಕಾರ್ಯಕ್ಷೇತ್ರ ದೊರಕಲು ಅವರು ಹತ್ತು ವರ್ಷ ಕಾಯಬೇಕಾಯಿತು.

೧೯೪೨ ರಲ್ಲಿ ಡೆಕ್ಕನ್ ಕಾಲೇಜು ಸ್ನಾತ ಕೋತ್ತರ ಸಂಶೋಧನ ಸಂಸ್ಥೆಯೆಂದು ಪುನಃ ಪ್ರಾರಂಭವಾದಾಗ ಡಾ. ಕತ್ರೆಯವರು ಬಯಸು ತ್ತಿದ್ದ ಸಂದರ್ಭ ಅವರಿಗೆ ಲಭಿಸಿತು. ಅದರ ಭಾಷಾಶಾಸ್ತ್ರಜ್ಞರೆಂದು ಸೇವಕ ಹೊಂದಿದ ಅವರು ನಾಲ್ಕೇ ವರ್ಷಗಳಲ್ಲಿ ನಡೆಸಿದ ಸಂಶೋ ಧನೆಗಳು ಭಾರತೀಯ ಭಾಷಾಶಾಸ್ತ್ರದ ಪ್ರವಾ ಹಕ್ಕೆ ನೂತನ ಧಾರೆಯೊಂದನ್ನು ಸೇರಿಸಿದವು.

ತಮ್ಮ ಮಾತೃಭಾಷೆಯಾದ ಕೊಂಕಣಿಯ ಬೇರೆ ಬೇರೆ ಒಳಬಣಗಳ ಸಂಶೋಧನೆ ಮಾಡಿ ಅವರು ಬರೆದ "Formation of Konkani" ಎಂಬ ಪ್ರಬಂಧವು ಸೂಕ್ಷ್ಮ ಅಧ್ಯಯನದ ಉತ್ತಮ ಉದಾಹರಣೆಯಾಗಿದೆ. ಆದರೆ ಆಚಾರ್ಯ ಕತ್ರೆಯವರ ಹೆಸರನ್ನು ಚಿರ ಸ್ಥಾಯಿಯಾಗಿ ಮಾಡುವ ಕಾರ್ಯವೆಂದರೆ ಅವರು ೧೯೪೧ ರ ಮೊಟ್ಟಮೊದಲು ಮುಂಬೈ ವಿಶ್ವವಿದ್ಯಾ ಲಯದ ವಿಲ್ಸನ್ ಭಾಷಾಶಾಸ್ತ್ರ ವ್ಯಾಖ್ಯಾನ ಮಾಲೆಯಲ್ಲಿ ಮಂಡಿಸಿದ "ಐತಿಹಾಸಿಕ ಭಾಷಾ ಶಾಸ್ತ್ರ"ದ ಅವರದೇ ಆದ ಮೌಲಿಕ ಸಿದ್ಧಾಂತ ವಾಗಿದೆ.

ಡಾ. ಕತ್ರೆಯವರ ಸಿದ್ಧಾಂತವನ್ನು ಅರ್ಥ ಮಾಡಿಕೊಳ್ಳಬೇಕಾದರೆ ಭಾಷಾಶಾಸ್ತ್ರದ ಬಗ್ಗೆ ಭಾರತದಲ್ಲಿ ನಡೆದ ಸಂಶೋಧನೆಗಳ ವಿಚಾರ ವನ್ನು ಸ್ಥೂಲವಾಗಿಯಾದರೂ ತಿಳಿದುಕೊಳ್ಳ ಬೇಕಾಗುತ್ತದೆ.

ಭಾರತದ ಸಂಸ್ಕೃತ ಭಾಷೆಯ ಶಬ್ದಗಳನ್ನೂ ಯುರೋಪಿನ ಪ್ರಾಚೀನ ಗ್ರೀಕ್, ಲ್ಯಾಟಿನ್ ಭಾಷೆಗಳ ಶಬ್ದಗಳನ್ನೂ ತುಲನಾತ್ಮಕವಾಗಿ ಅಭ್ಯಸಿಸಿ, ಅವುಗಳ ಹೋಲಿಕೆಯನ್ನು ಕಂಡು ಕೊಂಡು ಸಂಸ್ಕೃತವು ಗ್ರೀಕ್ ಲ್ಯಾಟಿನ್‌ಗಳ ಅಕ್ಕನೆಂಬ ಸಿದ್ಧಾಂತವನ್ನು ಸರ್ ವಿಲಿಯಂ ಜೋನ್ಸರು ೧೭೮೬ರಲ್ಲಿ ಸಾರಿದ ನಂತರ ಭಾಷೆಗಳ ತುಲನಾತ್ಮಕ ಅಭ್ಯಾಸಕ್ಕೆ ಪುಟ ದೊರೆಯಿತು. ಅದೇ ದಾರಿಯಲ್ಲಿ ನಡೆದು ಡಾ. ಭಾಂಡಾರಕರರು ೧೮೭೭ರಲ್ಲಿ ಭಾರತದ ಇಂದಿನ ಭಾಷೆಗಳಾದ (ದ್ರಾವಿಡ ಭಾಷೆಗಳನ್ನುಳಿದು) ಹಿಂದಿ, ಮರಾಠಿ, ಗುಜರಾಥಿ, ಬಂಗಾಲಿ ಮೊದಲಾದವು ಸಂಸ್ಕೃತ ದಿಂದ ಹೇಗೆ ಹುಟ್ಟಿದವೆಂಬ ಸಿದ್ಧಾಂತವನ್ನು ಮಂಡಿಸಿದರು. ಭಾಂಡಾರಕರರ ಸಿದ್ಧಾಂತದಿಂದ ಪ್ರೇರಿತರಾಗಿ ಪ್ಯಾರೀಸ್ ಪಂಥದ ಯೂಲ್ಸ್ ಬ್ಲಾಕರು ೧೯೧೪ರಲ್ಲಿ ಮರಾಠಿ ಭಾಷಾರಚನೆ ಯೆಂಬ ತಮ್ಮ ಪ್ರಸಿದ್ಧ ಗ್ರಂಥವನ್ನು ಪ್ರಕಟಿಸಿ ದರು. ಅನಂತರ ವಿವಿಧ ಆಧುನಿಕ ಆರ್ಯ ಭಾಷೆ ಗಳಾದ ಬಂಗಾಲಿ, ಪಂಜಾಬಿ, ಅವಧಿ, ಗುಜರಾಥಿ ಮೊದಲಾದ ಭಾಷೆಗಳ ಬಗ್ಗೆ ವಿವಿಧ ಭಾರತೀಯ ವಿದ್ವಾಂಸರು ಸಂಶೋಧನೆಗಳನ್ನು ನಡೆಸಿದರು. ಡಾ. ಕತ್ರೆಯವರ ಕೊಂಕಣೀ ಭಾಷಾರಚನೆ ಯನ್ನು ಕುರಿತ ಗ್ರಂಥ ಇದೇ ಶ್ರೇಣಿಯದು.

ಆದರೆ ಡಾ. ಕತ್ರೆಯವರು ಭಾಷಾಶಾಸ್ತ್ರಾ ಭ್ಯಾಸದಲ್ಲಿ ತಮ್ಮದೇ ಆದ ಹೊಸ ಕಲ್ಪನೆಯೊಂ-ದನ್ನು ಸೇರಿಸಿದರು. ಡಾ. ಭಾಂಡಾರಕರ, ಟರ್ನರ್, ಸುಖಟಣಕರ ಮೊದಲಾದ ವಿದ್ವಾಂ-ಸರು ಸಂಸ್ಕೃತಜನ್ಯ ಭಾಷೆಗಳ ಬೆಳವಣಿಗೆ, ಅವುಗಳ ತುಲನಾತ್ಮಕ ವ್ಯಾಕರಣದ ಸ್ವರೂಪ ಮೊದಲಾದವುಗಳನ್ನು ಇವರಿಗಿಂತ ಮೊದಲೇ ಪ್ರಸ್ತಾಪಿಸಿದ್ದರು. ಆದರೆ ಅವರೆಲ್ಲರೂ ಐತಿಹಾ ಸಿಕ ವಿಚಾರಗಳನ್ನು ಗಮನಕ್ಕೆ ತಂದುಕೊಳ್ಳದೇ ಕೇವಲ ತುಲನಾತ್ಮಕ ಅಭ್ಯಾಸದಿಂದಲೇ ಸಿದ್ಧಾಂ ತಕ್ಕೆ ಬಂದಿದ್ದರೆಂಬುದನ್ನು ಕತ್ರೆಯವರು ಕಂಡು

ಕೊಂಡರು. ಇದು ತೃಪ್ತಿಕರ ಪದ್ಧತಿಯೆಂದು ಅವರಿಗೆ ಅನಿಸಲಿಲ್ಲ. ವ್ಯಕ್ತಿಗೂ ದೇಶಕ್ಕೂ ಇತಿಹಾಸವಿದ್ದಂತೆ ಭಾಷೆಗೂ ಇದೆ. ಭಾಷೆಯೂ ದೇಶಕಾಲಗಳ ಪರಿಮಿತಿಗೆ ಒಳಪಟ್ಟೇ ಬೆಳೆಯುತ್ತದೆ. ಆದ್ದರಿಂದ ಯಾವ ಭಾಷೆಯ ಅಭ್ಯಾಸ ಮಾಡಬೇಕಾದರೂ ಕೇವಲ ತರ್ಕ, ಅನುಮಾನಗಳನ್ನು ಅವಲಂಬಿಸದೆ ಇತಿಹಾಸವನ್ನೂ ಲೆಕ್ಕಕ್ಕೆ ತೆಗೆದುಕೊಳ್ಳಬೇಕು. ಇಲ್ಲದಿದ್ದರೆ ಭಾಷಾಶಾಸ್ತ್ರದಲ್ಲಿ ಗೊಂದಲ ಖಂಡಿತ ಎಂದು ಅವರು ವಾದಿಸಿದರು.

ಉದಾಹರಣೆಗೆ ತಾಯಿ ಎಂಬ ಅರ್ಥದ ಸಂಸ್ಕೃತ "ಮಾತೃ" ಮತ್ತು ಇಂಗ್ಲಿಷ್ "ಮದರ್" ಶಬ್ದಗಳನ್ನು ನೋಡಿದರೆ ಮಾತೃವಿನಿಂದಲೇ ಮದರ್ ಹುಟ್ಟಿದೆಯೆಂದು ಭಾಸವಾಗಬಹುದು. ಆದರೆ ವೈದಿಕ ಸಂಸ್ಕೃತದಲ್ಲಿ "ಮಾತೃ" ಶಬ್ದ ಹುಟ್ಟಿದ್ದು ಕ್ರಿ. ಪೂ. ೧೫ ನೇ ಶತಮಾನದಲ್ಲಿ; ಇಂಗ್ಲೀಷಿನಲ್ಲಿ "ಮದರ್" ಉದಯ ಕ್ರಿ. ಶ. ೧೧ ನೇ ಶತಮಾನದಲ್ಲಿ. ಇವೆರಡರಲ್ಲಿ ೨೫ ಶತಮಾನಗಳ ಅಂತರವಿದೆ. ಅದರಿಂದ "ಮದರ್" ಶಬ್ದ "ಮಾತೃ" ಶಬ್ದದಂತೆ ಕಂಡರೂ ಅದು ಕಾಲಮಾನವನ್ನು ನೋಡಿದರೆ ನಿಜವಾಗಿ ಲ್ಯಾಟಿನ್ ಭಾಷೆಯ "ಮೇಟರ್" ಶಬ್ದದಿಂದಲೇ ಹುಟ್ಟಿರಬೇಕೆಂಬುದು ಸಯುಕ್ತಿಕವಾಗುವುದು. ಕಾಲಮಾನವನ್ನು ಗಣನೆಗೆ ತಾರದಿದ್ದರೆ ಯಾವುದರಿಂದ ಯಾವುದು ಹುಟ್ಟಿತೆಂಬುದು ಸಿದ್ಧವಾಗುವಂತಿಲ್ಲ.

ಕತ್ರೆಯವರ ಇನ್ನೊಂದು ಸಿದ್ಧಾಂತವು ಸಮಾನಾರ್ಥಕ ಶಬ್ದಗಳಿಗೆ ಸಂಬಂಧಿಸಿದೆ. ಒಂದೇ ಅರ್ಥ ಕೊಡುವ ಹಲವು ಶಬ್ದಗಳು ಭಾಷೆಯಲ್ಲಿದ್ದರೂ ಅವುಗಳಲ್ಲಿ ಉತ್ತಮ ಶಬ್ದಗಳಷ್ಟೇ ಉಳಿದು ಮತ್ತೆಲ್ಲವೂ ಕಾಲಪ್ರವಾಹದಲ್ಲಿ ಮುಳುಗಿ ಹೋಗುತ್ತವೆ. ಉದಾಹರಣೆಗೆ ಅಶ್ವ ಶಬ್ದ. ಸಂಸ್ಕೃತ "ಅಶ್ವ", ಗ್ರೀಕ್ "ಹಿಪಾಸ್" ಲ್ಯಾಟಿನ್ "ಏಕುಸ್" ಇವೆಲ್ಲವೂ ಸಂಬಂಧಿಸಿದ ಶಬ್ದಗಳಾಗಿದ್ದು ಮರಾಠಿ ಮೊದಲಾದ ಭಾಷೆಗಳಲ್ಲಿಯೂ ಅದು ಹಿಂದೆ ಇತ್ತು. ಆದರೆ ಈಗ ಮರಾಠಿಯಲ್ಲಿ ಕುದುರೆಗೆ "ಘೋಡಾ" ಶಬ್ದ ಬಂದುಬಿಟ್ಟಿದೆ. ಇದು ಕ್ರಿ. ಪೂ. ೩ನೇ ಶತಕದಿಂದ ಭಾರತದಲ್ಲಿ ಕಾಣಿಸುವ "ಘೋಟಕ" ಶಬ್ದಕ್ಕೆ ಸಂಬಂಧಿಸಿದ್ದರೂ ಮೂಲತಃ ಸಂಸ್ಕೃತವಲ್ಲ. ಇತಿಹಾಸಪೂರ್ವ ದ್ರಾವಿಡ ಶಬ್ದವಾದ "ಘುತ್ರ" ದಿಂದ "ಘೋಟಕ" ಹುಟ್ಟಿತು. "ಘುತ್ರ"ದ "ಘ" ಮೂಲ ದ್ರಾವಿಡವೂ ಅಲ್ಲ. ಅದು ಬಂದದ್ದು ಇಜಿಪ್ತದಿಂದ. ಹಿಂದೆ ಈಜಿಪ್ತದಿಂದ ಕುದುರೆಗಳನ್ನು ಇಲ್ಲಿಗೆ ತಂದಾಗ ಆ ಶಬ್ದ ಇಲ್ಲಿಗೆ ಬಂದು ರೂಢವಾಗಿ ದ್ರಾವಿಡ ಭಾಷೆಗಳಲ್ಲಿ "ಕುದುರೆ" ಯಾಗಿದೆ. ಮರಾಠಿ ಮೊದಲಾದ ಇತರ ಭಾಷೆಗಳಲ್ಲಿ ಘುತ್ರ–ಘೋಟಕ–ಘೋಡಾ ಆಗಿ ಉಚ್ಚಾರಕ್ಕೆ ಹಗುರಾದುದರಿಂದ "ಅಶ್ವ"ವನ್ನು ಬದಿಗೆ ಸರಿಸಿಬಿಟ್ಟಿತು.

ಘೋಟಕ ಶಬ್ದದಂತೆ ಪರಭಾಷೆಗಳಿಂದ ಸಂಸ್ಕೃತದಲ್ಲಿ ಅಸಂಖ್ಯ ಶಬ್ದಗಳು ಸೇರಿಕೊಂಡಿವೆಯೆಂದು ಕಂಡುಹಿಡಿಯಲಾಗಿದೆ. ೩,೫೦೦ ವರ್ಷಗಳ ಕೊಡಕೊಳ್ಳುವಿಕೆಯಲ್ಲಿ ೧೦೦ದಷ್ಟು ಚಿಕ್ಕ ದೊಡ್ಡ ಭಾಷೆಗಳಿಂದ ಸಂಸ್ಕೃತ ಶಬ್ದಭಾಂಡಾರದಲ್ಲಿ ಅಳವಡಿಸಲ್ಪಟ್ಟ ಶಬ್ದಗಳು ಸೇಕಡಾ ೪೦ ರಷ್ಟಾಗಬಹುದು.

ಹೀಗೆ ಐತಿಹಾಸಿಕ ತಳಹದಿಯ ಮೇಲೆ ಸಂಸ್ಕೃತ ಹಾಗು ಇತರ ಭಾಷೆಗಳ ಶಾಸ್ತ್ರೀಯ ಅಭ್ಯಾಸ ಹಾಗು ಸಂಶೋಧನೆ ನಡೆಸಿ ಬೃಹತ್ಕೋಶವೊಂದನ್ನು ರಚಿಸುವ ಯೋಜನೆಯನ್ನು ಡಾ. ಕತ್ರೆಯವರು ಮಾಡಿದ್ದಾರೆ. ೧೮೭೫ ರಲ್ಲಿ ಜರ್ಮನಿಯ ರಾಥ್ ಹಾಗು ಬೋಥ್ ಲಿಂಕರರು ರಚಿಸಿದ ಸೇಂಟ್‌ಪೀಟರ್ಸ್‌ಬರ್ಗ್ ಸಂಸ್ಕೃತ ಕೋಶದ ನಂತರ ಅಧಿಕೃತವಾದ ಸಂಸ್ಕೃತ ಕೋಶವೇ ರಚಿಸಲ್ಪಟ್ಟಿಲ್ಲ. ಅಂದಿನಿಂದೀಚೆಗೆ ದೊರಿತ ಅಪಾರ ಹೊಸ ಜ್ಞಾನವು ಇನ್ನೂ ಕೋಶಗಳಲ್ಲಿ ಸೇರಿಕೊಂಡಿಲ್ಲ.

ಡಾ. ಕತ್ರೆಯವರು ಈ ಕೊರತೆಯನ್ನು ನೀಗಿಸುವ ಉದ್ಯಮ ಕೈಕೊಂಡಿದ್ದಾರೆ. ೩ ೫೦೦ ವರ್ಷಗಳ ಕಾಲಪ್ರವಾಹದಲ್ಲಿ ಸಂಸ್ಕೃತದಲ್ಲಿ

ಇರುವ, ಸೇರಿಕೊಂಡ, ಅರ್ಥ ಬದಲಾವಣೆ ಗೊಂಡ ಪ್ರತಿಯೊಂದು ಶಬ್ದದ ವಿವರವನ್ನೂ ಐತಿಹಾಸಿಕ ಕ್ರಮದಲ್ಲಿ ವಿವೇಚಿಸಿ ಈ ಕೋಶ ದಲ್ಲಿ ನಿರೂಪಿಸಲಾಗುವುದು. ಇದು ಹಿಮಾಲಯ ಸದೃಶವಾದ ಕಾರ್ಯ. ಸುಮಾರು ೨,೦೦೦ ಸಂಸ್ಕೃತ ಗ್ರಂಥಗಳ ಶುದ್ಧ ಪ್ರತಿಮಾಡಿ, ಅವು ಗಳಲ್ಲಿನ ಶಬ್ದಗಳನ್ನು ಅಭ್ಯಸಿಸಿ ಕಾಲಾನುಕ್ರಮ ವಾಗಿ ವಿಂಗಡಿಸಬೇಕಾಗುವುದಲ್ಲದೆ ಅಸಂಖ್ಯ ಶಾಸನಗಳನ್ನು ಪರಿಶೀಲಿಸಬೇಕಾಗುವುದು.

ಈ ಕೋಶರಚನೆಯ ಕಾರ್ಯ ೧೯೪೮ ರಲ್ಲೇ ಪ್ರಾರಂಭವಾಗಿದೆ. ಇದನ್ನು ಬರೆದು ತೆಗೆಯ ಲಿಕ್ಕೇ ೧೫ ವರ್ಷಗಳು ಹಿಡಿಯುವವು. ಮುದ್ರ ಣಕ್ಕೆ ಮತ್ತೆ ೫ ವರ್ಷಗಳು. ಡಾ. ಕತ್ರೆಯವರ ಅನೇಕ ಸಹಕಾರಿಗಳಲ್ಲದೆ ಪ್ಯಾರೀಸಿನ ಪ್ರೊ. ಲುಯಿ ರೇನು, ಅಮೇರಿಕದ ಪೆನ್ಸಿಲ್ವೇನಿಯ ವಿಶ್ವ ವಿದ್ಯಾಲಯದ ಪ್ರೊ. ನಾರ್ಮನ್ ಬ್ರೌನ್, ಯುಥರೆಕ್ಟ ವಿದ್ಯಾಪೀಠದ ಪ್ರೊ. ಗೊಂಡಾ ಮತ್ತು ಯೇಲ್ ವಿಶ್ವವಿದ್ಯಾಲಯದ ಫ್ರಾಂಕ್ಲಿನ್ ಎಜರ್ಟನ್ ಅವರ ಸಹಕಾರವನ್ನೂ ಪಡೆಯ ಲಾಗಿದೆ ಕೇಂದ್ರ ಸರಕಾರ ೧೫ ವರ್ಷ ಕಾಲ ಪ್ರತಿವರ್ಷ ಒಂದು ಲಕ್ಷ ರೂಪಾಯಿಯಂತೆ ಧನ ಸಹಾಯ ಕೊಡಮಾಡಿದೆ. ಮುಂಬೈ ಸರಕಾರ, ಮುಂಬೈ ವಿಶ್ವವಿದ್ಯಾಲಯ, ಪುಣೆ ವಿಶ್ವವಿದ್ಯಾ-ಲಯ, ಟಾಟಾ ವಿಶ್ವಸ್ತ ನಿಧಿ ಇವುಗಳ ಧನ ಸಹಾಯವೂ ದೊರೆಯುತ್ತಿದೆ.

ಡಾ ಕತ್ರೆಯವರು ಇನ್ನೂ ೫೦ರ ಇತ್ತಕಡೆಯ ಇದ್ದಾರೆ. ಈ ಮಹಾಕೋಶವಲ್ಲದೆ ಇತರ ಲಿಖಿತ ಹಾಗು ಅಲಿಖಿತ ಭಾಷೆಗಳ ಸಂಶೋಧನೆಯ ಬಗ್ಗೆಯೂ ವಿವರ ಯೋಜನೆ ಮಾಡಿದ್ದಾರೆ. ಅವರ ಅಸಾಧಾರಣ ಕರ್ತೃತ್ವ ಶಕ್ತಿ ಇವೆಲ್ಲ ಕಾರ್ಯಗಳನ್ನು ಯಶಸ್ವಿಯಾಗಿ ಪೂರೈಸುವುದೆಂ ಬಲ್ಲಿ ಸಂಶಯವಿಲ್ಲ.

---

ನಿರುಪದ್ರವಿಯಂತೆ ಕಾಣುವ ಈ ಪ್ರಾಣಿ ಎಸಗುವ ಅನರ್ಥಗಳೆಷ್ಟು !

# ಮಾನವನ ಪರಮಶತ್ರು—ಆಡು

ರೇಮಂಡ್ ಫ್ಯುರೋನ್

ಜಗತ್ತಿನ ಬೆಳೆಯುತ್ತಿರುವ ಜನಸಂಖ್ಯೆಯ ಆಹಾರ ಸಮಸ್ಯೆಯ ವಿಚಾರ ಬಂದಾಗೆಲ್ಲ ಭೂಮಿಯ ಸಾರನಾಶ ಮತ್ತು ಅದರಿಂದ ಆಹಾರ ಉತ್ಪಾದನೆಯ ಮೇಲಾಗುವ ದುಷ್ಪರಿಣಾಮದ ಸಮಸ್ಯೆ ತಜ್ಞರೆದುರು ನಿಲ್ಲುವುದು. ಈ ಪ್ರಶ್ನೆಯನ್ನು ಅವರು ಚರ್ಚಿಸುವಾಗ ನಮಗೆಲ್ಲರಿಗೆ ಪರಿಚಿತವಾದ ಒಂದು ಚಿಕ್ಕ ಸಾಕುಪ್ರಾಣಿಯ ವಿಷಯವು ಅದರಲ್ಲಿ ತಪ್ಪದೆ ನುಸುಳಿಕೊಳ್ಳುತ್ತದೆ. ಆ ಪ್ರಾಣಿಯ ಹೆಸರು ಆಡು.

ಭೂಮಿಯ ಸಾರನಾಶದಂಥ ಮಹಾಪ್ರಶ್ನೆಗೂ ಆಡಿಗೂ ಸಂಬಂಧವಿದೆಯೆಂದರೆ 'ಛಿ! ಎಂಥ ಮಾತು' ಎಂದು ಯಾರಾದರೂ ಮೂಗು ಮುರಿದಾರು. ಆಡು ಒಂದು ಸಾಧು ಪ್ರಾಣಿ. ಅದರ ಹಾಲು ಮತ್ತು ಮಾಂಸ ಮನುಷ್ಯನಿಗೆ ಒಳ್ಳೆಯ ಪುಷ್ಟಿಕರವಾದ ಆಹಾರವನ್ನು ಒದಗಿಸುತ್ತದೆ. ಕುರಿಯ ಉಣ್ಣೆ ಬಟ್ಟೆ-ಕಂಬಳಿಗಳನ್ನೊದಗಿಸುತ್ತದೆ. ಮನುಷ್ಯನಿಗೆ ಇಷ್ಟೊಂದು ಉಪಯುಕ್ತವಾಗಿರುವ ಪ್ರಾಣಿ ಭೂಮಿಯ ಸವಕಳಿಗೂ ಬರಗಾಲಕ್ಕೂ ಕಾರಣವಾಗಿದೆಯೆಂದರೆ ಯಾರು ನಂಬಬೇಕು ?

ಆದರೆ ಈ ವಿಷಯಗಳ ಯಾವ ತಜ್ಞರನ್ನು ಕೇಳಿದರೂ ಅವರು "ಆಡು ಮನುಷ್ಯನ ಪರಮಶತ್ರು" ಎನ್ನುತ್ತಾರೆ. ಯುನೆಸ್ಕೋ ಮತ್ತು ಐಯುಸಿಎಸ್ ಎಂಬ ಅಂತಾರಾಷ್ಟ್ರೀಯ ಸಂಸ್ಥೆಗಳು ನಡೆಸಿದ ಪರಿಶೀಲನೆಗಳು ಇದನ್ನು ನಿಸ್ಸಂಶಯವಾಗಿ ತೋರಿಸುತ್ತವೆ. ಭೂಮಧ್ಯ ಸಮುದ್ರ ಪ್ರದೇಶವು ಮರ ಗಿಡ ರಹಿತವಾಗಿ ಬೋಳಾಗಲು ಆಡುಗಳೇ ಮುಖ್ಯ ಕಾರಣವಾಗಿವೆ. ಹುಲ್ಲನ್ನು ಮೇಯುವುದರಿಂದ ತೃಪ್ತಿ ಹೊಂದದ ಈ ಪ್ರಾಣಿಗಳು ಅದರ ಬೇರನ್ನು ಕಿತ್ತು ತಿನ್ನುವವು. ಅದರಂತೆ ಗಿಡ-ಗಂಟಿಗಳ ಸಸಿಗಳನ್ನೂ ಬೇರು ಸಹಿತ ಕಿತ್ತು ತಿನ್ನುವುದರಿಂದ ಅವು ಬೆಳೆದು ವಿಸ್ತರಿಸಲು ಅವಕಾಶವೇ ಇಲ್ಲದಂತಾಗುತ್ತದೆ.

ಆಡುಗಳು ತುದಿಗಾಲ ಮೇಲೆ ನಿಂತು ಎತ್ತರದ ಟೊಂಗೆಗಳ ಎಲೆಗಳನ್ನೂ ತಿನ್ನುವವು. ಕೆಲ ವೇಳೆ ಅವು ಗಿಡಗಳನ್ನೇರಲೂ ಸಮರ್ಥವಾಗುವವು. ಎಂಥ ಕಡಿದಾದ ಗುಡ್ಡವನ್ನೂ ಅತಿ ಚಪಲವಾದ ಆಡು ನಿರ್ಭಯದಿಂದ ಏರಿ

" ಯುನೆಸ್ಕೋ ಕೋರಿಯರ್ " ನಿಂದ

ಇಳಿದು ಮೇಯುವುದು. ಕಲ್ಲಿನ ಬುಡದಲ್ಲಿರುವ, ಕಣ್ಣಿಗೆ ಕಾಣದ ಬೀಜ ಕೂಡ ಅದರ ಕಣ್ಣಿನಿಂದ ತಪ್ಪಿ ಹೋಗುವುದಿಲ್ಲ. ಈ ರೀತಿಯಲ್ಲಿ ವನಸ್ಪತಿಯ ಹುಟ್ಟನ್ನೇ ನಿರ್ನಾಮ ಮಾಡಿ ಆಡು ಬತ್ತಲೆ ಭೂಮಿಯ (ವಿಶೇಷತಃ ಗುಡ್ಡಗಳ ಓರೆ)ನ್ನು ಮಳೆ ಮತ್ತು ಬಿಸಿಲುಗಳ ರಭಸಕ್ಕೆ ಒಡ್ಡಿ ಭೂಮಿಯ ತೀವ್ರ ಸವಕಳಿಗೆ ಕಾರಣವಾಗುತ್ತದೆ.

ಸ್ಪೇನ್ ದೇಶದಲ್ಲಿ ಭೂಮಿಯನ್ನು ವೃಕ್ಷಹೀನವಾಗಿ ಮಾಡಿದ್ದು ಆಡು ಕುರಿಗಳೇ—ಕುರಿ ಆಡಿಗಿಂತಲೂ ಅಲ್ಲಿ ಹೆಚ್ಚು ಅನಾಹುತ ಮಾಡಿದೆ. ಭೂಮಧ್ಯ ಸಮುದ್ರದ ಇತರ ತೀರ ಪ್ರದೇಶಗಳ ಅವಸ್ಥೆಯೂ ಹಾಗೆಯೇ ಆಗಿದೆ.

ರೋಮನ್ನರ ಕಾಲದಲ್ಲೇ ಆಡು ಕುರಿಗಳ ಹಿಂಡುಗಳನ್ನು ಆಗಾಗ ಗುಡ್ಡದ ಅಡವಿಗಳಿಗೆ ಮೇಯಲು ಒಯ್ಯುತ್ತಿದ್ದರು. ಕ್ರಿ. ಪೂ. ೨ ನೇ ಶತಮಾನದಲ್ಲಿ ಕೇಟೋನಂಥ ಪಂಡಿತನು "ನೀರಿನ ಕೊರತೆಯಿಂದ ನಿಮಗೆ ಹುಲ್ಲುಗಾವಲಿನ ಅಭಾವವುಂಟಾದಲ್ಲಿ ಕಡಿದಾದ ಗುಡ್ಡದ ಓರೆಯಲ್ಲಿ ಮೇಯುವ ಹಕ್ಕಲನ್ನು ಮಾಡಿಕೊಳ್ಳಿರಿ" ಎಂದಿದ್ದ. ಜನರು ಅವನ ಈ ತಪ್ಪು ಉಪದೇಶವನ್ನು ಅನುಸರಿಸಿದರು. ಆಡು-ಕುರಿಗಳ ಹಿಂಡುಗಳು ಮೇಯತೊಡಗಿದಂತೆ ದಟ್ಟವಾದ ಅಡವಿಗಳು ಕರಗುತ್ತ ಬಂದು ನಿರ್ನಾಮವಾದವು.

ಉತ್ತರ ಆಫ್ರಿಕೆಯಲ್ಲಿ ಆಡುಗಳ ಹಿಂಡುಗಳನ್ನು ತಂದ ಬಳಿಕವೇ ಬರ್ಬರ ದೇಶ ನಿರ್ನಾಮವಾಯಿತು. ಮೊರೊಕ್ಕೊದಲ್ಲಿ ಆಡುಗಳ ಪ್ರವೇಶವಾದ ಬಳಿಕ ದೇವದಾರು ಗಿಡಗಳು ಅಪರೂಪವಾಗಿವೆ.

ಸಸಿಗಳನ್ನು ತಿಂದು ತೃಪ್ತವಾಗದ ಆಡುಗಳು ಭೂಮಿಯೊಳಗೆ ಅಡಗಿದ್ದು ಮುಂದೆ ಸಸಿಯಾಗಿ ಮೊಳೆಯುವ ಬೀಜಗಳನ್ನು ತಿನ್ನಲೆಂದು ಭೂಮಿಯನ್ನೇ ಕಚ್ಚಿ ಮೇಯುತ್ತವೆಂದು ಆಗಸ್ಟ ಕೆವಿಲಿಯರ್ ಎಂಬ ವನಸ್ಪತಿ ಶಾಸ್ತ್ರಜ್ಞ ಹೇಳಿದ್ದಾನೆ.

ಮಡಗಾಸ್ಕರ ಸಹಿತ ಇಡೀ ಆಫ್ರಿಕೆಯು ಈ ಕಟು ಅನುಭವವನ್ನು ಹೊಂದಿದೆ. ಏಶಿಯದಲ್ಲಿಯ ಲೆಬನಾನ, ಸಿರಿಯ ಮತ್ತು ಇಸ್ರಾಯೇಲದ ಸುಣ್ಣದ ಕಲ್ಲಿನ ಗುಡ್ಡಗಳು ಆಡುಗಳ ಪ್ರವಾಸದಿಂದ ವನಸ್ಪತಿಹೀನವಾಗಿವೆ. ಚೀನದವರೆಗೂ ಆಡುಗಳ ಹಾವಳಿಯ ಗುರುತುಗಳನ್ನು ಕಾಣಬಹುದಾಗಿದೆ.

ಆಡು ಇಷ್ಟೊಂದು ಅನಾಹುತ ಮಾಡುತ್ತದೆ ಎಂದಾಗ ಮತ್ತಾವ ಪ್ರಾಣಿಗಳೂ ಬೆಳೆಯನ್ನು ನಾಶಮಾಡುವದಿಲ್ಲವೇ, ಪಾಪ ! ಆಡಿನ ಮೇಲೆ ಮಾತ್ರ ಏಕೆ ವಕ್ರದೃಷ್ಟಿ? ಎಂದು ಜನ ಕೇಳುತ್ತಾರೆ. ಆದರೆ ಆಡಿನಿಂದ ಆದ ಅನಾಹುತದ ಉದಾಹರಣೆಗಳನ್ನು ಈಕ್ಷಿಸಿದಾಗ ಈ ಮಾತಿನ ಗಾಂಭೀರ್ಯ ಲಕ್ಷಕ್ಕೆ ಬರುವಂತಿದೆ.

ಕೆಲ ಶತಮಾನಗಳಿಂದ ಹೊಸ ಭೂಪ್ರದೇಶಗಳನ್ನು ಅರಸುತ್ತ ಹೊರಟಿದ್ದ ಹಿಂದಿನ ನಾವಿಕರು ತಾವು ಶೋಧಿಸಿದ ಪ್ರದೇಶದಲ್ಲಿ ಕೆಲ ಸಾಕುಪ್ರಾಣಿಗಳನ್ನು ಒಯ್ದು ಬಿಡುತ್ತಿದ್ದರು. ಅವುಗಳಲ್ಲಿ ಆಡೇ ವಿಶೇಷವಾಗಿ ಇದ್ದಿತು. ಒಮ್ಮೆ ಇಂಥ ಹೊಸ, ಜನನಿಬಿಡತೆಯಿಲ್ಲದ ಸಮೃದ್ಧ ಭೂಮಿಯ ಹವೆಗೆ ಒಗ್ಗಿಕೊಂಡವೆಂದರೆ ಆಡುಗಳು ಕೆಲವೇ ವರ್ಷಗಳಲ್ಲಿ ಅಗಾಧವಾಗಿ ಸಂತಾನವೃದ್ಧಿ ಮಾಡಿಕೊಂಡುಬಿಡುತ್ತವೆ.

ಅಟ್ಲಾಂಟಿಕ ಮಹಾಸಾಗರದ ನಡುವಿರುವ ಸೆಂಟ್ ಹೆಲೆನಾ ನಡುಗಡ್ಡೆಯು ೧೫೦೨ ರಲ್ಲಿ ಶೋಧಿಸಲ್ಪಟ್ಟಿತು. ಅಲ್ಲಿ ಮನುಷ್ಯವಸತಿಯಿರಲಿಲ್ಲ. ದಟ್ಟವಾದ ಅಡವಿಗಳಿದ್ದವು. ೧೫೧೩ ರ ಹೊತ್ತಿಗೆ ಪೋರ್ತುಗೀಜರು ಅಲ್ಲಿಗೆ ಆಡುಗಳನ್ನೊಯ್ದರು. ಎರಡು ಶತಮಾನಗಳು ಕಳೆಯುವುದರೊಳಗೆ ಈ ಆಡುಗಳು ಆ ನಡುಗಡ್ಡೆಯ ವನಸ್ಪತಿವಂಶವನ್ನು ಹೆಚ್ಚು ಕಡಿಮೆ ನಿರ್ನಾಮ ಮಾಡಿದ್ದವು. ೧೭೪೫ ರಲ್ಲಿ ಈ ನಿರ್ನಾಮದ ಕಲ್ಪನೆ ಬಂದ ಅಲ್ಲಿಯ ಗವರ್ನರನು ಈ ಬಗ್ಗೆ ಕ್ರಮ ತೆಗೆದುಕೊಳ್ಳಲು ಅಪ್ಪಣೆ ಕೇಳಿದನು. ಆದರೆ ಅವನ ಮಾತನ್ನು ಯಾರೂ ಕಿವಿಯಲ್ಲಿ ಹಾಕಿಕೊಳ್ಳಲಿಲ್ಲ. ೧೮೧೦ ರಲ್ಲಿ ಆಗಿನ ಗವರ್ನರನು ನಡುಗಡ್ಡೆಯಲ್ಲಿದ್ದ ಎಲ್ಲ ಆಡುಗಳನ್ನು

ಕೊಲ್ಲಿಸಬೇಕಾಯಿತು.

ಆದರೆ ಅಷ್ಟು ಹೊತ್ತಿಗೆ ಧ್ವಂಸಕಾರ್ಯ ಸಂಪೂರ್ಣವಾಗಿತ್ತು. ಸಂರಕ್ಷಕ ವನಸ್ಪತಿಯ ಅಭಾವದಿಂದ ಅಲ್ಲಿಯ ಫಲವತ್ತಾದ ಮಣ್ಣು ಗಾಳಿಮಳೆಗಳಿಂದ ಸಮುದ್ರಕ್ಕೆ ಹರಿದುಹೋಗಿ ಇಡೀ ದ್ವೀಪ ನಿಸ್ಸಾರವಾಗಿತ್ತು.

೧೯ ನೆಯ ಶತಮಾನದಲ್ಲಿ ಚಾರ್ಲ್ಸ್ ಡಾರ್ವಿನ್ನನು, ಪ್ಯಾಸಿಫಿಕ್ ಸಾಗರದಲ್ಲಿಯ ಜುವಾನ ಫರ್ನಾಂಡೀಜ ನಡುಗಡ್ಡೆ ಮೊದಲು ಗಂಧದ ಗಿಡಗಳಿಂದ ತುಂಬಿತ್ತೆಂದೂ ಅನಂತರ ಆಡುಗಳ ಹಾವಳಿಯಿಂದ ಬಹುತೇಕವಾಗಿ ಅಲ್ಲಿನ ಗಿಡ-ಮರಗಳೆಲ್ಲ ನಾಶವಾಗಿಹೋದವೆಂದೂ ವರದಿ ಮಾಡಿದ್ದಾನೆ. ಈ ನಡುಗಡ್ಡೆಗೆ ಒದಗಿರುವ ಗಂಡಾಂತರವನ್ನು ಲಕ್ಷಿಸಿ ನಿಸರ್ಗಸಂಪತ್ತಿನ ರಕ್ಷಣೆಯ ಅಂತಾರಾಷ್ಟ್ರೀಯ ಸಂಘವು ೧೯೫೨ ರಲ್ಲಿ ಈ ನಡುಗಡ್ಡೆಯಲ್ಲಿರುವ ಆಡುಗಳನ್ನೆಲ್ಲ ಕೊಲ್ಲಿಸಿ ಉಳಿದಿರುವ ಗಿಡಗಳನ್ನು ರಕ್ಷಿಸಬೇಕು ಎಂದು ಚೈಲ ಸರಕಾರವನ್ನು ಕೇಳಿಕೊಂಡಿತು. (ಈ ನಡುಗಡ್ಡೆ ಚೈಲ ಸರಕಾರದ ವಶದಲ್ಲಿದೆ.)

ಹವಾಯಿ ನಡುಗಡ್ಡೆಯಲ್ಲಿ ಆಡುಗಳು ಒಂದು ಪೀಡೆಯಾಗಿ ಪರಿಣಮಿಸಿವೆ. ಈ ಪೀಡೆಯ ನಿವಾರಣೆಗಾಗಿ ಹುಡುಗರು ಆಡುಗಳನ್ನು ಬೆನ್ನಟ್ಟಿ ಸಮುದ್ರತೀರಕ್ಕೆ ಓಡಿಸುತ್ತಾರೆ. ಅಲ್ಲಿ ಅವುಗಳನ್ನು ಕೊಂದು ಶಾರ್ಕ್ ಮೀನುಗಳಿಗೆ ಆಹಾರವಾಗಿ ಸಮುದ್ರಕ್ಕೆ ಎಸೆಯುತ್ತಾರೆ.

ಕೆಲ ವರ್ಷಗಳ ಹಿಂದೆ ಮದ್ರಾಸಿನ ಹಲ ಪ್ರಮುಖರು ಆಡುಗಳ ವಿರುದ್ಧ ಒಂದು ಹೇಳಿಕೆಯಿತ್ತರು. ವನಮಹೋತ್ಸವದಲ್ಲಿ ನಟ್ಟ ಸಸಿಗಳನ್ನೆಲ್ಲ ಆಡುಗಳು ಸ್ವಾಹಾ ಮಾಡುವುದರಿಂದ ಆಡುಗಳನ್ನು ಇಲ್ಲದಂತೆ ಮಾಡಿದ ಹೊರತು ವನಮಹೋತ್ಸವಗಳು ನಿರರ್ಥಕ ಎಂದು ಅವರು ಸ್ಪಷ್ಟವಾಗಿ ಹೇಳಿದರು.

ಆಡುಗಳ ಈ ವಿನಾಶ ಶಕ್ತಿಯ ಅರಿವು ಬಹಳ ಹಿಂದೆಯೇ ಆಗಿತ್ತು. ೧೬೩೬ ರಲ್ಲಿ ಫ್ರೆಂಚ್ ಪಾರ್ಲಿಮೆಂಟು ಆಡುಗಳಿಗೆ ಅಡವಿಗಳಲ್ಲಿ ಪ್ರವೇಶ ದೊರೆಯಲಾಗದೆಂದು ಒಂದು ಆಜ್ಞೆ ಹೊರಡಿಸಿತು. ಆದರೆ ಜನರ ಪ್ರತಿಭಟನೆ ವಿಶೇಷವಾದ್ದರಿಂದ ೧೭೩೧ ರಲ್ಲಿ ಈ ಆಜ್ಞೆಯನ್ನು ಸರಕಾರ ತಿರುಗಿ ತೆಗೆದುಕೊಂಡು ಇನ್ನೊಂದು ಸೌಮ್ಯ ಕಾಯದೆಯನ್ನು ಮಾಡಬೇಕಾಯಿತು. ಕಾಯದೆ ಸೌಮ್ಯವಾಗಿದ್ದುದರಿಂದ ಅದು ಪರಿಣಾಮಕಾರಿಯಾಗಲೇ ಇಲ್ಲ.

ಆಡುಗಳನ್ನು ಮೃಗಾಲಯದಲ್ಲಿ ಮಾದರಿಗೆ ಮಾತ್ರ ಇಟ್ಟು ಉಳಿದವನ್ನೆಲ್ಲ ನಾಶ ಮಾಡುವುದು ಇದಕ್ಕೆ ಸುಲಭ ಉಪಾಯವೆನ್ನುವುದು ನಿಜ. ಆದರೆ ಇದು ವ್ಯವಹಾರಕ್ಕಿಳಿಯುವ ಮಾತಾಗಿಲ್ಲ.

ಅದು ಬರಿ ಪೀಡಾಪ್ರಾಣಿಯಾಗಿದ್ದರೆ ಅದನ್ನು ನಾಶಗೊಳಿಸುವುದು ಕಷ್ಟವಾಗುತ್ತಿರಲಿಲ್ಲ. ಆದರೆ ಅದು ಮನುಷ್ಯನ ಸಾಕುಪ್ರಾಣಿಯಾಗಿ ಅವನಿದ್ದಲ್ಲೆಲ್ಲ ಪ್ರಸಾರ ಹೊಂದಿ ಹಾವಳಿ ಎಬ್ಬಿಸುತ್ತದೆ. ಗೂಟಕ್ಕೆ ಕಟ್ಟಿದ ಆಡು ಏನೂ ಹಾನಿ ಮಾಡಲಾರದು. ಅಂತೆಯೇ ಬಯಲು ಹುಲ್ಲುಗಾವಲಿನಲ್ಲಿಯೂ ಅದು ಅಷ್ಟು ಅಪಾಯಕರವಾಗಿಲ್ಲ. ಅನಿರ್ಬಂಧವಾಗಿ ಅದನ್ನು ತಿರುಗಾಡಲು ಬಿಟ್ಟರೆ ಮಾತ್ರ ಅದು ಸರ್ವನಾಶವನ್ನುಂಟುಮಾಡುತ್ತದೆ.

ಆದ್ದರಿಂದ ಅದರ ಹಾವಳಿ ತಡೆಯಲು ವ್ಯವಹಾರ ಯೋಗ್ಯ ಉಪಾಯವೆಂದರೆ ಆಡುಗಳನ್ನು ಸಾಕುವವರು ಅವುಗಳಿಂದ ಅನಾಹುತವಾ-ಗದಂತೆ ನೋಡಿಕೊಳ್ಳಬೇಕೆಂದೂ ಅವುಗಳನ್ನು ನಿರ್ದಿಷ್ಟ ಸ್ಥಳಗಳಲ್ಲೇ ಮೇಯಿಸಬೇ-ಕೆಂದೂ ನಿರ್ಬಂಧ ಹಾಕುವುದೇ ಆಗಿದೆ. ಇಂಥ ಒಂದು ಕಾಯದೆಯಿಂದ ಕೆಲಸವಾದೀತು. ಈ ಬಗೆಯ ಕಾಯದೆಗಳು ಕೆಲ ದೇಶಗಳಲ್ಲಿ ಇದ್ದರೂ ಇಲ್ಲದಂತಿವೆ. ಜನ ಅದನ್ನು ಪಾಲಿಸುತ್ತಿಲ್ಲ. ಆಡುಗಳ ವಿಧ್ವಂಸಕ ಕಾರ್ಯ ನಡೆಯುತ್ತಲೇ ಇದೆ. ಆಡುಗಳಿಂದಾಗುವ ಅನಾಹುತವನ್ನು ವಿವರಿಸಿ ಹೇಳಿದರೂ ಜನರ ಮನಸ್ಸಿನ ಮೇಲೆ ಪರಿಣಾಮವಾಗುತ್ತಿಲ್ಲ.

ಆಡುಗಳ ಸಂಖ್ಯೆ ಏರುತ್ತಿರುವುದೆಂದು ದೇಶದೇಶಗಳ ವರದಿ ಹೇಳುತ್ತದೆ. ದಕ್ಷಿಣ ಮಡಗ

ಸ್ಕರದಲ್ಲಿ ಸರಕಾರ ೧೯೩೬ ರಲ್ಲಿ ಹೊಸದಾಗಿ ಆಡುಗಳನ್ನು ತರಿಸಿತು. ೧೯೪೮ ರಲ್ಲಿ ಅವುಗಳ ಸಂಖ್ಯೆ ೧,೦೦೦ ಇತ್ತು; ೧೯೪೯ ರಲ್ಲಿ ಅದು ೨,೦೩,೦೦೦ ವಾಯಿತು, ೧೯೫೦ ರಲ್ಲಿ ಅದು ೨,೭೬,೫೮೫ ಕ್ಕೇರಿತು. ಅವು ಮೇಯ್ದು ಅನೇಕ ಪ್ರದೇಶಗಳು ಆಗಲೇ ಬರಡಾಗಿಬಿಟ್ಟಿವೆ.

ಆಡುಗಳ ನಿರ್ನಾಮದಿಂದ ಪರಿಸ್ಥಿತಿ ಸುಧಾರಿಸುವುದೆಂಬುದಕ್ಕೆ ಆಧಾರವೇನು? ಸೈಪ್ರಸ್, ವೆನೆಝುಲಾ ಮತ್ತು ನ್ಯೂಝಿಲಂಡುಗಳ ಉದಾಹರಣೆಯನ್ನು ಇದಕ್ಕೆ ಕೊಡಬಹುದು.

ಸೈಪ್ರಸಿನಲ್ಲಿ ೧೯೧೮ ರಲ್ಲಿ ಅಡವಿ ಶಾಖೆಯವರ ಬಿನ್ನಹದ ಮೇರೆಗೆ ಅಲ್ಲಿಯ ಸರಕಾರವು ಜನರಿಗೆ ಆಡುಗಳಿಂದಾಗುವ ಅನಾಹುತವನ್ನು ಬಿಂಬಿಸಿಕೊಟ್ಟು ಒಂದು ಕಾಯದೆ ಪಾಸು ಮಾಡಿತು. ಜನರ ಸಮ್ಮತಿಯೊಂದಿಗೆ ಆಡುಗಳ ಸಂಖ್ಯೆಯನ್ನು ಕಡಿಮೆಮಾಡಿ ಅವುಗಳನ್ನು ಕಟ್ಟಿ ಹಾಕಿಡಲಾಯಿತು. ಜನರಿಂದ ಬಂದ ಪ್ರತಿಭಟನೆಯನ್ನು ಲಕ್ಷಿಸದೆ ಈ ಕಾಯದೆಯನ್ನು ಜಾರಿ ಮಾಡಿದ್ದರ ಪ್ರತಿಫಲ ಈಗ ಕಾಣಬರತೊಡಗಿದೆ. ಅಡವಿಗಳು ವೃದ್ಧಿಯಾಗುತ್ತಿದ್ದು ಬಂಜರು ಭೂಮಿಯ ಪ್ರಮಾಣ ತಗ್ಗತೊಡಗಿದೆ.

ವೆನೆಝುಲಾದ ತಕಾಗುನಾ ನದೀತೀರ ಪ್ರದೇಶದಲ್ಲಿ ಆಡುಗಳ ಹಾವಳಿಯಿಂದ ಅಡವಿಗಳು ನಾಮಶೇಷವಾಗಿದ್ದವು. ಜನಸಂಖ್ಯೆ ತೀರ ವಿರಳವಾಗುವ ಪ್ರಸಂಗ ಬಂತು. ಅಲ್ಲಿಯ ಸರಕಾರವು ಆಡುಗಳ ಹಾವಳಿ ನಿಯಂತ್ರಣ ಯೋಜನೆ ಮಾಡಿದ ಬಳಿಕ ಮೂರು ವರ್ಷಗಳಲ್ಲಿ ಅಲ್ಲಿಯ ಭೂಮಿ ಫಲವತ್ತಾಗತೊಡಗಿದ್ದು ಕಂಡು ಬಂದಿದೆ.

ನ್ಯೂಝಿಲಂಡಿನಲ್ಲಿ ೧೯೨೬ ರಿಂದ ೧೯೪೩ ರ ವರೆಗೆ ಆಡುಗಳನ್ನು ನಿರ್ನಾಮ ಮಾಡುವ ಚಳವಳಿ ನಡೆಯಿತು. ೧೫,೦೦೦ ಕ್ಕಿಂತ ಹೆಚ್ಚು ಆಡುಗಳು ನ್ಯಾಶನಲ್ ಪಾರ್ಕಿನಲ್ಲಿ ಕೊಲ್ಲಲ್ಪಟ್ಟವು. ರೈತರು ತಮ್ಮ ಆಡುಗಳನ್ನು ಕೊಂದರು. ಈ ಚಳವಳಿಯಿಂದ ನ್ಯೂಝಿಲಂಡು ಭೂಮಿಯ ಸವಕಳಿಯಿಂದಲೂ ಅಡವಿಗಳ ಕೊರತೆಯಿಂದಲೂ ಬರಲಿದ್ದ ಅನಾಹುತದಿಂದ ಉಳಿದುಕೊಂಡಿತು.

ಆದರೆ ಇಷ್ಟೆಲ್ಲ ಇದ್ದರೂ ಜನರಿಗೆ ಈ ಮಾತನ್ನು ಮನವರಿಕೆ ಮಾಡಿಕೊಡುವುದು ಕಷ್ಟಸಾಧ್ಯ ಎಂದು ಅನುಭವಕ್ಕೆ ಬಂದಿದೆ ಅವರ ಮೇಲೆ ಒತ್ತಾಯ ತಂದಾಗ ಬರುವ ತೀವ್ರ ಪ್ರತಿಭಟನೆಯ ಮೂಲಕ. ಸರಕಾರಗಳು ಕಡ್ಡಾಯದ ಕ್ರಮವನ್ನು ಕೂಡ ತೆಗೆದುಕೊಳ್ಳಲು ಅಸಮರ್ಥವಾಗಿವೆ.

ನಿರುಪದ್ರವಿಯಾಗಿ ಕಾಣುವ ಆಡು ಇಷ್ಟೊಂದು ಗಂಡಾಂತರಕಾರಿಯಾದ ಪ್ರಾಣಿಯಾಗಿರುವುದು ನಿಜಕ್ಕೂ ಆಶ್ಚರ್ಯದ ಮಾತಲ್ಲವೇ?



ಅತ ಅದ್ಭುತ ಯಂತ್ರ
ವೊಂದನ್ನು ಸೃಷ್ಟಿಸಿ ಅದರ
ಗುಟ್ಟನೊಡನೆ ಸತ್ತು ಹೋದ



# ಜಾನ್ ಕೀಲಿಯ ಅದ್ಭುತ ಯಂತ್ರ

ಗೋಪೀನಾಥ

೧೮೭೪ ರಲ್ಲೊಂದು ದಿನ ನ್ಯೂಯಾರ್ಕಿನ ಫಿಫ್ತ್ ಅವೆನ್ಯೂ ಹೋಟೆಲಿನ ಒಂದು ಕೋಣೆಯಲ್ಲಿ ಒಂದು ಅಸಾಧಾರಣ ಸಭೆ ಸೇರಿತ್ತು. ಅದು ಅತ್ಯಂತ ಗೋಪ್ಯ ಸಭೆಯಾಗಿತ್ತು ; ಏಕೆಂದರೆ ಹೊರಗೆ ಸಶಸ್ತ್ರ ಕಾವಲುಗಾರರು ನಿಂತಿದ್ದರು. ಒಳಗೆ ಸೇರಿದ್ದವರು ಪ್ರಮುಖ ಬ್ಯಾಂಕರರಾಗಿದ್ದರು. ಅವರು ನ್ಯೂಯಾರ್ಕ್ ಮತ್ತು ಪೆನ್ಸಿಲ್ವೇನಿಯ ವಿಶ್ವವಿದ್ಯಾಲಯಗಳ ಎಂಜಿನಿಯರರನ್ನೂ ಭೌತವಿಜ್ಞಾನಿಗಳನ್ನೂ ಸಂಗಡ ಕರೆತಂದಿದ್ದರು.

ಈ ಸಭೆಯ ಉದ್ದೇಶ ಜಾನ್ ಕೀಲಿ ಎಂಬ ಆವಿಷ್ಕರ್ತನ ನಂಬಲಸದಳವಾದ ಹೇಳಿಕೆಗಳನ್ನು ಒರೆಗೆ ಹಚ್ಚುವುದಾಗಿತ್ತು. ಅವನು ಕೇವಲ ವಾತಾವರಣದಲ್ಲಿರುವ ಅಣುಗಳನ್ನು ಸ್ಫೋಟಗೊಳಿಸಿ ಪ್ರಚಂಡ ಶಕ್ತಿಯನ್ನು ಉತ್ಪಾದಿಸುವ ಒಂದು ಯಂತ್ರವನ್ನು ಸೃಷ್ಟಿಸಿರುವುದಾಗಿ ಹೇಳಿಕೊಂಡಿದ್ದ. ತನ್ನ ಸಂಶೋಧನೆಗಳನ್ನು ಮುಂದುವರಿಸಲು ಧನಸಹಾಯ ಬೇಕೆಂದು ಆತ ಬ್ಯಾಂಕರರನ್ನು ಕೇಳಿಕೊಂಡದ್ದರಿಂದ ಅವರು ಅವನ ಹೇಳಿಕೆಗಳ ಸತ್ಯಾಸತ್ಯತೆಯನ್ನು ಪರೀಕ್ಷಿಸಲು ವಿಜ್ಞಾನಿಗಳನ್ನು ಕರೆದುಕೊಂಡು ಬಂದಿದ್ದರು. ಆದರೆ ತನ್ನ ಶೋಧದ ಗುಟ್ಟು ಯಾರಿಗೂ ತಿಳಿಯತಕ್ಕದ್ದಲ್ಲ ಮತ್ತು ಈ ಸಭೆಯಲ್ಲಿ ನಡೆದದ್ದರ ವಿಷಯ ಹೊರಗಿನವರಾರಿಗೂ ತಿಳಿಯತಕ್ಕದ್ದಲ್ಲ ಎಂದು ಕರಾರು ಹಾಕಿಯೇ ತನ್ನ ಶೋಧಗಳನ್ನು ಪ್ರದರ್ಶಿಸಿ ತೋರಿಸಲು ಆತ ಒಪ್ಪಿದ್ದ.

ಬ್ಯಾಂಕರರೂ ವಿಜ್ಞಾನಿಗಳೂ ಆತುರದಿಂದ ಎದುರುನೋಡುತ್ತಿದ್ದಂತೆ ಜಾನ್ ಕೀಲಿ ಅವರ ಮುಂದೆ ಪ್ರತ್ಯಕ್ಷನಾದ. ಹುಲುಸು ಮೀಸೆಯ, ಹೊಲಸು ಬಟ್ಟೆಯ ಈ ಮನುಷ್ಯ ಚಲ್ಲಣದ ಕಿಸೆಯೊಳಗೆ ಕೈತುರುಕಿ ನಿಂತಾಗ ಇವನೊಬ್ಬ

ವಿಜ್ಞಾನಿಯೆಂದು ನಂಬುವುದು ದುಷ್ಕರವಾಗಿತ್ತು.

"ಮಹನೀಯರೆ, ನನ್ನ ಎಂಜಿನ್ನಿನ ವಿಚಾರ ತಲೆಯಲ್ಲಿ ಹಾಕಿಕೊಳ್ಳುವ ಮೊದಲು ನೀವು ಉಗಿ ಅಥವಾ ಗ್ಯಾಸಿನ ಉಬ್ಬುವಿಕೆಯಿಂದ ನಡೆಯುವ ಒತ್ತಡದ ತತ್ವವನ್ನಾಧರಿಸಿದ ಯಂತ್ರಗಳ ರಚನೆಯನ್ನು ತಲೆಯಿಂದ ಹೊರತಳ್ಳಬೇಕಾಗುವುದು" ಎಂದು ಜಾನ್ ಕೀಲಿ ಪ್ರಾರಂಭಿಸಿದ.

"ನನ್ನ ಪದ್ಧತಿಗೆ 'ಅನು-ಕಂಪವೇ' ಆಧಾರ" ಎಂದನಾತ. ಅವನು ತನ್ನ ತತ್ವಗಳನ್ನು ವಿವರಿಸಿದ: ಸಂಗೀತ ವಾದ್ಯಗಳನ್ನು ಶ್ರುತಿಗೊಳಿಸಲು ಉಪಯೋಗಿಸುವ ಉಕ್ಕಿನ ಕವೆಯನ್ನು ಬಡಿದರೆ ಅದರಿಂದ ಒಂದು ವಿಶಿಷ್ಟದರದಲ್ಲಿ ಕಂಪನಗಳುಂಟಾಗುತ್ತವೆ. ಈ ಕಂಪನ ದರವು ಒಂದು ಗಾಜಿನ ಸ್ಫಟಿಕದ ಕಂಪನ ದರಕ್ಕಿಂತ ಹೆಚ್ಚಾಗಿದರೆ ಶ್ರುತಿ-ಕವೆಯ ಕಂಪನದ ಧಕ್ಕೆಯಿಂದ ಸ್ಫಟಿಕವು ಒಡೆದುಹೋಗುವುದು. ಇದೇ ತತ್ವವನ್ನನುಸರಿಸಿ ಗಾಳಿಯಲ್ಲಿರುವ ಅಣುಗಳನ್ನು ಸ್ಫೋಟಗೊಳಿಸಲು ಸಾಧ್ಯವಿದೆ, ಎಂದಾತ ಹೇಳಿದ.

"ಹೀಗೆ ಗಾಳಿಯ ಅಣುಗಳು ಸ್ಫೋಟಗೊಂಡರೆ ಪ್ರಚಂಡ ಶಕ್ತಿ ಉತ್ಪಾದನೆಯಾಗುತ್ತದೆ. ಅದರಿಂದ ಚಲಿಸುವ ಎಂಜಿನನ್ನು ನಾನು ತಯಾರಿಸಿದ್ದೇನೆ."

ಕುಳಿತಿದ್ದ ವಿಜ್ಞಾನಿಗಳು ಇದನ್ನು ನಂಬಲು ಸಿದ್ಧರಿರಲಿಲ್ಲ. ಅವರು ಎಂದೂ ಇಂಥ ಹುಚ್ಚಾಟವನ್ನು ಕೇಳಿರಲಿಲ್ಲ. ಆದರೆ ಗುಟ್ಟಾಗಿ ತನ್ನ ಯಂತ್ರವನ್ನು ಆತ ನಡೆಸಿ ತೋರಿಸಿದಾಗ ಅವರು ಇದರಲ್ಲೇನೋ ಇದೆ ಎಂದೊಪ್ಪಬೇಕಾಯಿತು. ಏಕೆಂದರೆ ಇನ್ನೂ ಪ್ರಾಥಮಿಕ ಅವಸ್ಥೆಯಲ್ಲಿದ್ದ ಆ ಎಂಜಿನ್ನು ಒಂದು ಚದರ ಅಂಗುಲಕ್ಕೆ ೩೨,೦೦೦ ಪೌಂಡುಗಳಷ್ಟು ಒತ್ತಡವನ್ನು ಕೊಡಲು ಸಮರ್ಥವಾದುದನ್ನು ಅವರು ಕಣ್ಣಾರೆ ಕಂಡರು.

"ಹೀಗೆ ಉತ್ಪನ್ನವಾದ ಶಕ್ತಿಯನ್ನು ನಿಯಂತ್ರಿಸುವುದು ಹೇಗೆಂಬುದೇ ದೊಡ್ಡ ಸಮಸ್ಯೆಯಾಗಿತ್ತು. ಅದನ್ನು ನಿಯಂತ್ರಿಸಲು ಉಪಯೋಗಿಸಿದ ಉಕ್ಕಿನ ಕೊಳವೆಗಳು ಸ್ಫೋಟವಾಗಿ ನನಗೆ ಗಾಯಗಳೂ ಆಗಿದ್ದುಂಟು. ಆದರೆ ಹಲವು ಪ್ರಯೋಗಗಳ ನಂತರ ಅದನ್ನು ನಿಯಂತ್ರಿಸುವ ಉಪಾಯ ಕಂಡುಹಿಡಿದಿದ್ದೇನೆ. ವಾಯುವಿನ ಅಣುಗಳ ಸ್ಫೋಟದಿಂದ ಉದ್ಭವಿಸುವ ಈ ಶಕ್ತಿಯಿಂದ ಮಾನವ ಕುಲಕ್ಕೆ ಅಪರಿಮಿತವಾದ ಪ್ರಯೋಜನವಿದೆ" ಎಂದು ಜಾನ್ ಕೀಲಿ ಸಮಾಪ್ತಿಗೊಳಿಸಿದ.

ಬ್ಯಾಂಕರರಿಗೆ ಕೀಲಿಯ ಶೋಧದ ಬಗ್ಗೆ ಮನವರಿಕೆಯಾದಂತಾಯಿತು. ಅವರು ಅವನಿಗೆ ೧೦,೦೦೦ ಡಾಲರು ಮುಂಗಡವನ್ನು ಒಡನೆ ಕೊಟ್ಟರು. ಅವನ ಪ್ರಗತಿಯನ್ನು ಪರಿಶೀಲಿಸಲು ಆಗಿಂದಾಗ್ಗೆ ವಿಜ್ಞಾನಿಗಳೂ ಎಂಜನಿಯರರೂ ಬ್ಯಾಂಕರರೂ ಫಿಲಡೆಲ್ಫಿಯಕ್ಕೆ ಯಾತ್ರೆ ಮಾಡುತ್ತಿದ್ದರು. ಅವರಿಗೆ ಕೀಲಿ ತನ್ನ ಎಲ್ಲ ಶೋಧಗಳನ್ನು ತೋರಿಸುತ್ತಿದ್ದ; ಆದರೆ ತನ್ನ ಯಂತ್ರಗಳ ಒಳಗೇನಿದೆಯೆಂಬುದನ್ನು ಮಾತ್ರ ಅವನು ಯಾರಿಗೂ ತೋರಿಸಲು ಸಿದ್ಧನಿರಲಿಲ್ಲ.

ಅವನ ಈ ವಿಚಿತ್ರ ಗೋಪ್ಯ ವರ್ತನೆಯೇ ವಿಜ್ಞಾನದ ಒಂದು ಅಪೂರ್ವ ಶೋಧವು ಕೊನೆಗೂ ಲೋಕಕ್ಕೆ ಅಜ್ಞಾತವಾಗಿ ಉಳಿಯುವಂತೆ ಮಾಡಿತು. ಕೀಲಿಯ ಶೋಧ ಅವನೊಡನೆಯೇ ಅಕಾಲ ಮೃತ್ಯುವನ್ನು ಕಂಡು ಚಿರಂತನ ರಹಸ್ಯವಾಗಿಬಿಟ್ಟಿತು. ಆದರೆ ಆ ಕಥೆ ಹೇಳಲು ಇನ್ನೂ ತಡ ಇದೆ.

ಕೆಲ ಕಾಲದ ನಂತರ ಕೀಲಿ ಇನ್ನೊಂದು ನಂಬಲು ಕಷ್ಟವಾದ ಸಮಾಚಾರವನ್ನು ತನ್ನ ಬೆಂಬಲಿಗರಿಗೆ ತಿಳಿಸಿದ. "ನಾನು ಗುರುತ್ವಾಕರ್ಷಣವನ್ನು ತಡೆಯುವ ಉಪಾಯ ಕಂಡುಹಿಡಿದಿದ್ದೇನೆ!" ಎಂದು ಆತ ಹೇಳಿಕೊಂಡ.

ಬ್ಯಾಂಕರರೂ ವಿಜ್ಞಾನಿಗಳೂ ಮತ್ತೆ ಸೇರಿದರು. ಕೀಲಿ ಎಂಟು ಪೌಂಡು ಭಾರದ ಒಂದು ಆಕಾಶಯಾನವನ್ನು ಅವರಿಗೆ ತೋರಿಸಿದ. ಅದಕ್ಕೆ ಒಂದು ಬೆಳ್ಳಿ-ಪ್ಲಾಟಿನಂ ತಂತಿಯನ್ನು ತಗಲಿಸಿದೊಡನೆ ಆ ಪುಟ್ಟ ಯಾನ ಮೆದುವಾಗಿ ಗಾಳಿಯಲ್ಲಿ ಮೇಲೇರಿ ಹಗುರಾಗಿ ತೇಲತೊಡಗಿತು. ಅದನ್ನು ಬೇಕಾದಂತೆ ಏರಿಸಲು, ಇಳಿ

ಸಲು ಮತ್ತು ಅಂತರಾಳದಲ್ಲಿ ತಟಸ್ಥವಾಗಿ ನಿಲ್ಲಿಸಲು ಕೀಲಿ ಸಮರ್ಥನಾಗಿದ್ದ.

ತಮ್ಮ ಕಣ್ಣುಗಳನ್ನೇ ನಂಬಲಾರದೆ ನೋಡುತ್ತಿದ್ದ ಬ್ಯಾಂಕರರಿಗೆ ಈಗ ಸಂದೇಹವೇ ಉಳಿಯಲಿಲ್ಲ. ಅವರ ಸೂಚನೆಯಂತೆ "ಕೀಲಿ ಮೋಟಾರ್ ಕಂಪನಿ" ಯನ್ನು ಸ್ಥಾಪಿಸಲಾಯಿತು. ಅದರ ೨೦,೦೦೦ ಪಾಲುಗಳಲ್ಲಿ ಏಳರಲ್ಲೊಂದು ಭಾಗವನ್ನು ಕೀಲಿಗೆ ಕೊಡಲಾಯಿತು. ಆದರೆ ಪಾಲುಗಳನ್ನು ಮಾರುವ ಯತ್ನವನ್ನು ಆಗ ಅವರು ಮಾಡಲಿಲ್ಲ.

ಇನ್ನೂ ತನ್ನ ಗೌಪ್ಯವನ್ನು ಬಿಟ್ಟುಕೊಡಲಾರದ ಕೀಲಿ ೧೮೮೮ ರಲ್ಲಿ ಮತ್ತೊಂದು ಅಚ್ಚರಿಯನ್ನು ವಿಜ್ಞಾನಿಗಳಿಗೆ ತೋರಿಸಿದ. ಅದೊಂದು ಪುಟ್ಟ ತೋಫಾಗಿತ್ತು.

"ಅಮೇರಿಕದ ಸೈನ್ಯದ ಅತಿ ಶಕ್ತಿಶಾಲಿಯಾದ ಬಂದೂಕಿನಿಂದ ಹಾರಿಸಿದ ಗುಂಡು ಎಷ್ಟಂಗುಲ ದಪ್ಪದ ಹಲಗೆಯನ್ನು ಹೊಕ್ಕು ಹೊರಗೆ ಬರಬಲ್ಲದು ?" ಎಂದಾತ ನಾಟಕೀಯವಾಗಿ ಕೇಳಿದ. ಆಮೇಲೆ ತಾನೇ ಅದಕ್ಕೆ ಉತ್ತರ ಈಯುತ್ತ, "ಬಹಳವಾದರೆ ಮೂರಿಂಚು, ಹೌದೋ ಅಲ್ಲವೋ ?" ಎಂದ.

ಆಮೇಲೆ ಅವನು ಒಂದು ಕಾಡತೂಸನ್ನು ಎತ್ತಿಕೊಂಡು ಅದರೊಳಗಿನ ಮದ್ದಿನ ಪುಡಿಯನ್ನು ಖಾಲಿಮಾಡಿ ಸೀಸದ ಗುಂಡನ್ನು ಮಾತ್ರ ಇಟ್ಟು ತನ್ನ ತೋಫಿನಲ್ಲಿ ಹಾಕಿದನು.

"ಅಲ್ಲಿ ಎದುರಿಗಿರುವುದು ೧೨ ಅಂಗುಲದ ಹಲಗೆ. ನನ್ನ ಯಂತ್ರದ ಈಥರ್ ಪಾವರಿನ ಶಕ್ತಿಯನ್ನೀಗ ತೋರಿಸುತ್ತೇನೆ" ಎಂದು ಸಾರಿ ಕೀಲಿ ತನ್ನ ತುಪಾಕಿಯನ್ನು ಹಲಗೆಯ ಕಡೆ ಗುರಿ ಮಾಡಿ ಮೋಟಾರನ್ನು ಚಲಾಯಿಸಿದ

ಮಂದ್ರ ಧ್ವನಿಯೊಂದು ಪ್ರಾರಂಭವಾಗಿ ಏರುತ್ತ ಹೋಯಿತು. ''ಇಕೋ'' ಎಂದು ಕೀಲಿ ಹೇಳಿದ ತತ್‌ಕ್ಷಣ ತೀಕ್ಷ್ಣ ಸ್ವರವೊಂದು ಕೇಳಿಸಿ ಹಲಗೆಗೆ ರಪ್ಪೆಂದು ಅಪ್ಪಳಿಸಿದ ಸದ್ದಾಯಿತು.

ಗೋಲಿ ಹನ್ನೆರಡಂಗುಲ ದಪ್ಪದ ಹಲಗೆಗಳನ್ನು ಕೊರೆದು ಅದರಾಚೆಗಿದ್ದ ಕಲ್ಲಿಗೆ ಬಡಿದಿತ್ತು. ಅದನ್ನು ತೆಗೆದು ನೋಡಿದಾಗ ಗೋಲಿ ಕಲ್ಲಿಗೆ ತಗಲಿದ ಹೊಡೆತಕ್ಕೆ ಚಪ್ಪಡಾಗಿ ಹೋಗಿತ್ತು. ಕೀಲಿಯ 'ಈಥರ್' ಮೋಟಾರಿನ ಶಕ್ತಿ ಅಷ್ಟು ಅದ್ಭುತವಾಗಿತ್ತು.

ಇಂಥ ಅಘಟಿತಘಟನೆ ಎಷ್ಟು ದಿನ ಗುಪ್ತವಾಗಿ ಉಳಿದೀತು ? ಘಟನೆಗಳು ವಾಯುವೇಗದಿಂದ ಸಾಗತೊಡಗಿದವು. ಅಮೇರಿಕದ ಮಿಲಿಟರಿ, ಔದ್ಯೋಗಿಕ ಮತ್ತು ಆರ್ಥಿಕ ವರ್ಗಗಳಲ್ಲಿ ಉತ್ಪಾತವೇ ಎದ್ದಂತೆ ಅನಿಸಿತು. ಕೀಲಿಯ ಶೋಧಗಳಿಂದ ಯಾಂತ್ರಿಕ ಜಗತ್ತಿನಲ್ಲಿ ಕ್ರಾಂತಿಯೇ ಆಗುವುದೆಂದು ಸುದ್ದಿ ಹಬ್ಬಿತು. ಉದ್ದಿಮೆಗಾರರು ತೀರ ಗಾಬರಿಯಾದರು. ಈ ಹೊಸ ಯಂತ್ರವು ಪ್ರಚಾರಕ್ಕೆ ಬಂದರೆ ಈಗಿದ್ದ ಯಂತ್ರಗಳೆಲ್ಲ ಕಾಸಿನ ಬೆಲೆಯಿಲ್ಲದಾಗುವವೆಂದೂ ತಮ್ಮ ಬಂಡವಳವೆಲ್ಲ ಮಣ್ಣುಪಾಲಾಗುವುದೆಂದೂ ಅವರು ಕೈಕಾಲು ಕಳೆದುಕೊಂಡರು. ಅತ್ತ ಇಂಥ ಅದ್ಭುತ ಶಕ್ತಿಯ ತೋಫಿನ ಸುದ್ದಿ ಕೇಳಿ ಮಿಲಿಟರಿ ವರ್ಗಗಳ ಕಿವಿ ನೆಟ್ಟಗಾಯಿತು.

ಈ ಉದ್ವೇಗದ ವಾತಾವರಣದಲ್ಲಿ ಕೀಲಿ ಮೋಟಾರ್ ಕಂಪನಿಯ ಪಾಲುಗಳು ಪೇಟೆಗೆ ಬಂದವು. ಕೆಲವೇ ದಿನಗಳಲ್ಲಿ ಅವಕ್ಕಾಗಿ ಪೇಟೆಯಲ್ಲಿ ಬಡಿದಾಟವೇ ಪ್ರಾರಂಭವಾಯಿತು. ಪಾಲುಗಳ ಬೆಲೆ ಒಂದಕ್ಕೆ ಆರು ಪಟ್ಟು ಏರಿತು. ಕೆಲವರು ತಮ್ಮ ಸರ್ವಸ್ವವನ್ನೂ ಮಾರಿ ಈ ಪಾಲುಗಳನ್ನು ಕೊಂಡುಕೊಂಡು ಕೆಲ ದಿನಗಳಲ್ಲೇ ಲಕ್ಷಾಧೀಶರಾಗುವ ಕನಸು ಕಂಡರು. ಲಾಭಬಡಕರು ಪಾಲುಗಳನ್ನು 'ಕಾರ್ನರ್' ಮಾಡತೊಡಗಿದರು. ಬೆಲೆಗಳು ಇನ್ನಷ್ಟು ಗಗನಕ್ಕೇರಿದವು.

ಈ ನಡುವೆ ಒಂದು ದಿನ ಜಾನ್ ಕೀಲಿ ತನ್ನ ಕಾರಖಾನೆಯಲ್ಲಿ ಸತ್ತುಬಿದ್ದದ್ದು ಕಂಡುಬಂತು.

ಕೀಲಿ ಹೇಗೆ ಸತ್ತ ? ಇದು ಅನಂತಕಾಲದವರೆಗೆ ರಹಸ್ಯವಾಗಿಯೇ ಉಳಿಯಬೇಕಾಗಿದೆ. ಅವನು ನೈಸರ್ಗಿಕ ಕಾರಣಗಳಿಂದಲೇ ಸತ್ತನೆಂದು ಹೇಳಲಾಯಿತು. ಆದರೆ ಅವನ ಮರಣೋತ್ತರ ಪರೀಕ್ಷೆ ಆಗಲೇ ಇಲ್ಲ. ಅವನ ಅನಿ

ರೀಕ್ಷಿತ ಮರಣವನ್ನು ಕುರಿತು ನಾನಾ ಪ್ರಕಾರದ ಸುದ್ದಿಗಳು ಹಬ್ಬಿದವು. ಅವನ ಅದ್ಭುತ ಯಂತ್ರ ಪ್ರಚಾರಕ್ಕೆ ಬಂದರೆ ತನಗೆ ನೆಟ್ಟಗಾಗದೆಂದು ಅಂಜಿದ ಯಾವುದೋ ಒಂದು ವಿದೇಶಿ ಸರಕಾರವು ಅವನನ್ನು ಕೊಲೆ ಮಾಡಿಸಿತೆಂದು ಕೆಲವರು ಹೇಳಿದರು. ಬೇರೆ ಕೆಲವರು, ತಮ್ಮ ಬಂಡವಳವೆಲ್ಲ ಮುಳುಗಿ ಹೋದೀತೆಂಬ ಭಯದಿಂದ ಉದ್ಯೋಗಪತಿಗಳು ಒಳಸಂಚು ಹೂಡಿ ಕೀಲಿಯನ್ನು ತೀರಿಸಿಬಿಟ್ಟರು ಎಂದರು.

ದೇಶದಲ್ಲಿ ಹಾಹಾಕಾರ ಮಸಗಿತು. ತಮ್ಮ ಸರ್ವಸ್ವವನ್ನು ಕೀಲಿ ಕಂಪನಿಯ ಶೇರುಗಳಲ್ಲಿ ತೊಡಗಿಸಿದ್ದವರು ರಾತ್ರಿ ಬೆಳಗಾಗುವುದರೊಳಗಾಗಿ ಪಾಪರಾದರು. ಪಾಲುಗಳಿಗೆ ಈಗ ದುಗ್ಗಾಣಿ ಬೆಲೆ ಇಲ್ಲದಂತಾಗಿತ್ತು. ಕೋಟ್ಯಧೀಶರಾಗುವ ಕನಸು ಕಟ್ಟಿದ್ದ ಸಾವಿರಾರು ಜನರು ಭಿಕಾರಿಗಳಾಗಿದ್ದರು.

ಆದರೆ ಇದೆಲ್ಲ ನಷ್ಟಕ್ಕಿಂತ ಹಿರಿದಾದ ನಷ್ಟ ಮಾನವಕುಲಕ್ಕೆ ಆಗಿತ್ತು. ಕೀಲಿಗೆ ಹೊರತು ಮತ್ತಾರಿಗೂ ಈ ಯಂತ್ರದ ಗುಟ್ಟು ಗೊತ್ತಿರಲಿಲ್ಲ. ಅವನಾದರೋ ಎಲ್ಲವನ್ನೂ ತನ್ನ ತಲೆಯೊಳಗೇ ಇಟ್ಟುಕೊಂಡು ಸತ್ತಂತಿತ್ತು. ಯಂತ್ರದ ರಹಸ್ಯವನ್ನು ಕುರಿತು ಅವನು ಎಲ್ಲಿಯೂ ಏನನ್ನೂ ಬರೆದಿಟ್ಟಿರಲಿಲ್ಲ. ಅನೇಕರು ಪ್ರಾರಂಭದಿಂದಲೇ ಈ ರಹಸ್ಯವನ್ನು ಇತರರಿಗೂ ತಿಳಿಸಿಟ್ಟಿರಬೇಕೆಂದು ಅವನೊಡನೆ ಅಂಗಲಾಚಿದ್ದರು. ಪ್ರಸಿದ್ಧ ಆವಿಷ್ಕರ್ತನಾದ ಥಾಮಸ್ ಎಡಿಸನ್ನನೂ ಇಂಥವರಲ್ಲೊಬ್ಬನಾಗಿದ್ದನು. ಆದರೆ ವಿಕ್ಷಿಪ್ತ ವ್ಯಕ್ತಿಯಾದ ಕೀಲಿ ಇದಕ್ಕೆಲ್ಲ ಕಿವುಡನಾಗಿದ್ದನು.

ಅವನು ಸತ್ತ ಮೇಲೆ ಏನಾದರೂ ತಿಳಿದೀತೇ ಎಂದು ವಿಜ್ಞಾನಿಗಳು ಅವನ ಎಂಜಿನನ್ನು ಬಿಚ್ಚಿ ನೋಡಿದರು. ಅದರಲ್ಲಿ ನೂರಾರು ಅಡಿ ಉದ್ದದ ಯದ್ವಾತದ್ವಾ ಸುತ್ತು ಹಾಕಿದ ಕೊಳವೆಗಳ ಹೊರತು ಮತ್ತೇನೂ ಇರಲಿಲ್ಲ. ಅವುಗಳಿಂದ ಅಗಾಧ ಶಕ್ತಿ ಹೇಗೆ ಹುಟ್ಟಿತೆಂದು ಅವರಿಗೆ ಅರ್ಥವಾಗಲಿಲ್ಲ.

ಆದರೆ ಆ ಶಕ್ತಿ ಅದರಿಂದ ಉದ್ಭವಿಸಿತ್ತೆಂಬಲ್ಲಿ ಏನೇನೂ ಸಂಶಯವಿದ್ದಿಲ್ಲ. ಅತ್ಯಂತ ಪ್ರಾಮಾಣಿಕರಾದ ವಿಜ್ಞಾನಿಗಳು ಅದನ್ನು ಕಣ್ಣಾರೆ ಕಂಡಿದ್ದರು. ಗಡಿಯಾರದ ಅಳತೆಯ ಒಂದು ಯಂತ್ರದಿಂದ ೧೨ ಅಂಗುಲ ದಪ್ಪದ ಹಲಗೆಯನ್ನು ಕೊರೆದು ಆಚೆ ಹೋದ ಗುಂಡನ್ನು ಹಾರಿಸುವಷ್ಟು ಶಕ್ತಿಯನ್ನಾತ ಉಂಟುಮಾಡಿದ್ದು ನಿಜವಾಗಿತ್ತು.

ಅದು ಹೇಗಾಯಿತು ? ಅದು ಯಾವುದಾದರೊಂದು ಬಗೆಯ ಪರಮಾಣು ಶಕ್ತಿಯಾಗಿದ್ದಿರಬಹುದೇ ? ಗಾಳಿಯ ಅಣುಗಳ ಸ್ಫೋಟದಿಂದಲೇ ಆತ ಇಷ್ಟು ಶಕ್ತಿಯನ್ನು ನಿಜವಾಗಿ ಉಂಟುಮಾಡಿದ್ದನೆ ? ಇಂದಿಗೂ ವಿಜ್ಞಾನಿಗಳಿಗೆ ಕೀಲಿಯ ವಿಚಿತ್ರ ಯಂತ್ರದ ನಡವಳಿಯನ್ನು ವಿವರಿಸಲು ಶಕ್ಯವಾಗಿಲ್ಲ.

———

ಕಲ್ಲಿನಿಂದ ನಾರು ತೆಗೆಯಲು ಸಾಧ್ಯವೇ ?
ಎಂದರೆ ಹೌದು ಅನ್ನುತ್ತದೆ—



# ಆಸ್‌ಬೆಸ್ಟೋಸ್ : ನಾರಯುಕದ ಖನಿಜ

ಜಿ. ಜಿ. ಹೆಗಡೆ

ನಮ್ಮ ಕೂದಲಿನ ಎಳೆಗಳು ಒಂದಿಂಚಿನಲ್ಲಿ ೬೩೦ ಕೂಡುತ್ತವೆ; ಉಣ್ಣೆಯ ಎಳೆಗಳು ಇಂಚಿಗೆ ೧,೨೫೦; ಹತ್ತಿಯ ಎಳೆಗಳು ೨,೫೦೦, ನೈಲನ್ ಎಳೆಗಳು ೩,೩೦೦——ಆದರೆ ಎಳೆಗಳ ಸೂಕ್ಷ್ಮತೆಯಲ್ಲಿ ಇವೆಲ್ಲವುಗಳನ್ನು ಮೀರಿಸಬಲ್ಲ ಪದಾರ್ಥವೊಂದಿದೆ. ಅದೆಂದರೆ "ಆಸ್‌ಬೆಸ್ಟೋಸ್". ಆಸ್‌ಬೆಸ್ಟೋಸಿನಿಂದ ನೀವು ಬಯಸಿದರೆ ಎಷ್ಟು ಸೂಕ್ಷ್ಮವಾದ ಎಳೆಗಳನ್ನು ತೆಗೆಯಬಹುದೆಂದರೆ ಒಂದಿಂಚು ಅಗಲದಲ್ಲಿ ಅಂಥ ೧೪,೦೦,೦೦೦ ಎಳೆಗಳನ್ನು ಕೂಡಿಸಬಹುದು.

ವಿಚಿತ್ರವೆಂದರೆ ಆಸ್‌ಬೆಸ್ಟೋಸ್ ಎಂಬುದೊಂದು ಸಾವಯವ ಪದಾರ್ಥವಲ್ಲ, ಅದೊಂದು ಖನಿಜ. ಅದು ನಿಜವಾಗಿ ಒಂದು ಜಾತಿಯ ಬಂಡೆಗಲ್ಲು. ಕೂದಲಿನಂತೆ ಎಳೆಎಳೆಯಾಗಿ ಬಿಡಿಸಬಹುದಾದ ಬಂಡೆಗಲ್ಲು ಅದೊಂದೇ.

ಆಸ್‌ಬೆಸ್ಟೋಸ್ ಆಧುನಿಕ ಜೀವನದಲ್ಲಿ ಅಸಂಖ್ಯ ಪಾತ್ರಗಳನ್ನು ವಹಿಸುತ್ತದೆ. ಗೃಹಿಣಿಯರು ಸ್ಟೋವನ್ನೋ ಒಲೆಯನ್ನೋ ಹೊತ್ತಿಸಲು ಉಪಯೋಗಿಸುವ ಕಕ್ಕಡದ ತುದಿಯಲ್ಲಿರುವ ಒರಟು ಕಂಬಳಿ ಚೂರಿನಂಥ ಪದಾರ್ಥ ಆಸ್‌ಬೆಸ್ಟೋಸೇ. ನೀವು ತೆಗೆದುಕೊಳ್ಳುವ ಔಷಧದಲ್ಲಿ ಅದು ಇರಬಹುದು. ವಾಹನಗಳ ಬ್ರೇಕುಗಳಲ್ಲಿ, ಕ್ಲಚ್ಚುಗಳಲ್ಲಿ, ಹಡಗಗಳ ಹಾಯಿಗಳಲ್ಲಿ, ವಿದ್ಯುತ್ ಮತ್ತು ಉಷ್ಣತೆಯ ಪ್ರವಾಹವನ್ನು ತಡೆಯುವ ಇನ್ಸುಲೇಟಿಂಗಿನಲ್ಲಿ, ಮನೆಯ ಛತ್ತುಗಳಲ್ಲಿ, ನೆಲಗಳಲ್ಲಿ, ಸ್ಟೌಗಳಲ್ಲಿ, ರೇಲ್ ರಸ್ತೆಗಳಲ್ಲಿ, ಟೆಲಿಫೋನು, ರೇಡಿಯೋ, ಟೆಲಿವಿಜನ್‌ಗಳಲ್ಲಿ, ಬಟ್ಟೆಗಳಲ್ಲಿ, ಪ್ಲಾಸ್ಟಿಕ್‌ಗಳಲ್ಲಿ, ಗೋಡೆಗೆ ಹಚ್ಚುವ ಬಣ್ಣಗಳಲ್ಲಿ, ಅಷ್ಟೇಕೆ ನೀವು ಸೇದುವ ಸಿಗರೇಟುಗಳಲ್ಲಿ ಕೂಡ ಆಸ್‌ಬೆಸ್ಟೋಸಿನ ಪಾತ್ರ ಇರಬಹುದು.

"ಆಸ್‌ಬೆಸ್ಟೋಸ್" ಎಂಬುದು ಗ್ರೀಕ್ ಜನ್ಯ ಶಬ್ದ. ಅದರ ಮೂಲ ಅರ್ಥ "ಶಾಶ್ವತ" ಎಂದು. ಅದು ಅನ್ವರ್ಥನಾಮವೂ ಹೌದು. ಏಕೆಂದರೆ

ಅಸ್‌ಬೆಸ್ಟೋಸ್ ಬೆಂಕಿಯಲ್ಲಿ ಸುಡುವುದಿಲ್ಲ, ನೀರಲ್ಲಿ ಕೊಳೆಯುವುದಿಲ್ಲ, ಗಾಳಿಯಲ್ಲಿ ತುಕ್ಕು ಹಿಡಿಯುವುದಿಲ್ಲ, ಆಮ್ಲ ಅಥವಾ ಆಲ್ಕಲಿಗಳಿಂದ ಕೊರೆದುಹೋಗುವುದಿಲ್ಲ.

ಅತಿ ಪುರಾತನದಲ್ಲಿ ಚೀನೀಯರೂ ಗ್ರೀಕರೂ ಅದರಿಂದ ಬಟ್ಟೆಗಳನ್ನೂ ಚಾಪೆಗಳನ್ನೂ ಮಾಡುತ್ತಿದ್ದರು. ಗ್ರೀಕರೂ ರೋಮನ್ನರೂ ತಮ್ಮ ದೇವತೆಗಳ ಮುಂದೆ ಅಸ್‌ಬೆಸ್ಟೋಸ್ ಬತ್ತಿಗಳಿಂದ ದೀಪ ಉರಿಸುತ್ತಿದ್ದರು. (ಈ ಬತ್ತಿಗಳು ಎಂದೂ ಸುಡದೆ ಉಳಿಯುತ್ತಿದ್ದುದರಿಂದಲೇ ಗ್ರೀಕರು ಅದಕ್ಕೆ 'ಶಾಶ್ವತ' ಎಂದು ಹೆಸರಿಟ್ಟಿದ್ದರು). ರೋಮನ್ನರು ಅದರ ವಸ್ತ್ರಗಳಿಂದ ಶವಗಳನ್ನು ಮುಚ್ಚಿ ಹುಗಿಯುತ್ತಿದ್ದರು. ಇಂಗ್ಲಂಡಿನ ಐದನೇ ಚಾರ್ಲ್ಸ್ ಅರಸನು ಅದರಿಂದ ತಯಾರಿಸಿದ ಬಟ್ಟೆಯೊಂದನ್ನು ಉರಿಯುವ ಬೆಂಕಿಯಲ್ಲಿ ಹಾಕಿ ಅದನ್ನು ಹೊರತೆಗೆದು ತೋರಿಸಿ ಅತಿಥಿಗಳನ್ನು ಅಚ್ಚರಿಗೊಳಿಸಿದ್ದನಂತೆ.

ಒಂದು ಕಾಲದಲ್ಲಿ ಶಾಶ್ವತವಾಗಿ ಕಾದಿಡಬೇಕಾದ ದಾಖಲೆಗಳನ್ನು ಅಸ್‌ಬೆಸ್ಟೋಸ್ ಹಾಳೆಗಳ ಮೇಲೆ ಮುದ್ರಿಸಿ ಇಡುವ ಪ್ರಯತ್ನಗಳಾದವು. ಅವು ಫಲಕಾರಿಗಳಾಗಲಿಲ್ಲ. ತಪ್ಪು ಅಸ್‌ಬೆಸ್ಟೋಸ್ ಕಾಗದದ್ದಾಗಿರಲಿಲ್ಲ; ಅಸ್‌ಬೆಸ್ಟೋಸ್ ಕಾಗದವೇನೂ ಬೆಂಕಿಯಲ್ಲಿ ಸುಡಲಿಲ್ಲ— ಮುದ್ರಿಸಿದ ಮಸಿಯೇ ಸುಟ್ಟುಹೋಯಿತು.

ಇಂದು ಅಸ್‌ಬೆಸ್ಟೋಸ್ ಜನರನ್ನು ಅಚ್ಚರಿಗೊಳಿಸುವ ಜಾದೂ ಪದಾರ್ಥವಾಗಿ ಮಾತ್ರ ಉಳಿಯದೆ ಜೀವನದ ಸಕಲ ರಂಗಗಳಲ್ಲಿ ಪ್ರವೇಶಿಸಿದೆ ಕೋಟ್ಯಂತರ ರೂಪಾಯಿಗಳು ಜಗತ್ತಿನಲ್ಲೆಲ್ಲ ಅಸ್‌ಬೆಸ್ಟೋಸ್ ಉದ್ದಿಮೆಯಲ್ಲಿ ವಿನಿಯೋಗವಾಗಿವೆ.

ಭೂಗರ್ಭದಲ್ಲಿ ಅಸ್‌ಬೆಸ್ಟೋಸ್‌ನಂಥ ರೋಮಶ ಪದಾರ್ಥ ಹೇಗೆ ಉತ್ಪನ್ನವಾಯಿತೆಂದು ವಿಜ್ಞಾನಿಗಳಿಗೆ ಇನ್ನೂ ಅರ್ಥವಾಗಿಲ್ಲ. ಜ್ವಾಲಾಮುಖಿ ಕ್ರಿಯೆಯಿಂದ ಉಂಟಾಗುವ ಸರ್ಪೆಂಟೈನ್ ಅಥವಾ ಆಂಫಿಬೋಲ್ ವರ್ಗದ ಬಂಡೆಗಲ್ಲುಗಳ ಒಂದು ರೂಪ ಅಸ್‌ಬೆಸ್ಟೋಸ್ ಎಂದಷ್ಟೇ ಅವರು ಬಲ್ಲರು.



ಅಗ್ನಿಶಾಮಕರು ಅಸ್‌ಬೆಸ್ಟೋಸ್ ಅಂಗಿ ತೊಡುತ್ತಾರೆ

ಅಸ್‌ಬೆಸ್ಟೋಸಿನಲ್ಲಿ ಮೂರು ವಿಧ. (೧) ಅದಿರಿನಲ್ಲಿ ಅಡ್ಡವಾಗಿ ಹಬ್ಬಿರುವ "ಕ್ರಾಸ್ ಫೈಬರ್" ಅಥವಾ ಅಡ್ಡ ಎಳೆಯ ಅಸ್‌ಬೆಸ್ಟೋಸ್; (೨) ಅದಿರಿನಲ್ಲಿ ಉದ್ದಕ್ಕೆ ನೀಡಿರುವ "ಸ್ಲಿಪ್‌ಫೈಬರ್" ಅಥವಾ ನೇರ ಎಳೆಯ ಅಸ್‌ಬೆಸ್ಟೋಸ್; ಮತ್ತು (೩) ಮುದ್ದೆ ಎಳೆಯ "ಮಾಸ್ ಫೈಬರ್" ಅಸ್‌ಬೆಸ್ಟೋಸ್. ಇವುಗಳಲ್ಲಿ ಮೊದಲನೇ ವಿಧದ್ದೇ ಅತ್ಯುತ್ಕೃಷ್ಟವಾದುದು.

ಶುದ್ಧ ಬಿಳಿ, ಕಂದು, ಹಸಿರು, ಹಳದಿ, ಕೆಂಪು ಇವೆಲ್ಲ ಬಣ್ಣಗಳಲ್ಲಿಯೂ ಅಸ್‌ಬೆಸ್ಟೋಸ್ ಸಿಗುತ್ತದೆ. ಶುದ್ಧ, ಅಶುದ್ಧ ರೂಪಗಳಲ್ಲಿ, ಸಬಲ ದುರ್ಬಲ ಎಳೆಗಳುಳ್ಳ, ನಾನಾ ವಿಧದ ಅಸ್‌ಬೆಸ್ಟೋಸನ್ನು ಸಂಗ್ರಹಿಸಲಾಗುತ್ತದೆ. ಅವುಗಳ ಬೆಲೆಗಳಲ್ಲಿಯೂ ಟನ್ನಿಗೆ ರೂ. ೨೦೦ ರಿಂದ

ರೂ. ೭,೫೦೦ ವರೆಗೆ ಅಂತರವಿರಬಹುದು. ಆದರೆ ಪ್ರತಿಯೊಂದು ವರ್ಗದ, ಪ್ರತಿಯೊಂದು ತರದ ಅಸ್‌ಬೆಸ್ಟೋಸಿಗೂ ಅದರದೇ ಉಪ-ಯೋಗಗಳಿವೆ.

ಯಾವುದೇ ತರದ ಅಸ್‌ಬೆಸ್ಟೋಸನ್ನು ನೀವು ಹಿಡಿದು ಕಿತ್ತಾಡಿದರೆ ಅರಳೆಯನ್ನು ಕಿತ್ತಾಗ ಏಳುವಂಥ, ಸೂಕ್ಷ್ಮವಾದ ಎಳೆಗಳ 'ಮೀಸೆ'ಗಳನ್ನು ಕಾಣುತ್ತೀರಿ. ಇದಕ್ಕಾಗಿ ಕಲ್ಲರಳೆ ಎಂದೇ ಅದಕ್ಕೆ ಹೆಸರಿದೆ. ಬೇರೆ ಬೇರೆ ಜಾತಿಯ ಹತ್ತಿಯ ಎಳೆಗಳು ಭಿನ್ನ ಭಿನ್ನ ಉದ್ದಳತೆಯವಾಗಿರುವಂತೆ ಭಿನ್ನ ಭಿನ್ನ ಅಸ್‌ಬೆಸ್ಟೋಸ್ ಜಾತಿಗಳ ಎಳೆಗಳಲ್ಲಿಯೂ ಅಂತರವಿರುತ್ತದೆ.



ಉದ್ದೆಳೆಯ ಕ್ರಿಸೊಟೈಲ್

೩/೮ ದಿಂದ ೩/೪ ಇಂಚಿನ ವರೆಗಿನ ಎಳೆಗಳುಳ್ಳ ಅಸ್‌ಬೆಸ್ಟೋಸನ್ನು ಉಷ್ಣತಾ ನಿರೋಧಕ (ಬೆಂಕಿ ಹೊತ್ತದ) ಜವಳಿಯ ತಯಾರಿಯಲ್ಲಿ ಉಪಯೋಗಿಸಬಹುದು ಅದಕ್ಕಿಂತಲೂ ಗಿಡ್ಡೆಳೆಯವನ್ನು ಸಿಮೆಂಟ್ ಇನ್‌ಸುಲೇಶನ್ ಮೊದಲಾದ ಅನೇಕ ಕಾರ್ಯಗಳಲ್ಲಿ ವಿನಿಯೋಗಿಸುತ್ತಾರೆ.

ಇಕ್ಕಟ್ಟಾದ ಶಿರೆಗಳಲ್ಲಿ ಹಬ್ಬಿರುವ ಅಸ್‌ಬೆಸ್ಟೋಸನ್ನು ಅಗೆದು ತೆಗೆಯುವುದು ತುಂಬ ಕಷ್ಟಸಾಧ್ಯವಾದ ಕೆಲಸ. ಆ ಮೇಲೆ ಬಂಡೆಯಿಂದ ಇದರ ಅದಿರನ್ನು ವಿಂಗಡಿಸುವುದೂ ಸುಲಭವಲ್ಲ. ಆದರೆ ಆಧುನಿಕ ಜೀವನದಲ್ಲಿ— ಶಾಂತಿ ಯುದ್ಧಗಳೆರಡರಲ್ಲೂ— ಅಸ್‌ಬೆಸ್ಟೋಸ್ ಎಷ್ಟು ಮಹತ್ವದ್ದಾಗಿದೆಯೆಂದರೆ ಉದ್ಯೋಗಪತಿಗಳು ಅದಕ್ಕಾಗಿ ಎಷ್ಟು ಕಷ್ಟ ವಹಿಸಲೂ ಸಿದ್ಧರಾಗುತ್ತಾರೆ.

ಅಸ್‌ಬೆಸ್ಟೋಸಿನ ಕೆಲವೇ ಉಪಯೋಗಗಳನ್ನು ನೋಡೋಣ. ಪ್ರಾಚೀನರು ಕೂಡ ಗುರುತಿಸಿದ್ದ ಅದರ ಒಂದು ಗುಣವೆಂದರೆ ಉಷ್ಣತೆಯನ್ನು ತಡೆದುಕೊಳ್ಳುವ ಶಕ್ತಿ. ಅದು ೫೭೨° F. ವರೆಗಿನ ಉಷ್ಣತೆಯನ್ನು ತಾಳಿಕೊಳ್ಳಬಲ್ಲದು. ಅದಕ್ಕಿಂತ ಹೆಚ್ಚಿನ ಉಷ್ಣತೆಗೆ ಗುರಿಯಾದರೆ ಮಾತ್ರ ಅದರೊಳಗಿನ ನೀರಿನ ಅಂಶ ಆರಿ ಹೋಗುತ್ತದೆ. (೧೧೦೦° ಉಷ್ಣತೆಯ ಮೇಲೆ ಮಾತ್ರ ಅದು 'ನಾಶ'ವಾಗುತ್ತದೆ.)

ಈ ಗುಣವು ಅದನ್ನು ಮಾನವ ಪ್ರಗತಿಗೆ ಅಮೂಲ್ಯವಾಗಿ ಮಾಡಿದೆ. ಅಸ್‌ಬೆಸ್ಟೋಸಿನಿಂದ ನೇಯ್ದು ತಯಾರಿಸಿದ ಬಟ್ಟೆಯನ್ನು ಧರಿಸಿದವನು ದಳ್ಳುರಿಯಲ್ಲಿ ಹೊಕ್ಕು ನಿರ್ಭಯವಾಗಿ ಆರ್ತರನ್ನು ರಕ್ಷಿಸಬಹುದು. ಪ್ರದರ್ಶನಗಳಲ್ಲಿ "ಮೃತ್ಯುಮುಖದಲ್ಲಿ ಜಿಗಿಯುವ" ಸಾಹಸಗಳನ್ನು ನಟರು ಮಾಡಿ ತೋರಿಸುವಾಗ ಅಸ್‌ಬೆಸ್ಟೋಸ್ ಬಟ್ಟೆಗಳನ್ನೇ ಹಾಕಿಕೊಂಡಿರುತ್ತಾರೆ. ಅಸ್‌ಬೆಸ್ಟೋಸ್ ಕವರುಗಳಲ್ಲಿ ಹಾಕಿಟ್ಟ ಗೋಪ್ಯ ಕಾಗದ ಪತ್ರಗಳು ಶತಮಾನಗಳ ಕಾಲ ಉಳಿಯಬಲ್ಲವು. ಅಸ್-ಬೆಸ್ಟೋಸ್ ಸಿಮೆಂಟಿನ ತಯಾರಿಕೆಯ ವಿಚಾರ ಸರ್ವವಿದಿತವಾಗಿದೆ. ಟೇಪುಗಳು, ಪ್ಲಾಸ್ಟರುಗಳು, ಬಣ್ಣಗಳು (ಪೆಯಿಂಟ್), ಪ್ಲಾಸ್ಟಿಕ್ಕುಗಳು, ಅಗ್ನಿಶಾಮಕ ಮಿಶ್ರಣಗಳು, ಚಾಪೆ—ಗಾದಿಗಳು ಮೊದಲಾದ ಅನೇಕ ದೈನಂದಿನ ಉಪಯೋಗದ ಸಾಮಗ್ರಿಗಳಲ್ಲಿ ಅಸ್‌ಬೆಸ್ಟೋಸ್ ಅಂಶವಿದೆ. ಟಿಶ್ಯೂ ಪೇಪರಿನಷ್ಟೇ ತೆಳ್ಳಗಾದ ಕಾಗದಗಳನ್ನು ಅಸ್‌ಬೆಸ್ಟೋಸಿನಿಂದ ತಯಾರಿಸಲಾಗಿದೆ.

ಮನೆ ಕಟ್ಟುವಿಕೆಯಲ್ಲಿ ಅಸ್‌ಬೆಸ್ಟೋಸಿನ ಉಪಯೋಗ ಅನೇಕ ವಿಧವಾಗಿದೆ. ಸಂಯುಕ್ತ ಸಂಸ್ಥಾನ ಅಮೇರಿಕ ಮತ್ತು ಕೆನಡಾಗಳ

ಮಹಾ ನಗರಗಳಲ್ಲಿ ಗಗನಚುಂಬಿ ಕಟ್ಟಡಗಳ ತಳಕಟ್ಟುಗಳಲ್ಲಿ ಅಸ್‌ಬೆಸ್ಟೋಸ್ ಮೆತ್ತೆಗಳನ್ನು ಸೇರಿಸಿರುತ್ತಾರೆ. ಕಟ್ಟಡದ ಸುತ್ತ ವಾಹನಗಳು ಓಡಾಡುವಾಗ ಉಂಟಾಗುವ ಕಂಪನವನ್ನು ಇವು ಹೀರಿಕೊಂಡು ಕಟ್ಟಡ ನಡುಗಿ ಧಕ್ಕೆಗೊಳ್ಳದಂತೆ ಕಾಪಾಡುತ್ತವೆ.

"ಅಸ್‌ಬೆಸ್ಟೊಲೈಟ್" ಎಂಬ ತಯಾರಿಕೆಯ ಲೇಪವನ್ನು ಕಟ್ಟಡಗಳ ಮಾಡುಗಳಿಗೆ ಹಚ್ಚಿದರೆ ಒಳಗೆ ಸೆಕೆ ಕಡಿಮೆಯಾಗುತ್ತದೆ. ಈ ಲೇಪದಿಂದ ಮನೆ ಮಾಡಿನ ಮೇಲೆ ಬೀಳುವ ಉಷ್ಣತೆಯಲ್ಲಿ ನೂರಕ್ಕೆ ೭೦ ರಷ್ಟು ಅಂಶ ಪ್ರತಿಫಲಿತವಾಗುವುದರಿಂದ ಅದು ಮನೆಯೊಳಗಿನ ಶೀತೋಷ್ಣಗಳನ್ನು ಸಮತೋಲದಲ್ಲಿಟ್ಟಿರುತ್ತದೆ.

ಇಂಥ ವೈವಿಧ್ಯಮಯಗುಣಗಳುಳ್ಳ "ಮಾಯಕದ" ಪದಾರ್ಥವು ಸೈನಿಕ ವಿಭಾಗದಲ್ಲೂ ಅತಿ ಮಹತ್ವದ್ದೆನಿಸಿದರೆ ಆಶ್ಚರ್ಯವಿಲ್ಲ. ಸಾಮುದ್ರ ಟರ್ಬೈನ್, ಜೆಟ್ ಎಂಜಿನ್ ಮೊದಲಾದ ಅನೇಕ ಯಾಂತ್ರಿಕ ಕಾರ್ಯಗಳಲ್ಲಿ ಅಸ್‌ಬೆಸ್ಟೋಸ್ ಅನಿವಾರ್ಯವಾಗಿದೆ.

ಪರಮಾಣು ಸಂಶೋಧನ ಕೇಂದ್ರಗಳಲ್ಲಿ ವಿಕಿರಣಕ್ರಿಯೆಯಿಂದ ದೂಷಿತವಾದ ಗಾಳಿಯನ್ನು ಸೋಸಲು ಅಸ್‌ಬೆಸ್ಟೋಸ್ ಪಡದೆಗಳನ್ನು ಉಪಯೋಗಿಸುವುದು ಇದರ ಅತ್ಯಾಧುನಿಕ ಉಪಯೋಗಗಳಲ್ಲಿ ಒಂದಾಗಿದೆ.

ಅಸ್‌ಬೆಸ್ಟೋಸಿನ ಔಷಧಿಕ ಉಪಯೋಗ ತುಂಬ ಸೋಜಿಗವಾದದ್ದು. ೨೪ ಶತಕಗಳಷ್ಟು ಹಿಂದೆ ಹಿಪಾಕ್ರಿಟಸನೇ ಔಷಧಗಳಲ್ಲಿ ಅದನ್ನು ಉಪಯೋಗಿಸುತ್ತಿದ್ದನೆಂದು ಉಲ್ಲೇಖವಿದೆ. ಇಂದು ಹೃದಯ-ರೋಗ ತಜ್ಞರು ಅಸ್‌ಬೆಸ್ಟೋ-ಸಿನ ಪುಡಿಯನ್ನು ಇಂಜಕ್ಶನ್ ಮೂಲಕ ಕೊಟ್ಟು ಪ್ರಾಥಮಿಕ ಅವಸ್ಥೆಯಲ್ಲಿರುವ ಹೃದಯ ರೋಗಗಳನ್ನು ಹಿಡಿತಕ್ಕೆ ತರುತ್ತಿದ್ದಾರೆ. ಇದು ರಕ್ತ ಪ್ರವಾಹವನ್ನು ಉತ್ತೇಜಿತಗೊಳಿಸುತ್ತದೆ. ಅಸ್‌ಬೆಸ್ಟಾಸಿಗೆ ನೀರನ್ನು ಹೀರಿಕೊಳ್ಳುವ ಗುಣವಿರುವುದರಿಂದ ಕಟಿವಾಯು, ಸಂಧಿವಾತ ರೋಗಿಗಳಿಗೆ ಅಸ್‌ಬೆಸ್ಟೋಸ್ "ಅರಳೆ" ತುಂಬಿದ ಗಾದಿಗಳ ಮೇಲೆ ಮಲಗಲು ಸೂಚಿಸಲಾಗುತ್ತದೆ.

ಕೆನಡಾ ಮತ್ತು ರಶಿಯ ಇವು ಜಗತ್ತಿನ ಪ್ರಮುಖ ಕಚ್ಚಾ ಅಸ್‌ಬೆಸ್ಟೋಸ್ ತಯಾರಕ ದೇಶಗಳು. ಜಗತ್ತಿನಲ್ಲಿ ಸಿಗುವ ಅಸ್‌ಬೆಸ್ಟೋಸಿನಲ್ಲಿ ಕ್ರಿಸೊಟೈಲ್ (Chrysotile) ಎಂಬ ವರ್ಗದ್ದೇ ಹೆಚ್ಚು (೯೫%). ಈ ವರ್ಗದ ಅದಿರು



ಕ್ರೊಸಿಡೊಲೈಟ್ ಅಸ್‌ಬೆಸ್ಟೋಸ್

ಈಗ ತಿಳಿದಿರುವ ಮಟ್ಟಿಗೆ ಜಗತ್ತಿನಲ್ಲಿ ಒಟ್ಟು ೮.೮ ಕೋಟಿ ಟನ್ ಇರಬಹುದೆಂದು ಅಂದಾಜಿದೆ. ಅದರಲ್ಲಿ ಕೆನಡವೊಂದರ ಭೂಗರ್ಭದಲ್ಲೇ ೫.೧ ಕೋಟಿ ಟನ್ನಿನಷ್ಟು ಇರಬೇಕೆಂದು ಭಾವಿಸಲಾಗಿದೆ. ಮತ್ತೆ ೨.೫ ಕೋಟಿ ಟನ್ನಿನಷ್ಟು ರಶಿಯದ ಭೂಗರ್ಭದಲ್ಲಿರಬೇಕು. ಇದಲ್ಲದೆ ಅಮೊಸೈಟ್, ಕ್ರೊಸಿಡೋಲೈಟ್ ಮತ್ತು ಅಂಥೋಫಿಲೈಟ್ ವರ್ಗದ ಅಸ್‌ಬೆಸ್ಟೋಸ್ ದಕ್ಷಿಣ ಆಫ್ರಿಕ, ಆಸ್ಟ್ರೇಲಿಯ ಮೊದಲಾದೆಡೆಗಳಲ್ಲಿದೆ.

ಅಮೂಲ್ಯವಾದ ಈ ಖನಿಜವು ಭಾರತದಲ್ಲಿಯೂ ಸ್ವಲ್ಪ ಮಟ್ಟಿಗೆ ಸಿಗುತ್ತದೆ. ಕಡಪಾ ಜಿಲ್ಲೆಯ (ಆಂಧ್ರ) ಪುಲಿವೆಂಡಲು ತಾಲೂಕಿನಲ್ಲಿ ೯॥ ಮೈಲು ವಿಸ್ತಾರಕ್ಕೆ ಹಬ್ಬಿರುವ ಶಿರೆಗಳಲ್ಲಿ ಉತ್ತಮ ವರ್ಗದ ಕ್ರಿಸೋಟೈಲ್ ಅಸ್-ಬೆಸ್ಟೋಸಿನ ಅದಿರು ಒಟ್ಟು ೨,೫೬,೦೦೦ ಟನ್ನಿನಷ್ಟಿರಬೇಕೆಂದು ಊಹಿಸಲಾಗಿದೆ.

ಈ ದೇಶದಲ್ಲಿ ಸಿಗುವ ಅಸ್‌ಬೆಸ್ಟೋಸಿನಲ್ಲಿ ಟ್ರೆಮೊಲೈಟ್ ವರ್ಗದ್ದೇ ಹೆಚ್ಚು. ಬಿಹಾರ, ಒಡಿಸಾ, ರಾಜಸ್ಥಾನ, ಮುಂಬಯಿ ಮತ್ತು ಮಧ್ಯಪ್ರದೇಶಗಳಲ್ಲಿ ಈ ಬಗೆಯ ಅದಿರುಗಳಿವೆ.

ಮೈಸೂರು ರಾಜ್ಯದಲ್ಲಿ ಹಾಸನ ಜಿಲ್ಲೆಯ ಹೊಳೆ ನರಸೀಪುರದಲ್ಲಿಯೂ ಈ ಬಗೆಯ ಅಸ್-ಬೆಸ್ಟೋಸ್ ಸಿಕ್ಕಿದೆ.

ಟ್ರೆಮೊಲೈಟ್ ಅಸ್‌ಬೆಸ್ಟೋಸಿನ ಎಳೆಗಳು ಉದ್ದವಾಗಿದ್ದರೂ ಬಿರುಸು ಮತ್ತು ದುರ್ಬಲವಾಗಿರುವುದರಿಂದ ನೂಲಲು ನೇಯಲು ಉಪಯೋಗವಾಗುವುದಿಲ್ಲ. ಆದರೆ ಅದರ ಉಷ್ಣತಾ ನಿರೋಧಕ ಶಕ್ತಿ ಬಲವಾಗಿದೆ. ಕ್ರಿಸೊಟೈಲ್ ವರ್ಗದ ಅದಿರು ಕಡಪಾದಲ್ಲಿ ಮಾತ್ರ ದೊರಕಿದೆ.



ಕ್ರಿಸೊಟೈಲ್ ಅಸ್ ಬೆಸ್ಟೋಸ್

ಅಸ್‌ಬೆಸ್ಟೋಸ್ ಉತ್ಪಾದನೆ ನಮ್ಮ ದೇಶದಲ್ಲಿ ಇನ್ನೂ ಬಾಲ್ಯಾವಸ್ಥೆಯಲ್ಲಿದೆ. ೧೯೦೪ ರಿಂದ ೧೯೫೦ರ ವರೆಗೆ ಆದ ಎಲ್ಲ ಬಗೆಯ ಅಸ್‌ಬೆಸ್ಟೋಸ್ ಉತ್ಪಾದನೆ ಒಟ್ಟು ೯,೩೯೨ ಟನ್ ಮಾತ್ರ. ಕೆನಡವು ಒಂದೇ ತಿಂಗಳಲ್ಲಿ ಇಷ್ಟು ಉತ್ಪಾದನೆ ಮಾಡುತ್ತಿದೆ. ೧೯೫೦ ರಲ್ಲಿ ೬೦ ಲಕ್ಷ ರೂಪಾಯಿಯ ಅಸ್‌ಬೆಸ್ಟೋಸನ್ನು ಭಾರತ ಆಯಾತ ಮಾಡಿಕೊಳ್ಳಬೇಕಾಯಿತೆಂದ ಮೇಲೆ ನಮ್ಮ ಭೂಗರ್ಭದಲ್ಲಿ ಅಡಗಿರಬಹುದಾದ ಅಸ್‌ಬೆಸ್ಟೋಸಿನ ಶೋಧವನ್ನು ತೀವ್ರಗತಿಯಿಂದ ಸಾಗಿಸಬೇಕೆಂದು ವ್ಯಕ್ತವಾಗುತ್ತದೆ.

ಆದರೆ ಅಸ್‌ಬೆಸ್ಟೋಸ್ ಕೊರತೆ ಜಾಗತಿಕ ಸ್ವರೂಪದ್ದಾಗಿದೆ. ವೈಜ್ಞಾನಿಕ ಸಂಸ್ಥೆಗಳು ಈ ಖನಿಜದ ಹೊಸ ಹೊಸ ಉಪಯೋಗಗಳನ್ನು ಕಂಡುಹಿಡಿಯುತ್ತಿರುವುದರಿಂದ ಬೇಡಿಕೆ ಹೆಚ್ಚುತ್ತಿದೆ. ಇಂದಿನ ಮಾನದಲ್ಲೇ ವಿನಿಯೋಗಿಸಿದರೂ ಜಗತ್ತಿನಲ್ಲಿ ಕಂಡುಹಿಡಿಯಲ್ಪಟ್ಟಿರುವ ಅಸ್‌ಬೆಸ್ಟೋಸ್ ಅದಿರುಗಳು ೫೦ ವರ್ಷದೊಳಗೆ ತೀರಿಹೋಗುವವು.

ಆ ಮೇಲೆ ಏನು? ವಿಜ್ಞಾನ ಈ ಸಮಸ್ಯೆಯನ್ನು ತಡಕಲು ಪ್ರಾರಂಭಿಸಿದೆ. ಕೃತಕ ಅಸ್‌ಬೆಸ್ಟೋಸ್ ತಯಾರಿಕೆಯ ಯತ್ನಗಳಾಗುತ್ತಿವೆ. ಪೊಟ್ಯಾಶಿಯಂ-ಸೀಸ ಸಿಲಿಕೇಟುಗಳಿಂದ ಅಸ್‌ಬೆಸ್ಟೋಸಿನಂಥ ಪದಾರ್ಥವನ್ನು ತಯಾರಿಸಲಾಗಿದೆ. ಆದರೆ ಅದನ್ನು ನೂಲಲು ಬರುವುದಿಲ್ಲ. ಪ್ಲಾಸ್ಟಿಕ್ಕುಗಳನ್ನು ಕೂಡ ಅಸ್‌ಬೆಸ್ಟೋಸ್ ಸ್ಥಾನದಲ್ಲಿ ಉಪಯೋಗಿಸುವ ಸಾಧ್ಯತೆಗಳನ್ನು ಪರಿಶೀಲಿಸಿದ್ದಾರೆ.

ಈ ವರೆಗೆ ಯಾವ ಕೃತಕ ಅಥವಾ ನೈಸರ್ಗಿಕ ಪದಾರ್ಥವೂ ಅಸ್‌ಬೆಸ್ಟೋಸಿನ ಕೆಲಸಗಳನ್ನೆಲ್ಲ ವಹಿಸಿಕೊಳ್ಳಲು ಸಮರ್ಥವಾಗಿಲ್ಲ.

'ಲಿಂಕ್' ಪತ್ರಿಕೆ ವಿವಿಧ ರಂಗಗಳಲ್ಲಿ ಪ್ರಮುಖರಾದವರಿಗೆ "ಸ್ವಾತಂತ್ರ್ಯವನ್ನು ನಾವು ಸದುಪಯೋಗ ಮಾಡಿಕೊಂಡಿರುವೆವೆ?'' ಎಂಬ ಪ್ರಶ್ನೆ ಕೇಳಿತು. ಅದಕ್ಕೆ ಪ್ರಸಿದ್ಧ ಅರ್ಥ ಶಾಸ್ತ್ರಜ್ಞರೂ ದಿಲ್ಲಿ ವಿಶ್ವವಿದ್ಯಾಲಯದ ಉಪ ಕುಲಗುರುಗಳೂ ಕನ್ನಡಿಗರೂ ಆದ ಡಾ. ರಾಯರು ಕೊಟ್ಟ ಉತ್ತರ ಪ್ರತಿಯೊಬ್ಬನೂ ವಿಚಾರಿಸಲರ್ಹವಾಗಿದೆ.

# ಸ್ವಾತಂತ್ರ್ಯವನ್ನು ನಾವು ಸದುಪಯೋಗ ಮಾಡಿಕೊಂಡಿರುವೆವೆ?

ಡಾ. ವಿ. ಕೆ. ಆರ್. ವಿ. ರಾವ್

ಭಾರತ ರಾಷ್ಟ್ರವು ತನ್ನ ಸ್ವಾತಂತ್ರ್ಯದ ಮೊದಲಿನ ಹನ್ನೊಂದು ವರ್ಷಗಳ ಉಪಯೋಗವನ್ನು ಚೆನ್ನಾಗಿ ಮಾಡಿಕೊಂಡಿದೆಯೆನ್ನುವದರಲ್ಲಿ ಎರಡು ಅಭಿಪ್ರಾಯಗಳು ಇರಲಾರವು. ಆರ್ಥಿಕ ರಂಗದಲ್ಲಿ ನಮ್ಮ ರಾಷ್ಟ್ರೀಯ ಉತ್ಪನ್ನ—ತಲಾ ಮತ್ತು ಒಟ್ಟು—ಹೆಚ್ಚಿದೆ. ರಾಜಕೀಯ ದೃಷ್ಟಿಯಿಂದ, ನಾವು ಪ್ರಜಾಪ್ರಭುತ್ವ ರಾಜ್ಯಘಟನೆಯನ್ನು ಸ್ಥಾಪಿಸಿದ್ದೇವೆ. ೧೮ ಕೋಟಿಗಿಂತಲೂ ಹೆಚ್ಚು ಮತದಾರರು ಭಾಗವಹಿಸುವ ಎರಡು ಸಾರ್ವತ್ರಿಕ ಚುನಾವಣೆಗಳನ್ನು ಯಶಸ್ವಿಯಾಗಿ ಜರುಗಿಸಿದ್ದೇವೆ. ಸಾಮಾಜಿಕವಾಗಿ, ನಾವು ಕಾಯದೆಯಿಂದ ಅಸ್ಪೃಶ್ಯತೆಯನ್ನು ಹೋಗಲಾಡಿಸಿದ್ದೇವೆ. ಸ್ತ್ರೀಯರ ಅಂತಸ್ತನ್ನು ಸುಧಾರಿಸಿದ್ದೇವೆ ಮತ್ತು ಹಿಂದುಳಿದ ವರ್ಗದವರಿಗೆ ಶಿಕ್ಷಣ ಮತ್ತು ಉದ್ಯೋಗಗಳನ್ನು ಒದಗಿಸಲು ವಿಶೇಷ ಪ್ರಯತ್ನವನ್ನು ನಡೆಸಿದ್ದೇವೆ. ಅಂತಾರಾಷ್ಟ್ರೀಯ ರಂಗದಲ್ಲಿ ನಮ್ಮ ಮಾತಿಗೆ ಹೆಚ್ಚೆಚ್ಚು ಗೌರವ ಲಭ್ಯವಾಗುತ್ತಿದೆ. ಜಗತ್ತಿನ ಒಂದು ಪ್ರಮುಖ ರಾಷ್ಟ್ರವೆಂದು ಮನ್ನಣೆ ಹೊಂದುವ ಪಥದಲ್ಲಿ ಭಾರತ ಪ್ರಗತಿಪರ ಹೆಜ್ಜೆಯನ್ನಿಡುತ್ತಿರುವಂತೆ ಕಾಣಿಸುತ್ತಿದೆ. ಆದ್ದರಿಂದ ಕಳೆದ ಹನ್ನೊಂದು ವರ್ಷಗಳಲ್ಲಿ, ಒಂದು ರಾಷ್ಟ್ರವಾಗಿ, ನಾವು ಸಾಧಿಸಿರುವ ಪ್ರಗತಿಯ ವಿಚಾರದಲ್ಲಿ ನಾವು ಸಂತೋಷಪಟ್ಟುಕೊಳ್ಳತಕ್ಕದ್ದಿದೆ. ಹಾಗಿದ್ದರೂ ಒಂದು ವಿಚಿತ್ರವಾದ ನಿರಾಶೆಯ ಭಾವನೆ ನನ್ನಲ್ಲುಂಟಾಗಿದೆಯೆಂದು ನಾನು ಒಪ್ಪಿಕೊಳ್ಳಬೇಕು. ಅದು ಹೇಗೋ ನನಗೆ ನನ್ನ ರಾಷ್ಟ್ರದ ಪರಿಸ್ಥಿತಿ ತೃಪ್ತಿಕರವಾಗಿದೆಯೆಂದು ಅನಿಸುವುದಿಲ್ಲ. ನನ್ನ ಈ ಮನೋಭಾವನೆಯನ್ನು ವಿಶ್ಲೇಷಿಸಿದಾಗ ನನ್ನಲ್ಲಿ ಅಶಾಂತಿಯನ್ನುಂಟುಮಾಡಲು ಕಾರಣವಾದ ಮೂರು ಸಂಗತಿಗಳು ನನಗೆ ಕಾಣಿಸುತ್ತವೆ. ಈ ಮೂರೂ ವ್ಯಾವಹಾರಿಕವಾದ, ಗೋಚರವಾದ ವಿಷಯಗಳಿಗಿಂತಲೂ ಅಗೋಚರವಾದ ಮತ್ತು ವಿಚಾರಕ್ಕೆ ಅತೀತವಾದ ವಿಷಯಗಳಿಗೇ ಸಂಬಂಧಪಟ್ಟಿವೆ. ಈ ಮೂರು ಕಾರಣಗಳು ಯಾವವೆಂದರೆ—

೧. ಜೀವನ ಮತ್ತು ಅದರ ಸಮಸ್ಯೆಗಳ ಬಗ್ಗೆ ತರುಣ ಪೀಳಿಗೆಯ ಸಾಮಾನ್ಯ ನಿಲುಮೆ.

೨. ಕೆಲಸ ಮತ್ತು ಪ್ರತಿಫಲದ ಬಗ್ಗೆ ಜನತೆಯ ಸಾಮಾನ್ಯ ನಿಲುಮೆ.

೩. ಉಪಭೋಗ ಮತ್ತು ಉಳಿತಾಯಗಳ ಬಗ್ಗೆ ಜನತೆಯ ಸಾಮಾನ್ಯ ನಿಲುಮೆ.

ಮೊದಲು ತರುಣ ಪೀಳಿಗೆಯ ನಿಲುಮೆಯ ಮಾತನ್ನು ವಿಚಾರಿಸೋಣ. ಎರಡು ಜಾಗತಿಕ

ಯುದ್ಧಗಳ ನಡುವಿನ ಅವಧಿಯಲ್ಲಿ ಪ್ರಾಯಕ್ಕೆ ಬಂದ ಪೀಳಿಗೆಯ ನಿಲುಮೆಯಲ್ಲಿದ್ದ ಗುಣಗಳು ಇಂದಿನ ತರುಣ ಪೀಳಿಗೆಯಲ್ಲಿ ಕಾಣಿಸುವುದಿಲ್ಲ. ಆ ಪೀಳಿಗೆಯ ಜೀವನವನ್ನು ತುಂಬುಜೀವನ ವಾಗಿ ಮಾಡಿದ ಆ ಉತ್ಸಾಹ ಮತ್ತು ಉಲ್ಲಾಸ ಇವರಲ್ಲಿಲ್ಲ; ಅವರ ಮನವನ್ನು ಪ್ರೇರಿಸಿದ ಆ ಧ್ಯೇಯವಾದದ ಕೊರತೆಯೂ ಇಂದಿನವರಲ್ಲಿದೆ; ಸಾರ್ವಜನಿಕ ಹಿತಕ್ಕಾಗಿ ವ್ಯಕ್ತಿಗತ ಹಿತವನ್ನು ಬಲಿಕೊಡುವ ಆ ತ್ಯಾಗಪ್ರವೃತ್ತಿಯ ಅಭಾವವೂ ಇದ್ದಂತಿದೆ. ಅಂದರೆ ನಮ್ಮ ಇಂದಿನ ತರುಣ ತರುಣಿಯರು ಸಮರ್ಥರಲ್ಲ, ಉತ್ಸಾಹ-ಉಲ್ಲಾಸಗಳನ್ನು ಪ್ರಕಟಿಸುವ ಯೋಗ್ಯತೆ ಇವರಿಗಿಲ್ಲ ಎಂದರ್ಥವಲ್ಲ. ಬದಲಾಗಿ, ಹಿಂದಿನ ಪೀಳಿಗೆಯವರಿಗಿಂತ ಇಂದಿನವರು ಹೆಚ್ಚು ವಿದ್ಯಾವಂತರು ಮತ್ತು ಹೆಚ್ಚು ಯೋಗ್ಯತಾಸಂಪನ್ನರು ಎಂದು ನಾನು ನಂಬುತ್ತೇನೆ. ಉತ್ಸಾಹ ಉತ್ತೇಜನಗಳ ಪ್ರದರ್ಶನದಲ್ಲಿ ತಾವೇನೂ ಹಿಂದಿಲ್ಲವೆಂದೂ ಅವರು ತೋರಿಸಿಕೊಟ್ಟಿದ್ದಾರೆ. ಇದಕ್ಕೆ ತೀರ ಇತ್ತೀಚಿನ ಉದಾಹರಣೆ ಬೇಕಾದರೆ ಕೇರಳ ಮತ್ತು ಉತ್ತರ ಪ್ರದೇಶಗಳತ್ತ ಬೊಟ್ಟುಮಾಡಬಹುದು. ಆದರೆ ಇಷ್ಟೇ, ಇವರು ಕ್ಷುಲ್ಲಕ ವಿಷಯಗಳ ಬಗ್ಗೂ ಉತ್ತೇಜಿತಗೊಳ್ಳುವರೆಂದು ಕಾಣುತ್ತದೆ. ಮೇಲಾಗಿ ಅವರು ಇಡೀ ರಾಷ್ಟ್ರದ ಸಮಸ್ಯೆಗಳಿಗಿಂತಲೂ ತಮ್ಮ ವೈಯಕ್ತಿಕ ಆರ್ಥಿಕ ಮತ್ತು ಇತರ ಸಮಸ್ಯೆಗಳಿಗೇ ಪ್ರಾಧಾನ್ಯವೀಯುವಂತಿದೆ. ಅವರನ್ನು ಇದಕ್ಕಾಗಿ ನಾವೇನೂ ದೂಷಿಸುವದಿಲ್ಲ. ತಮ್ಮ ರಾಷ್ಟ್ರದ ನಿಸ್ವಾರ್ಥಿ, ತ್ಯಾಗವೀರ ಧುರೀಣರೆಂದು ಯಾರನ್ನು ಕುರಿತು ಅವರು ಭಾವನೆ ಮಾಡಿಕೊಂಡಿದ್ದರೋ ಆ ಜನರ ನೈಜ ಸ್ವರೂಪದರ್ಶನವಾದುದರಿಂದ ತರುಣರ ಕಣ್ಮಂಜು ಹರಿದಂತಾದುದು ಇದಕ್ಕೊಂದು ಕಾರಣವಿರಬಹುದು; ಅವರಲ್ಲಿ ಹೆಚ್ಚಿನವರ ಪಾಲಿಗೆ ಬರಲಿರುವ ನಿರುದ್ಯೋಗದ ಚಿತ್ರ ಅವರನ್ನು ನಿರಾಶೆಗೊಳಿಸುತ್ತಿರಬಹುದು; ಸಾಕಷ್ಟು ಸ್ಪಷ್ಟವಾದ ಮತ್ತು ಸರಳವಾದ ಧ್ಯೇಯವು ಅವರ ಮುಂದಿಡಲ್ಪಡದಿರುವದೂ ಒಂದು ಕಾರಣವಾಗಿರಬಹುದು. ಇಂದಿನ ತರುಣ ಪೀಳಿಗೆಯ ನಿಲುಮೆಗೆ ಇವುಗಳಲ್ಲಿ ಯಾವ ಕಾರಣವೇ ಇರಲಿ, ನನಗೆ ತರುಣ ಪೀಳಿಗೆಯ ಮಾನಸಿಕ ಪ್ರಕೃತಿಯ ಬಗ್ಗೆ ಖೇದವೆನಿಸುತ್ತದೆ. ಇದಕ್ಕಾಗಿ ನಮ್ಮ ರಾಷ್ಟ್ರವು ತನ್ನ ಸ್ವಾತಂತ್ರ್ಯದ ಸದುಪಯೋಗವನ್ನು—ಅದರ ತರುಣ ಪೀಳಿಗೆಗೆ ಸಂಬಂಧಪಟ್ಟ ಮಟ್ಟಿಗಾದರೂ–ಮಾಡಿಕೊಂಡಿಲ್ಲ ಎಂದು ಹೇಳಲೇಬೇಕಾಗಿದೆ.

ಎರಡನೆಯದಾಗಿ ಕೆಲಸ ಮತ್ತು ಪ್ರತಿಫಲದ ವಿಚಾರದಲ್ಲಿ ಖಾಸಗಿ ಮತ್ತು ಸಾರ್ವಜನಿಕ ವಿಭಾಗಗಳೆರಡರಲ್ಲೂ ಜನತೆಯ ನಿಲುಮೆ ನನಗೆ ಅಸಮಾಧಾನವನ್ನು ಉಂಟುಮಾಡುತ್ತಿದೆ. ಪ್ರತಿಯೊಬ್ಬನಿಗೂ ಹೆಚ್ಚು ಪ್ರತಿಫಲ ಬೇಕು; ಆದರೆ ಹೆಚ್ಚು ಅಥವಾ ಉತ್ತಮ ಕೆಲಸಕ್ಕೂ ಹೆಚ್ಚಿನ ಪ್ರತಿಫಲಕ್ಕೂ ಇರುವ ಪರಸ್ಪರ ಸಂಬಂಧವನ್ನು ಅರಿತುಕೊಳ್ಳಲು ಜನರು ಸಿದ್ಧರಿಲ್ಲ. ಹಕ್ಕುಗಳ ಮಾತನ್ನು ಒತ್ತಿ ಹೇಳುತ್ತಾರೆಯೆ ವಿನಾ ಕರ್ತವ್ಯದ ವಿಚಾರವನ್ನು ಎತ್ತುವವರಿಲ್ಲ. ಸ್ವಾತಂತ್ರ್ಯ ಬಂದರೆ ಕೆಲಸದ ವಿಚಾರದಲ್ಲಿ ಜನರ ದೃಷ್ಟಿ ಬದಲಾಗುವುದೆಂದು ನಿರೀಕ್ಷಿಸಲಾಗಿತ್ತು; ಅದರಿಂದ ವ್ಯಕ್ತಿಗತ ಹಿತಕಾಮನೆಯು ರಾಷ್ಟ್ರಹಿತ ಮತ್ತು ರಾಷ್ಟ್ರಾಭಿವೃದ್ಧಿಯೊಡನೆ ಐಕ್ಯ ಹೊಂದುವುದೆಂದು ಆಶಿಸಲಾಗಿತ್ತು. ಆದರೆ ಹಾಗಾಗಿಲ್ಲ. ಇದರ ಪರಿಣಾಮವಾಗಿ ನಮ್ಮ ಧುರೀಣರಷ್ಟೇ ಅಲ್ಲ, ವಿದೇಶೀಯರು ಕೂಡ ನಮಗೆ ದುಡಿಮೆಯ ಮಹತಿಯನ್ನೂ ತ್ವರಿತ ಆರ್ಥಿಕ ಪ್ರಗತಿಗೆ ಪರಿಶ್ರಮದ ಕೆಲಸ ಅಗತ್ಯವೆಂಬುದನ್ನೂ ಬೋಧಿಸುವ ಪ್ರಸಂಗ ಬಂದಿದೆ.

ಇನ್ನು ಉಪಭೋಗ ಹಾಗೂ ಉಳಿತಾಯಗಳ ವಿಚಾರವಾಗಿ ಜನಸಾಮಾನ್ಯರ ನಿಲುಮೆಯ ಬಗ್ಗೆ ಹೇಳುವದಾದರೆ, ಆದಷ್ಟು ಕಡಿಮೆ ವೆಚ್ಚ ಮಾಡಿ ಹೆಚ್ಚು ಉಳಿಸಬೇಕು ಎಂಬ ಮಾತುಗಳು ಧಾರಾಳವಾಗಿ ಕೇಳಿಸುತ್ತಿದ್ದರೂ ಸ್ವೇಚ್ಛೆಯಿಂದ ಉಳಿತಾಯ ಹೆಚ್ಚುತ್ತಿರುವದಾಗಲಿ ಉಪಭೋಗ ಕಡಿಮೆಯಾಗುತ್ತಿರುವದಾಗಲಿ ಕೃತಿಯಲ್ಲಿಳಿಯುತ್ತಿಲ್ಲ. ಬದಲಾಗಿ 'ಆಡಂಬರದ

ವೆಚ್ಚದ ಪಿಡುಗು ಖಾಸಗಿ ರಂಗದಿಂದ ಸರಕಾರಿ ರಂಗಕ್ಕೂ ಹಬ್ಬಿದೆ; ನಿರುಪಯೋಗಿಯಾದ ಅಪವ್ಯಯದ ಪ್ರವೃತ್ತಿ ಬ್ರಿಟಿಶ ಮತ್ತು ಸಂಸ್ಥಾನಿ ದರ್ಬಾರಿನ ಕಾಲಕ್ಕಿಂತಲೂ ಈಗ ಒಂದು ತೂಕ ಹೆಚ್ಚೇ ಆಗಿದೆ. ಉಚ್ಚ ವರ್ಗದವರಿಗಾಗಲಿ, ಜನಸಾಮಾನ್ಯರಿಗಾಗಲಿ ಭವಿಷ್ಯತ್ತಿನ ಮಹತ್ವದ ಅರಿವೂ ತ್ವರಿತ ಆರ್ಥಿಕ-ಪ್ರಗತಿಗೆ ಅಗತ್ಯವಾದ ಮಿತವ್ಯಯದ ಅರಿವೂ ಇಲ್ಲ. ನಮ್ಮ ರಾಷ್ಟ್ರಜೀವನದಲ್ಲಿ ಇದೊಂದು ಗಂಡಾಂತರಪೂರ್ಣವಾದ ಮತ್ತು ಎದೆಗೆಡಿಸುವ ಅಂಶವಾಗಿದೆ. ವಿದೇಶಿ ಸಹಾಯದ ಮೇಲೆ ನಾವು ಹೆಚ್ಚೆಚ್ಚಾಗಿ ಅವಲಂಬಿಸತೊಡಗಿರುವದು ಇದರ ಸತ್ಯತೆಯನ್ನೇ ತೋರಿಸುತ್ತದೆ.

ಎಲ್ಲಕ್ಕೂ ಹೆಚ್ಚಾಗಿ ರಾಷ್ಟ್ರದ ಸುಧಾರಣೆ ಮತ್ತು ವಿವಿಧ ರಂಗಗಳ ಪ್ರಗತಿಗಾಗಿ ಜನರಲ್ಲಿ ಸ್ವಯಂಪ್ರೇರಿತ ಚಟುವಟಿಕೆ ಸಾಕಷ್ಟಾಗಿ ಕಂಡು ಬರುತ್ತಿಲ್ಲ. ದೇಶದಲ್ಲಿ ತುಂಬ ಚಟುವಟಿಕೆಗಳು ನಡೆಯುತ್ತಿವೆ, ಬಹಳಷ್ಟು ಸಾಧಿಸಲ್ಪಟ್ಟಿದೆ, ನಿಜ. ಆದರೆ ಚಟುವಟಿಕೆಯಲ್ಲಿ ಹೆಚ್ಚಿನ ಭಾಗ ಸರಕಾರದ್ದು ಅಥವಾ ಸರಕಾರದಿಂದ ಪ್ರೇರಿತವಾದದ್ದು ಇಲ್ಲವೆ ಲಾಭದೃಷ್ಟಿಯುವರದೇ ಆಗಿದೆ. ಸಾಧಿಸಿದ್ದರಲ್ಲಿ ಹೆಚ್ಚಿನ ಭಾಗ ಸರಕಾರ ಅಥವಾ ಬಂಡವಳವರ್ಗ ಸಾಧಿಸಿದ್ದಾಗಿದೆ. ಗಾಂಧೀಯುಗ ಮುಗಿದಂತಿದೆ. ವಿನೋಬಾ ಇದ್ದಾರೆ, ನಿಜ. ಆದರೆ ಅವರು ಏಕಾಂಗಿಯಾದ ವೀರರು. ಅವರ ಬಗ್ಗೆ ಹೊರಡಿಸುವ ಪ್ರಶಂಸೋದ್ಗಾರಗಳೆಲ್ಲ ಎಚ್ಚೆತ್ತ ಭಾರತದ ನಿರ್ಧಾರದ ದ್ಯೋತಕವಾಗಿರದೆ ನಮ್ಮ ಮನಸ್ಸಾಕ್ಷಿಯನ್ನು ಮೋಸಗೊಳಿಸಲು ಹೂಡಿದ ಗತ್ತೆಂದು ಅನಿಸುತ್ತದೆ.

ನನ್ನ ಈ ನಿರಾಶೆಯ ಉದ್ಗಾರದಲ್ಲಿ ಅತಿಶಯೋಕ್ತಿ ಇರಬಹುದು. ಆದರೆ ನಾನು ಅಸಮಾಧಾನಗೊಂಡಿರುವದು ನಿಜ. ಈ ಅಸಮಧಾನವನ್ನು ಇತರರಲ್ಲಿ ಹಬ್ಬಿಸಬಯಸುತ್ತೇನೆ—ಜನರನ್ನು ನಿರಾಶಾವಾದಿಗಳನ್ನಾಗಿ ಮಾಡುವದಕ್ಕೆಂದಲ್ಲ, ಆದರೆ ಅವರಿಗೆ ಸತ್ಯದ ಅರಿವನ್ನುಂಟು ಮಾಡಿಕೊಡಲು. ನಾನು ನಿರಾಶಾವಾದಿಯಲ್ಲ. ನಮ್ಮ ಲೌಕಿಕ ಸಾಧನೆಗಳನ್ನು ಕಂಡು ಮತ್ತು ವಿದೇಶೀಯರ ಹೊಗಳುನುಡಿಗಳನ್ನು ಕೇಳಿ ನಾವು ಬೆನ್ನು ಚಪ್ಪರಿಸಿಕೊಳ್ಳುವದನ್ನು ಬಿಟ್ಟು ಬಿಡುವ ಕಾಲ ಸನ್ನಿಹಿತವಾಗಿದೆ. ನಾವು ಆತ್ಮನಿರೀಕ್ಷಣೆ ಮಾಡಿಕೊಂಡು ರಾಷ್ಟ್ರವಾಗಿ ವೈಯಕ್ತಿಕವಾಗಿಯಾಗಲಿ, ಸಾಮೂಹಿಕವಾಗಿಯಾಗಲಿ ನಾವು ಸ್ವಾತಂತ್ರ್ಯಪೂರ್ವಕಾಲದಷ್ಟು ಸ್ವೇಚ್ಛೆಯಿಂದ ದುಡಿಯುತ್ತಿಲ್ಲವೆಂದು ಮನಗಾಣುವ ಸಮಯ ಪ್ರಾಪ್ತವಾಗಿದೆ. ಒಮ್ಮೆ ಈ ಅರಿವು ಬಂತೋ ನಾವು ಪುನಃ ನಮ್ಮ ಮನೆಯನ್ನು ಅಚ್ಚುಕಟ್ಟಾಗಿ ಕಟ್ಟುವ ಕಾರ್ಯವನ್ನು ಆರಂಭಿಸುತ್ತೇವೆಂದು ನನಗೆ ವಿಶ್ವಾಸವಿದೆ.

ಈತ ಎಂಟು ವರ್ಷಕಾಲವನ್ನು ಮನುಷ್ಯ ಸಂಪರ್ಕವಿಲ್ಲದೆ
ಮಲಯದ ಅರಣ್ಯದಲ್ಲಿ ಕಳೆದ

# ಮಲಯದ ರಾಬಿನ್ಸನ್ ಕ್ರೂಸೊ

ನರೇಂದ್ರ ಸಕ್ಸೇನಾ

ದ್ವಿತೀಯ ಮಹಾಯುದ್ಧದ ಕಾಲದಲ್ಲಿ ಜಪಾನಿಗಳು ಆಗ್ನೇಯ ಏಶಿಯದಲ್ಲಿ ಮಿಂಚಿನ ದಾಳಿ ಕೈಕೊಂಡಾಗ ನಡೆದ ಯುದ್ಧದಲ್ಲಿ ಭಾರತೀಯ ಸೈನ್ಯದ ಗುರ್ಖಾ ರಾಯಫಲ್ಸಿನ ನಕಾಮ ಗುರುಂಗ ಎಂಬ ಸೈನಿಕ ರಣರಂಗದಲ್ಲಿ ಮಡಿದ ಎಂದೇ ದಾಖಲೆಯಾಗಿ ಹೋಗಿತ್ತು.

ಎಂಟು ವರ್ಷಗಳ ನಂತರ, ೧೯೫೪ ರಲ್ಲಿ ಗುರ್ಖಾ ಗಸ್ತಿದಲವೊಂದು ಮಲಯಾದ ಮಧ್ಯ ಮತ್ತು ಪೂರ್ವದಿಕ್ಕಿನ ಪ್ರದೇಶಗಳ ಅಡವಿಗಳಲ್ಲಿ ಕಮ್ಯುನಿಸ್ಟರ ಮತ್ತು ಅವರ ಹಸ್ತಕರ ಬೇಟೆ ನಡೆಸಿದ್ದಾಗ ಅಕಸ್ಮಾತ್ತಾಗಿ ನಕಾಮ ಗುರುಂಗ ಅವರ ಕಣ್ಣಿಗೆ ಬಿದ್ದ. ಎಂಟು ವರ್ಷಗಳ ವರೆಗೆ ನಕಾಮ ಗುರುಂಗ ಆ ದಟ್ಟಡವಿಯಲ್ಲಿ ಮನುಷ್ಯರ ಮುಖವನ್ನು ಕಾಣದೆ ಒಬ್ಬಂಟಿಗನಾಗಿ ಜೀವಿಸಿಕೊಂಡಿದ್ದ ಅದ್ಭುತ ಕಥೆ ಆಗ ಬೆಳಕಿಗೆ ಬಂತು. ಜಪಾನಿ ಸೈನಿಕರಿಂದ ಉಳಿದುಕೊಳ್ಳಲು ತಾನು ಅಡಗಿಕೊಂಡಿದ್ದೇನೆ ಎಂದೇ ಭಾವಿಸಿಕೊಂಡಿದ್ದ ನಕಾಮ ಗುರುಂಗನಿಗೆ ಮಹಾಯುದ್ಧ ಮುಗಿದು ಜಪಾನಿಗಳು ಸೋತಿದ್ದಾರೆಂದು ಕೂಡ ಗೊತ್ತಿರಲಿಲ್ಲ. ಈ ವಿಷಯ ಅವನಿಗೆ ಅವನನ್ನು ಕಂಡ ಗುರ್ಖಾ ಗಸ್ತಿ ದಲದವರಿಂದ ತಿಳಿಯಿತು. ಭಾರತ ಸ್ವತಂತ್ರವಾದದ್ದು, ಅವನ ಗುರ್ಖಾ ರಾಯಫಲ್ಸ್‌ದಳವೀಗ ಸ್ವತಂತ್ರ ಭಾರತದ ಸೈನ್ಯದ ಒಂದು ತುಕುಡಿಯಾಗಿರುವದು ಎಲ್ಲ ಅವನಿಗೆ ಆಗ ಗೊತ್ತಾಯಿತು.

ನಕಾಮ ಗುರುಂಗನಿಗೆ ಈಗ ೪೮ ವರ್ಷ ಪ್ರಾಯ. ಮಧ್ಯಮ ನಿಲುವಿನ ಈತ ನೋಡಲು ಚಿಕ್ಕ ಆಳು. ನೇಪಾಳದ ಪಶ್ಚಿಮ ಭಾಗದ ಅಂಚಿನಲ್ಲಿರುವ ಲಾಮಜಂಗ ಜಿಲ್ಹೆಯ ಘರ್ಸಂಗ ಎಂಬ ಹಳ್ಳಿ ಅವನ ಊರು. ಅವನೀಗ ಅಲ್ಲಿ ಶಾಂತ ಜೀವನ ನಡೆಯಿಸುತ್ತಿದ್ದಾನೆ. ಪಿತ್ರಾರ್ಜಿತ ಭೂಮಿಯನ್ನು ಸಾಗುಮಾಡುತ್ತಿದ್ದಾನೆ. ಸರಳ ಸ್ವಭಾವದ ಹಳ್ಳಿಗರ ಎದುರು ಮಹಾಯುದ್ಧದಲ್ಲಿ ಗುರ್ಖಾ ಸೈನಿಕರು ತೋರಿದ ಪರಾಕ್ರಮವನ್ನು ವರ್ಣಿಸುವಾಗ ಅವನ ಮುಖ ಪ್ರಫುಲ್ಲವಾಗಿರುತ್ತದೆ. ವರ್ಷಕ್ಕೊಮ್ಮೆ ತನ್ನ ನಿವೃತ್ತಿ ವೇತನವನ್ನು ಪಡೆಯಲು ಪಟ್ಟಣಕ್ಕೆ ಹೋಗಿ ಬರುತ್ತಾನೆ. ಮಲಯಾದ ಅಡವಿಗಳಲ್ಲಿ ಅವನು ಕಳೆದ ಎಂಟು ವರ್ಷಗಳ ಕಥೆ ರೋಮಾಂಚಕಾರಿಯಾಗಿದೆ.

೧೯೩೯ರಲ್ಲಿ, ೧೯ ವರ್ಷ ವಯಸ್ಸಿನ ನಕಾಮ ಗುರುಂಗ ಭಾರತೀಯ ಸೈನ್ಯದ ಅತಿ ಪ್ರಾಚೀನ ಗುರ್ಖಾ ತುಕಡಿಯಾದ 'ಗುರ್ಖಾ ರಾಯ-ಫಲ್ಸ'ನ್ನು ಸೇರಿಕೊಂಡ. ೧೯೪೧ರಲ್ಲಿ ಆತ ಪ್ರತ್ಯಕ್ಷವಾಗಿ ರಣರಂಗವನ್ನು ಪ್ರವೇಶಿಸಿದ. ಮಲಯಾದಲ್ಲಿ ಮುಂದುವರಿಯುತ್ತಿದ್ದ ಜಪಾನಿಗಳನ್ನು ತಡೆದು ಹಿಮ್ಮೆಟ್ಟಿಸಲೆಂದು ಅವನ

'ಸಂಡೇ ಸ್ಟೇಟ್ಸಮನ್' ನಿಂದ

ತುಕಡಿಯನ್ನು ಇತರ ದಲಗಳೊಂದಿಗೆ ಕಳಿಸಿದ್ದರು.

ಜವುಳು ಪ್ರದೇಶವಾದ ಆಸುನ್ ಎಂಬಲ್ಲಿ ನಕಾಮು ಗುರುಂಗನ ತುಕಡಿ ಕಂದಕಗಳನ್ನು ತೋಡಿಕೊಂಡು ತನ್ನ ಸಂರಕ್ಷಕ ಠಾಣ್ಯವನ್ನು ರಚಿಸಿಕೊಂಡಿತು. ಮರುದಿನವೇ ಜಪಾನೀಯರ ಆಕ್ರಮಣದ ರಭಸ ಹೆಚ್ಚಿತು. ಸೇನಾಪತಿ ತನ್ನ ಸೈನ್ಯವನ್ನು ಹಿಂದಕ್ಕೆ ಸರಿಸಬೇಕೆಂದು ಯೋಚಿಸಿದರೂ ಸಂಪರ್ಕಸಾಧನಗಳೆಲ್ಲ ಕೆಟ್ಟುಹೋಗಿದ್ದರಿಂದ ಸಾಧ್ಯವಾಗಲಿಲ್ಲ. ಜಪಾನಿಗಳೆದುರು ಬ್ರಿಟಿಶ್ ಸೈನ್ಯ ಸೋತಿತು.

ಗುಂಡುಗಳ ಗರ್ಜನೆ ನಡೆದಿದ್ದಂತೆ ನಕಾಮು ಗುರುಂಗ ಮತ್ತು ೧೬ ಸೈನಿಕರು ಅಡವಿಬಿದ್ದು ಪಲಾಯನ ಹೇಳಿದರು. ಅಡವಿಯಲ್ಲಿ ಅವರಿಗೆ ಒಬ್ಬ ಬ್ರಿಟಿಶ್ ಮೇಜರ ಮತ್ತು ೪೦ ಬ್ರಿಟಿಶ ಸೈನಿಕರು ಭೆಟ್ಟಿಯಾದರು. ಆಹಾರವಿಲ್ಲದೆ ಅವರು ಜಿಗಳೆಗಳಿಂದ ತುಂಬಿದ್ದ ಆ ಅಡವಿಯಲ್ಲಿ ಹಾಗೂ ಹೀಗೂ ಪ್ರವಾಸ ಮಾಡಿ ಏಳನೆಯ ದಿನ ಬ್ರಿಟಿಶ್ ಸೈನ್ಯಠಾಣೆಯೊಂದನ್ನು ಮುಟ್ಟಿದರು. ಅಲ್ಲಿಂದ ನಕಾಮು ಗುರುಂಗ ಮತ್ತು ಅವನ ಜೊತೆಗಾರರನ್ನು ಅಳಿದುಳಿದಿದ್ದ ಅವನ ತುಕಡಿಯೊಡನೆ ಕೂಡಿಕೊಳ್ಳಲೆಂದು ಅದಿದ್ದಲ್ಲಿಗೆ ಕಳಿಸಿಕೊಡಲಾಯಿತು.

ಆಸುನ್ ಕಾಳಗದ ಸಮಯಕ್ಕೆ ೬೫೦ ಜನರಿದ್ದ ಈ ತುಕಡಿಯಲ್ಲೀಗ ೨೫೦ ಜನ ಮಾತ್ರ ಇದ್ದರು. ನಕಾಮು ಗುರುಂಗನಿಗೆ ಈಗ ಬಡತಿ ಸಿಕ್ಕು ಆತ ಹವಾಲ್ದಾರನಾದ. ಶತ್ರುಗಳ ಬಲ ಅತ್ಯಧಿಕವಾಗಿದ್ದರೂ ಈ ಜನರು ಶೌರ್ಯದಿಂದ ಕಾದುತ್ತಲಿದ್ದರು. ಆದರೆ ಶತ್ರುಗಳ ಆಕ್ರಮಣದ ರಭಸವನ್ನು ತಾಳಲಾರದೆ ಇವರು ಡಿಪೋವನ್ನು ಖಾಲಿಮಾಡಿ ಸ್ಲಿಮ್ ನದಿಯುತ್ತ ಓಡಬೇಕಾಯಿತು. ಮರುದಿನ ಬೆಳಗಾಗುವದರೊಳಗೆ ಪುನಃ ಇವರು ಜಪಾನಿ ಸೈನ್ಯದ ಆಕ್ರಮಣಕ್ಕೆ ಸಿಲುಕಿದರು. ಒಂದೇ ಒಂದು ತಿಂಗಳೊಳಗಾಗಿ ಎರಡನೆಯ ಸಲ ನಕಾಮ್ ಗುರುಂಗ ಆತ್ಮಸಂರಕ್ಷಣೆಗಾಗಿ ಅಡವಿ ಬೀಳಬೇಕಾಯಿತು. ಒಬ್ಬ ಗುರ್ಖಾ ಸುಭೇದಾರ, ನಕಾಮು ಗುರುಂಗ ಮತ್ತು ೫೬ ಸೈನಿಕರು ತಮ್ಮ ಸೈನ್ಯದ ಮುಖ್ಯ ಠಾಣೆಯೊಂದನ್ನು ಸೇರಿಕೊಳ್ಳುವ ಹಂಬಲದಿಂದ ಅಡವಿಯಲ್ಲಿ ಮಾರ್ಗ ಮಾಡಿಕೊಳ್ಳುತ್ತ ನಡೆಯತೊಡಗಿದರು.

ಅಡವಿಯಲ್ಲಿ ಅವರಿಗೊಬ್ಬ ಚೀನಿ ಮನುಷ್ಯ ಭೆಟ್ಟಿಯಾದ. ಸಿಂಗಾಪುರ ಜಪಾನಿಗಳ ಕೈವಶವಾಗಿದೆಯೆಂದಾತ ತಿಳಿಸಿದ. ಅವನಿಂದ ಈ ಗುರ್ಖಾ ಸೈನಿಕರು ಏಳು ಮಣ ಅಕ್ಕಿಯನ್ನು ಕೊಂಡರು. ಈ ಚೀನಿ ಮನುಷ್ಯ ಎಲ್ಲಿಯಾದರೂ ತಮ್ಮ ಸುಳಿವನ್ನು ಶತ್ರುಗಳಿಗೆ ತಿಳಿಸಿಯಾನೆಂಬ ಭಯದಿಂದ ಅವರು ಅಲ್ಲಿಂದ ಮುಂದಕ್ಕೆ ಹೊರಟರು.

ಮತ್ತೆ ಎರಡು ದಿನಗಳ ಪ್ರಯಾಣದ ನಂತರ ನಕಾಮನಿಗೆ ಜ್ವರ ಬಂತು. ಮತ್ತೂ ಎರಡು ದಿನಗಳ ಪ್ರಯಾಣದ ನಂತರ ಜಪಾನಿಗಳ ಕೈಯಿಂದ ಪಾರಾಗಬೇಕಾದರೆ ನಕಾಮನನ್ನು ಅಲ್ಲಿಯೇ ಬಿಟ್ಟುಕೊಟ್ಟು ಹೋಗದೆ ನಿರ್ವಾಹವಿಲ್ಲ ಎಂದು ಆ ಗುರ್ಖಾ ತಂಡಕ್ಕೆ ಅನಿಸಿತು. ಜ್ವರಪೀಡಿತನಾದ ನಕಾಮ ಒಂದು ಹೆಜ್ಜೆ ಕೂಡ ಮುಂದಡಿಯಿಡಲಾರದವನಾಗಿದ್ದ.

ನಕಾಮನ ಸಂಗಡಿಗರು ಬಿದಿರುಗಳ ಗುಡಿಸಲೊಂದನ್ನು ಕಟ್ಟಿ ಅದನ್ನು ಟೊಂಗೆಗಳಿಂದ ಹೊದಿಸಿದರು. ಒಂದು ಗೋಣಿಚೀಲವನ್ನು ಹಾಸಿ ನಕಾಮನನ್ನು ಮಲಗಿಸಿ ಮೇಲೊಂದು ಚೀಲವನ್ನು ಹೊದಿಸಿದರು. ಅವನಿಗೆ ಮೂರು ತಿಂಗಳುಗಳ ವರೆಗೆ ಸಾಲುವಷ್ಟು ಅಕ್ಕಿಯನ್ನೂ ನೀರು ತುಂಬಿಕೊಳ್ಳಲು ಎರಡು ಚಿಮಣಿ ಎಣ್ಣೆ ಡಬ್ಬಿಗಳನ್ನೂ ಒಂದು ಚಹದ ಡಬ್ಬಿಯನ್ನೂ ೨೪ ಪೌಂಡು ಗೆಣಸನ್ನೂ ಎರಡು ಕಡ್ಡಿಪೆಟ್ಟಿಗೆಗಳನ್ನೂ ಅವನ ಬಳಿ ಇಟ್ಟರು. ತಾವು ಸೈನ್ಯಠಾಣ್ಯವನ್ನು ತಲುಪಿದೊಡನೆ ಸಹಾಯಕ್ಕಾಗಿ ಜನರನ್ನು ಕಳಿಸುವೆವೆಂದು ಹೇಳಿ ನಕಾಮನನ್ನು ಬೀಳ್ಕೊಂಡು ಹೊರಟರು.

೩

ಗೋಣಿಚೀಲದ ಮೇಲೆ ಮಲಗಿಕೊಂಡು

ನಕಾಮು ಸುತ್ತಲೂ ನೋಡಿದನು. ದೃಷ್ಟಿ ಹಾಯಿಸಿದತ್ತೆಲ್ಲ ದಟ್ಟಡವಿ ಕಾಣುತ್ತಿತ್ತು. ಅವನ ಬಳಿ ಅವನ ಕುಕ್ರಿ (ಚಿಕ್ಕ ಖಡ್ಗ) ಯನ್ನು ಬಿಟ್ಟರೆ ಮತ್ತಾವ ಆಯುಧವೂ ಇರಲಿಲ್ಲ. ಇನ್ನೆಂಟು ವರ್ಷಗಳ ವರೆಗೆ ಇದೇ ತನ್ನ ಮನೆಯಾಗುವದು ಎಂಬ ಕಲ್ಪನೆ ಆಗ ನಕಾಮುನಿಗೆ ಸ್ವಪ್ನದಲ್ಲಿಯಾದರೂ ಸುಳಿಯುವದು ಸಾಧ್ಯವಿರಲಿಲ್ಲ.

ಮಲೇರಿಯ ಜ್ವರದಿಂದ ಬಳಲುತ್ತಿದ್ದ ನಕಾಮುನಿಗೆ ಎರಡು ವಾರಗಳ ವರೆಗೆ ಮೇಲಕ್ಕೇಳಲು ಕೂಡ ಆಗಲಿಲ್ಲ. ಜ್ವರ ಇಳಿದು ಮೈ ಹಗುರಾದ ಬಳಿಕ ಆತ ದಿನ ಬಿಟ್ಟು ದಿನಕ್ಕೊಮ್ಮೆ ಅನ್ನ ಬೇಯಿಸಿಕೊಳ್ಳತೊಡಗಿದ. ಆತ ಗುಡಿಸಲು ಬಿಟ್ಟು ಹೊರಗೆ ಬಂದು ನೋಡಿದಾಗ ತನ್ನ ಗುಡಿಸಲು ಅಡವಿಯ ಮಧ್ಯದಲ್ಲಿದೆ, ಸೂರ್ಯನು ಕಣ್ಣಿಗೆ ಬೀಳದಷ್ಟು ದಟ್ಟವಾದ ಕಾಡಿನ ತಾಣ ತಾನಿರುವದು ಎಂಬುದು ಆತನಿಗೆ ಸ್ಪಷ್ಟವಾಯಿತು. ಯಾವ ಕಡೆಯಲ್ಲೂ ಕಾಲು ಹಾದಿಯ ಗುರುತಿರಲಿಲ್ಲ. ಗುಡಿಸಲಿನಿಂದ ಸುಮಾರು ೨ ಫರ್ಲಾಂಗ್ ದೂರದಲ್ಲಿ ಚಿಕ್ಕ ಹಳ್ಳವೊಂದು ಹರಿಯುತ್ತಿತ್ತು.

ಹೆಚ್ಚು ಕಡಿಮೆ ಯಾವಾಗಲೂ ಅಲ್ಲಿ ಮಳೆ ಬೀಳುತ್ತಿತ್ತು. ಥಂಡಿ ವಿಪರೀತವಾಗಿತ್ತು. ಬೇಸಿಗೆ ಯಾವದು, ಚಳಿಗಾಲ ಯಾವದು, ಮಳೆಗಾಲ ಯಾವದು ಒಂದೂ ಕಲ್ಪನೆಗೆ ಬರುತ್ತಿರಲಿಲ್ಲ. ನಕಾಮು ತನ್ನ ಗುಡಿಸಲನ್ನು ಸಾಧ್ಯವಾದ ಮಟ್ಟಿಗೂ ದುರಸ್ತಿ ಮಾಡಿಕೊಂಡ. ಗಿಡಗಳನ್ನೇರಿದರೆ ಕೂಡ ಸಾಕಷ್ಟು ದೂರ ಕಾಣಿಸದಷ್ಟು ಅಡವಿ ದಟ್ಟವಾಗಿದ್ದುದರಿಂದ ತಾನಿರುವ ತಾಣದ ಅಂದಾಜನ್ನು ಮಾಡಿಕೊಳ್ಳುವ ಪ್ರಯತ್ನವನ್ನೂ ನಕಾಮು ಬಿಟ್ಟುಕೊಟ್ಟ.

ತನ್ನನ್ನು ಕರೆದೊಯ್ಯಲು ಬರುವದಾಗಿ ಹೇಳಿದ ತನ್ನ ಸಂಗಡಿಗರ ಆಶ್ವಾಸನದ ನೆನಪು ಅವನಿಗೆ ಧೈರ್ಯ ಕೊಡುತ್ತಿತ್ತು. ಆಶೆಯನ್ನು ಬೆಳೆಸುತ್ತಿತ್ತು. ತನ್ನನ್ನು ಹುಡುಕಿಕೊಂಡು ಅವರು ಬರಲಿರುವಾಗ ತಾನಾಗಿಯೇ ದಾರಿ ಹುಡುಕಿಕೊಂಡು ಹೋಗುವದೇಕೆ ಎಂದು ನಕಾಮು ಆ ಹವ್ಯಾಸಕ್ಕೆ ಹೋಗಲಿಲ್ಲ.

ದಿನಗಳೆದಂತೆ ಹೊಸ ಭೀತಿಯೊಂದು ಅವನಿಗುಂಟಾಯಿತು. ಅವನ ಬಳಿಯಿದ್ದ ಆಹಾರದ ಬಹುಭಾಗ ಕರಗಿಹೋಗಿತ್ತು. ಆತ ಯೋಚಿಸಿ ಕಾರ್ಯೋನ್ಮುಖನಾದ. ಕುಕ್ರಿಯಿಂದ ಗುಡಿಸಲಿನ ಸುತ್ತಲಿನ ಗಿಡಗಂಟೆಗಳನ್ನು ಸವರಿ ಒಂದಿಷ್ಟು ಬಯಲು ಜಾಗವನ್ನು ತಯಾರಿಸಿ ಅಲ್ಲಿ ಗೆಣಸನ್ನು ನೆಟ್ಟ. ನಾಲ್ಕೇ ದಿನಗಳಲ್ಲಿ ಅವಕ್ಕೆ ಮೊಳಕೆಯೊಡೆದದ್ದನ್ನು ಕಂಡು ಅವನಿಗೆ ಅತ್ಯಾನಂದವಾಯಿತು. ಪ್ರತಿ ಮೂರು ತಿಂಗಳಿಗೊಮ್ಮೆ ಮೂರು ಮಣ ಗೆಣಸು ಕೈಗೆ ಬರುವ ಹಾಗೆ ಅವನು ತನ್ನ ಗೆಣಸಿನ ಬೆಳೆಯ ಕ್ರಮವನ್ನು ರೂಪಿಸಿಕೊಂಡ. ಆದರೆ ಇಲಿಗಳು ಅವನ ಗೆಣಸನ್ನು ತಿಂದು ಹಾಳು ಮಾಡುತ್ತಿದ್ದವು. ನಕಾಮು ಎಲೆಗಳು ಮತ್ತು ಚಿಕ್ಕ ಕಡ್ಡಿಗಳ ಸಹಾಯದಿಂದ ಒಂದು ಬಗೆಯ ಇಲಿ ಪಂಜರವನ್ನು ತಯಾರಿಸಿದ. ಇಲಿಗಳ ಹಾವಳಿಯನ್ನು ಕಡಿಮೆ ಮಾಡಿಕೊಂಡ.

ಗುಡಿಸಲಿನ ಬಳಿ ಇದ್ದ ಹಳ್ಳದಲ್ಲಿ ನಾನಾ ಬಗೆಯ ಮೀನುಗಳಿದ್ದವು. ಮೀನುಗಳೂ ಇದ್ದರೆ ತನ್ನ ಸಾದಾ ಊಟಕ್ಕೆ ಇನ್ನಿಷ್ಟು ರುಚಿ ಒದಗಬಹುದೆಂದು ನಕಾಮು ಯೋಚಿಸಿದ. ತಾನು ಬಾಲ್ಯದಲ್ಲಿ ಮೀನುಗಳನ್ನು ಹಿಡಿಯುತ್ತಿದ್ದ ರೀತಿ ಅವನ ನೆನಪಿಗೆ ಬಂತು. ನೇಪಾಳದಲ್ಲಿ ಮೀನು ಹಿಡಿಯುವ ವಿಶಿಷ್ಟ ಕ್ರಮವೊಂದಿದೆ. ಹಳ್ಳವನ್ನು ಒಂದೆಡೆ ತಿರುಗಿಸಿದ ಬಳಿಕ ಆ ತಿರುವಿನ ತುದಿಯಲ್ಲಿ ಟೊಂಗೆಗಳನ್ನು ನಡುತ್ತಾರೆ. ಆ ಟೊಂಗೆಗಳ ನಡುವಿಂದ ನೀರು ಹಾಯ್ದು ಹೋಗುವುದಾದರೂ ಮಣ್ಣು, ಸೊಪ್ಪುಸದೆ ಮುಂತಾದ್ದು ಈಚೆಗೇ ತಡೆದುನಿಲ್ಲುತ್ತದೆ. ನೀರಿನ ಜೊತೆ ಬಂದ ಮೀನುಗಳನ್ನು ಅಲ್ಲಿ ಕೈಯಿಂದಲೇ ಹಿಡಿಯುತ್ತಾರೆ. ನಕಾಮು ಇದೇ ಪದ್ಧತಿಯನ್ನನುಸರಿಸಿ ಮೀನುಗಳನ್ನು ಹಿಡಿಯತೊಡಗಿದ. ಪ್ರಸಂಗ ಬಂದಾಗ ಇರಲಿ ಎಂದು ಕೆಲ ಮೀನುಗಳನ್ನು ಒಣಗಿಸಿಟ್ಟುಕೊಂಡ.

ಇಷ್ಟರಲ್ಲಿ ಕಾಡುಪ್ರಾಣಿಗಳು ಈತನ ವಾಸನೆ

ಹಿಡಿದಿದ್ದವು. ಕಾಡು ಹಂದಿಗಳು, ಮುಳ್ಳು ಹಕ್ಕಿಗಳು ಅವನ ಗುಡಸಲಿನ ಸುತ್ತ ಸುಳಿದಾಡಲು ಆರಂಭಿಸಿದವು. ನಕಾಮು ಗುಡಿಸಲನ್ನು ಬಿಟ್ಟು ಬಹಳ ದೂರ ಹೋಗುವದಾಗಲಿ, ಬಹಳ ಹೊತ್ತು ಹೊರಗಿರುವದಾಗಲಿ ಗಂಡಾಂತರದ್ದಾಯಿತು. ಕಾಡು ಹಂದಿಗಳನ್ನು ಕಂಡಾಗ ಅವುಗಳ ಮಾಂಸದ ರುಚಿಯನ್ನು ನೆನೆಸಿ ಅವನ ನಾಲಿಗೆ ನೀರೂರಿತು. ಮಲಯಾ ನಿವಾಸಿಗಳು ಕಾಡುಹಂದಿಯನ್ನು ಹಿಡಿಯುವಂತೆ ತಾನು ಹಿಡಿಯಬೇಕು ಎಂದು ನಕಾಮು ಯೋಚಿಸಿದ. ಗುಡಿಸಲಿನ ಸಮೀಪದಲ್ಲಿ ಹಂದಿ ಹಿಡಿಯುವಷ್ಟು ದೊಡ್ಡ ತಗ್ಗುಗಳನ್ನು ತೋಡಿ ಅವುಗಳ ಮೇಲೆ ಸುಲಭದಲ್ಲಿ ಮುರಿದು ಬೀಳುವಂಥ ಒಣಟೊಂಗೆಗಳನ್ನು ಹಾಸಿಟ್ಟ. ಅವನ ಈ ಬಲೆಗೆ ಮೊದಲು ಬಲಿಯಾದದ್ದು ಒಂದು ಹಂದಿಯ ಮರಿ. ಆತ ಅದರ ಮಾಂಸವನ್ನು ಬೆಂಕಿಯಲ್ಲಿ ಹುರಿದು ತಿಂದ. ತನ್ನ ಎಂಟು ವರ್ಷದ ಈ ಏಕಾಂಗಿ ಜೀವನದಲ್ಲಿ ನಕಾಮು ೩೩ ಹಂದಿಗಳು, ೧೯ ಮುಳ್ಳು ಹಕ್ಕಿಗಳು, ನವಿಲು, ಚಕೋರ ಮುಂತಾದ ೩೫೩ ಹಕ್ಕಿಗಳು, ೧೩೦ ಮೊಲಗಳು ಮತ್ತು ಅಸಂಖ್ಯಾತ ಮೀನುಗಳನ್ನು ಬೇಟೆಯಾಡಿದ.

ಎಂಟು ವರ್ಷಗಳ ನಂತರ ಅಜ್ಞಾತವಾಸ ಮುಗಿಯಿತು. ಒಂದು ದಿನ ಮುಂಜಾನೆ ಆತ ಬಾಗಿಲನ್ನು ತೆರೆದುಕೊಂಡು ಗುಡಿಸಲಿನಲ್ಲಿ ಕುಳಿತಿದ್ದ. ಅಕಸ್ಮಾತ್ತಾಗಿ ಮೂವರು ಸೈನಿಕರು ಅವನೆದುರು ಧುತ್ತೆಂದು ನಿಂತರು. ಒಬ್ಬನ ಕೈಯಲ್ಲಿ ಬ್ರೆನ್‌ಗನ್, ಇನ್ನೊಬ್ಬರ ಕೈಯಲ್ಲಿ ಸ್ಟೆನ್‌ಗನ್, ಮೂರನೆಯವನ ಕೈಯಲ್ಲಿ ರಾಯಫಲ್ ಇತ್ತು. ಜಪಾನಿಗಳೇ ಬಂದರೆಂದು ಭಾವಿಸಿ ತಾನು ಕಂಗಾಲಾದನೆಂದೂ ಅವರು ಕೇಳಿದ್ದಕ್ಕೆ ಉತ್ತರ ಕೊಡುವದೂ ತನ್ನಿಂದಾಗಲಿಲ್ಲವೆಂದೂ ನಕಾಮು ಈ ಭೆಟ್ಟಿಯ ವಿಷಯ ಹೇಳುವಾಗ ಅನ್ನುತ್ತಾನೆ.

ಬಂದ ಸೈನಿಕರು ಕಾಗದ ಪತ್ರಗಳನ್ನು ತೋರಿಸಲು ಹೇಳಿದರು. ನಕಾಮು ಮಾತಾಡದ್ದನ್ನು ಕಂಡು ಅವರು ಅವನ ಕೈಗಳನ್ನು ಅವನ ಬೆನ್ನಹಿಂದೆ ಕಟ್ಟಿ ನಡೆಸಿಕೊಂಡು ಹೊರಟರು. ಆ ಸೈನಿಕರು ತಮ್ಮ ತಮ್ಮಲ್ಲಿಯೇ ಗುರ್ಖಾಲಿ ಭಾಷೆಯಲ್ಲಿ "ಈತನ ಬಳಿ ಪಾಸು ಇಲ್ಲ. ಇವನನ್ನು ಗುಂಡಿಕ್ಕಬೇಕು" ಎಂದು ಮಾತಾಡಿಕೊಂಡದ್ದನ್ನು ನಕಾಮು ಕೇಳಿದ. ಇವನೊಬ್ಬ ಕಮ್ಯುನಿಸ್ಟ್ ಸಹಾಯಕ ಎಂದು ಅವರು ತಿಳಿದುಕೊಂಡಂತಿತ್ತು. ನಕಾಮು ಗುರ್ಖಾಲಿ ಭಾಷೆಯಲ್ಲಿ ಅವರೊಂದಿಗೆ ಮಾತಾಡತೊಡಗಿದ. ಆ ಸೈನಿಕರಿಗೆ ಆಶ್ಚರ್ಯವಾಯಿತು. ನಕಾಮು ಅವರನ್ನು ಬಹು ಕೇಳಿಕೊಂಡಮೇಲೆ ಅವರು ಅವನ ಕೈಗಳನ್ನು ಬಿಚ್ಚಿ ಅವನನ್ನು ತಮ್ಮ ಠಾಣೆಗೆ ಕರೆದೊಯ್ದರು. ಹಾದಿಯಲ್ಲಿ ಯುದ್ಧ ಮುಗಿದದ್ದು, ಭಾರತ ಸ್ವತಂತ್ರವಾದದ್ದು, ತನ್ನ ತುಕುಡಿ ಭಾರತದ ಸೈನ್ಯದ ಅಂಗವಾದದ್ದು, ತನ್ನನ್ನು ಕಂಡುಹಿಡಿದವರು ಬ್ರಿಟಿಶ ಸೈನ್ಯದ ಗುರ್ಖಾ ಬ್ರಿಗೇಡಿನವರಿದ್ದು ಅವರು ಕಮ್ಯುನಿಸ್ಟರ ಹಾವಳಿ ತಡೆಗಟ್ಟಲೆಂದು ಮಲಯಾಕ್ಕೆ ಬಂದಿದ್ದರೆಂದು, ಪ್ರತಿಯೊಬ್ಬನ ಬಳಿಯಲ್ಲೂ ಪಾಸು ಇರುವದು ಅಗತ್ಯದ್ದಾಗಿದೆಯೆಂದು ಅವನಿಗೆ ಗೊತ್ತಾಯಿತು.

ಠಾಣೆಯಲ್ಲಿ ಅವನನ್ನು ಗೌರವದಿಂದ ನಡೆಸಿಕೊಂಡರು. ಹತ್ತು ದಿನಗಳ ನಂತರ ಅವನನ್ನು ಕುಲಾಬಾಂಗ ಠಾಣೆಗೆ ಕಳಿಸಿದರು. ಆರು ವಾರಗಳ ನಂತರ ಅವನನ್ನು ಭಾರತಕ್ಕೆ ಕಳಿಸಿದರು. ಒಂಭತ್ತು ವರ್ಷಗಳ ನಂತರ ಭಾರತಕ್ಕೆ ಮರಳಿ ಬಂದ ನಕಾಮು ಮುಂದೆ ನಾಲ್ಕು ವರ್ಷಗಳವರೆಗೆ ಸೈನ್ಯದಲ್ಲಿದ್ದು ೧೯೫೩ ರಲ್ಲಿ ೨೮ ವರ್ಷಗಳ ಚಾಕರಿಯ ನಂತರ ನಿವೃತ್ತನಾದ.

ಹಳ್ಳಿಯಲ್ಲಿರುವ ನಕಾಮು ಈಗ ಅಪ್ರಸಿದ್ಧ ಮನುಷ್ಯ. ಅವನ ಎಂಟು ವರ್ಷಗಳ ಅಜ್ಞಾತವಾಸದ ಅನುಭವ ಸೈನ್ಯದ ಇತಿಹಾಸದಲ್ಲಿ ಒಂದು ರೋಮಾಂಚಕಾರಿ ಪ್ರಕರಣವಾಗುವಂತಿರುವದರಿಂದ ಅವುಗಳನ್ನು ಬರೆದುಕೊಳ್ಳುವ ಪ್ರಯತ್ನ ಇತ್ತೀಚೆಗೆ ನಡೆದಿದೆ. ಮತ್ತೇನಲ್ಲದಿದ್ದರೂ ಎಂಥ ಕಠಿಣ ಪರಿಸ್ಥಿತಿಯಲ್ಲಾದರೂ ಧೈರ್ಯ ಮತ್ತು ಕಲ್ಪಕತೆಗಳಿದ್ದರೆ ಮನುಷ್ಯ ಬದುಕಬಲ್ಲ ಎಂಬುದಕ್ಕೆ ನಕಾಮು ಗುರುಂಗನ ಕಥೆ ಒಂದು ಉತ್ತಮ ಉದಾಹರಣೆಯಾಗಿದೆ.

**ಹುಟ್ಟಿದಂದಿನಿಂದ ಬಂದ ಪ್ರತಿಯೊಂದು ಅನುಭವದ**
**ಯಥಾಪ್ರತಿ ಇಲ್ಲಿ ಕಾದಿಡಲ್ಪಡುತ್ತದೆ !**

# ಇದು ನಿಮ್ಮ ಮಿದುಳು !

**ಪಾ. ವೆಂ. ಆಚಾರ್ಯ**

ಮಾನವನ ಮಿದುಳು ಸೃಷ್ಟಿಯಲ್ಲೆಲ್ಲ ಅತ್ಯಂತ ಅಪೂರ್ವವಾದ ಸಜೀವ ಪದಾರ್ಥವೆನ್ನಬಹುದು. ಸಾಮಾನ್ಯ ಗಂಡಸಿನ ಮಿದುಳಿನ ತೂಕ ಸುಮಾರು ೧೨೦ ತೊಲೆ. ಹೆಂಗಸಿನ ಮಿದುಳಿನ ತೂಕ ಇದಕ್ಕಿಂತ ಸ್ವಲ್ಪ ಕಡಿಮೆ—ಆದರೆ ಅದರಿಂದ ಅವಳ ಬುದ್ಧಿಶಕ್ತಿಗೂ ಗಂಡಸಿನದಕ್ಕೂ ವಿಶೇಷ ಅಂತರವುಂಟಾದಂತೆ ಕಾಣುವುದಿಲ್ಲ. ಮಿದುಳಿನ ಘನ ಪರಿಮಾಣ ಸುಮಾರು ೧,೪೦೦ ಘನ ಸೆಂಟಿಮಿಟರ್. ಇಷ್ಟು ಚಿಕ್ಕ ಮಿದುಳು ಅಸಂಖ್ಯ ಕೋಟಿ ತಾರಾಗಣಪರಿವೃತವಾದ ವಿಶ್ವವನ್ನು ಅರ್ಥ ಮಾಡಿಕೊಳ್ಳಲು ಯಶಸ್ವಿಯಾಗಿ ಹೆಣಗುತ್ತಿದೆಯೆಂದರೆ ಅದು ವಿಸ್ಮಯಜನಕವಲ್ಲದೆ ಮತ್ತೇನು ?

ವಿಶ್ವದೊಡನೆ ಹೋಲಿಸಿದರೆ ನಮ್ಮ ಮಿದುಳು ಇಷ್ಟು ಚಿಕ್ಕದೆನಿಸಿದರೂ ಜೀವಲೋಕದಲ್ಲಿ ಅತಿ ದೊಡ್ಡದೇ. ಮನುಷ್ಯನನ್ನು ಬಿಟ್ಟರೆ ಪ್ರಾಣಿಗಳಲ್ಲೆಲ್ಲ ಅತಿ ಚುರುಕು ಬುದ್ಧಿಯುಳ್ಳ ಚಿಂಪಾಂಜಿ ವಾನರನ ಮಿದುಳು ಸುಮಾರು ೪೦೦ ಘನ ಸೆಂಟಿಮಿಟರಿನಷ್ಟು ಇದೆ. ಬಾಲವಿಲ್ಲದ ಕೋತಿಗಳ ಮಿದುಳಿನ ಪರಿಮಾಣ ೩೨೫ರಿಂದ ೬೫೦ ಘನ ಸೆಂಟಿಮಿಟರಿನಷ್ಟಿರುತ್ತದೆ. ಉತ್ಕ್ರಾಂತಿಯ ಕೆಳಮಟ್ಟಗಳಲ್ಲಿರುವ ಕೆಲ ಜಂತುಗಳಿಗೆ ಮಿದುಳೇ ಇಲ್ಲವೆನ್ನಬಹುದು.

ಮಾನವನ ಮಿದುಳನ್ನು ಒಂದು ಅಗಾಧ ಟೆಲಿಫೋನ್ ಎಕ್ಸ್‌ಚೇಂಜಿಗೆ ಹೋಲಿಸಲಾಗಿದೆ.




ಪ್ರಧಾನ ಮಸ್ತಿಷ್ಕದ ಪಾರ್ಶ್ವದರ್ಶನ

೧. ಮುಂಭಾಗ ೨. ಶ್ರವಣ ವಿಭಾಗ ೩. ದೃಶ್ಯಾನುಭವ ಕೇಂದ್ರ ೪. ದೃಶ್ಯಾನುಭವ ವಿಭಾಗ ೫ ಶ್ರವಣ ಕೇಂದ್ರ ೬. ಪಾರ್ಶ್ವ ನಿರಿಗೆ ೭. ಮಧ್ಯ ನಿರಿಗೆ ೮. ಚಲನ ಪ್ರೇರಣ ಕೇಂದ್ರ ೯. ಸ್ಪರ್ಶ. ವೇದನೆ, ಉಷ್ಣತೆ ಮತ್ತು ನಿಲುವಿನ ಪ್ರಜ್ಞೆಗಳ ವಿಭಾಗ.

ಅದರಲ್ಲಿ ಸುಮಾರು ೧೦೦೦ ಕೋಟಿ ಜೀವಕೋಶಗಳಿದ್ದು ಪ್ರತಿಯೊಂದು ಕೋಶವೂ ಒಂದು ಟೆಲಿಫೋನಿನ ಸ್ವಿಚ್ಚಿನಂತೆ ಕೆಲಸ ಮಾಡುತ್ತದೆ. ಅದು ನಿರಂತರವಾಗಿ ಪ್ರಶ್ನೆಗಳನ್ನೂ ಉತ್ತರಗಳನ್ನೂ ಪ್ರಾರ್ಥನೆಗಳನ್ನೂ ಆಜ್ಞೆಗಳನ್ನೂ ಕಳಿಸುತ್ತಿರುತ್ತದೆ.

ಇವೆಲ್ಲ ಕೆಲಸಗಳೂ ಟೆಲಿಫೋನಿನಲ್ಲಿ ಆಗುವಂತೆ ವಿದ್ಯುತ್ತಿನ ಸಹಾಯದಿಂದಲೇ ಆಗುತ್ತವೆ. ವಾಸ್ತವಿಕವಾಗಿ ನಮ್ಮ ಮಿದುಳು, ನರಗಳು ಮತ್ತು ಬೆನ್ನುಹುರಿಗಳನ್ನೊಳಗೊಂಡ ನರಮಂಡ

ಲವು ಸ್ವತಃ ಒಂದು ಚಿಕ್ಕ ವಿದ್ಯುದುತ್ಪಾದಕ ಬ್ಯಾಟರಿಯಂತಿದೆ. ಅದು ಉತ್ಪಾದಿಸುವ ೧।೧೦ ವೋಲ್ಟಿನಷ್ಟು ವಿದ್ಯುತ್ತಿನಿಂದಲೇ ಅದರ ಕೆಲಸ ವೆಲ್ಲ ಸಾಗುತ್ತದೆ. ಈ ವಿದ್ಯುತ್ತು ಹುಟ್ಟಲು ಕಾರಣವಾದ ರಾಸಾಯನಿಕ ಪದಾರ್ಥಗಳೆಂದರೆ ಶರೀರದಲ್ಲಿರುವ ಸೋಡಿಯಂ ಮತ್ತು ಪೊಟಾ-ಶಿಯಂ. ನೀರು ಮುಂತಾದ ದ್ರವಗಳಲ್ಲಿ ಮುಳುಗಿರುವ ನರಗಳ ಪರಿಯಲ್ಲಿ ಈ ಎರಡು ಪದಾರ್ಥಗಳ ಕ್ರಿಯೆಯಿಂದ ವಿದ್ಯುತ್ತಿನ ಉತ್ಪತ್ತಿಯಾಗುತ್ತದೆ. ನರದ ಒಂದು ಅಂಶಕ್ಕೆ ವಿದ್ಯುತ್ ಪ್ರೇರಣೆ ದೊರೆತೊಡನೆ ಅದು ತನ್ನ ಸಮೀಪದ ನರದ ಅಂಶದಲ್ಲಿ ಪ್ರತಿಕ್ರಿಯೆಯನ್ನು ಪ್ರಚೋದಿಸುತ್ತದೆ. ಹೀಗೆ ಪ್ರೇರಣೆಗಳು ಮಿದುಳಿನ ತುಂಬೆಲ್ಲ ಮಿಂಚುತ್ತ ಸಂದೇಶಗಳನ್ನು ಸಾಗಿಸುತ್ತವೆ.

ವಿಜ್ಞಾನಿಗಳಿಗೆ ಮಿದುಳಿನ ಸೂಕ್ಷ್ಮ ಕ್ರಿಯೆಯ ಗುಟ್ಟನ್ನು ಇನ್ನೂ ಪೂರ್ತಿ ತಿಳಿದುಕೊಳ್ಳುವುದು ಸಾಧ್ಯವಾಗಿಲ್ಲವಾದರೂ ಅವರು ಅದರ ರಚನೆಯನ್ನು ಕುರಿತು ಸಾಕಷ್ಟು ತಿಳಿದುಕೊಂಡಿದ್ದಾರೆ. ಮಿದುಳನ್ನು ಅವರು ಮುಖ್ಯವಾಗಿ ಮೂರು ಭಾಗಗಳಾಗಿ ಮಾಡಿದ್ದಾರೆ. ಪ್ರತಿಯೊಂದೂ ನಮ್ಮ ಬಾಳುವೆಯ ಒಂದೊಂದು ವಿಭಾಗವನ್ನು ನೋಡಿಕೊಳ್ಳುತ್ತದೆ.

ಮೆಡಲಾ ಅಥವಾ ಮೂಲ ಮಿದುಳು ಎಂಬುದು ಮಿದುಳಿನ ಮಧ್ಯದಲ್ಲಿರುವ ಭಾಗ. ಇದರ ಗಾತ್ರ ಒಂದು ಮುಷ್ಟಿಗಿಂತಲೂ ಕಡಿಮೆ. ಅದರ ಕಾರ್ಯ ಶರೀರದ ಪ್ರಾಥಮಿಕ ಅಪೇಕ್ಷೆಗಳ ಪ್ರಚೋದನೆ ಮತ್ತು ಪೂರೈಕೆ. ನಮಗೆ ಹಸಿವೆಯಾಗಿಸುವುದೂ ಅದನ್ನು ನೀಗಿಸಿಕೊಳ್ಳಲು ಬೇಕಾದ ಕಾರ್ಯಕ್ಕೆ ನಮ್ಮನ್ನು ತೊಡಗಿಸುವುದೂ ಇದೇ. ಇದಲ್ಲದೆ ನಮ್ಮ ಉಸಿರಾಟ, ಹೃದಯ ಕ್ರಿಯೆ ಮೊದಲಾದ ಪ್ರಾಮುಖ್ಯ ಕೆಲಸಗಳು ಇದರ ಅಧೀನದಲ್ಲಿವೆ.

ಮೂಲ ಮಿದುಳಿನ ಮೇಲೆಲ್ಲ ಹಬ್ಬಿರುವ ಭಾಗ ಪ್ರಧಾನ ಮಸ್ತಿಷ್ಕ ಅಥವಾ ಮುಖ್ಯ ಮಿದುಳು (ಸೆರಬ್ರಂ). ಟಗರಿನ ಕೋಡಿನಂತೆ ಸುರುಳಿಸುರುಳಿಯಾಗಿರುವ ಇದರ ಮೇಲೆ ಬೂದು ಬಣ್ಣದ ಪದಾರ್ಥದ ಆವರಣವಿದೆ. ನಮ್ಮ ಮಿದುಳಿನ ವಿಸ್ತಾರದಲ್ಲಿ ಇದರ ಭಾಗವೇ ಹೆಚ್ಚು. ನಮ್ಮ ಪ್ರಜ್ಞೆ, ನಮ್ಮ ನೆನಪುಗಳು, ನಮ್ಮ ವಿಚಾರ ಶಕ್ತಿ, ಒಂದೇ ಮಾತಿನಲ್ಲಿ ನಮ್ಮ ವ್ಯಕ್ತಿತ್ವವೆಲ್ಲ ಈ ೧೨೦ ತೊಲೆಗಿಂತಲೂ ಕಡಿಮೆಯಾದ ಮೆತ್ತನ್ನ ಪದಾರ್ಥದಲ್ಲಿ ಅಡಕವಾಗಿದೆ. ಮೂಲ ಮಸ್ತಿಷ್ಕ ಪಶುಗಳಿಗೂ ಮಾನವನಿಗೂ ಸಮಾನ. ಆದರೆ ಈ ಪ್ರಧಾನ ಮಸ್ತಿಷ್ಕ ಮಾನವನಲ್ಲಿ ತುಂಬ ಬೆಳವಣಿಗೆ ಹೊಂದಿದೆ.

ಕೋಟ್ಯಂತರ ಸೂಕ್ಷ್ಮ ಕೋಶಗಳಿಂದ ತುಂಬಿರುವ ಮುಖ್ಯ ಮಿದುಳನ್ನು ಸೂಕ್ಷ್ಮದರ್ಶಕದಲ್ಲಿ ಪರೀಕ್ಷಿಸಿದರೆ ಅದೊಂದು ಬಳ್ಳಿ, ಬೇರು, ಶಾಖೆಗಳಿಂದ ತುಂಬಿದ ಅರಣ್ಯದಂತೆ ಕಾಣುತ್ತದೆ. ಪ್ರತಿಯೊಂದು ಕೋಶಕ್ಕೂ ಎರಡೆರಡು ಸೂಕ್ಷ್ಮ 'ಮೀಸೆ'ಗಳಿದ್ದು ಅವು ತಮ್ಮ ಸಮೀಪದ ಇತರ ಕೋಶಗಳ ಅಂಥವೇ ಮೀಸೆಗಳಿಗೆ ತಳಕು ಬೀಳಬಲ್ಲವು. ಈ ತಳಕುಗಳ ಮೂಲಕವೇ ಮಿದುಳಿನ ಸಂದೇಶಗಳು ಬೇಕಾದ ಭಾಗಗಳಿಗೆ ವಿದ್ಯುದ್ವೇಗದಿಂದ ಸಾಗುತ್ತವೆ.

ಮೂರನೆಯದು ಉಪಮಸ್ತಿಷ್ಕ ಅಥವಾ ಹಿಮ್ಮೆದುಳು (ಸೆರಬೆಲಂ). ಕೆಲ ವೇಳೆ ಮುಖ್ಯ ಮಿದುಳಿನ ಅಪ್ಪಣೆ ಪಡೆದು, ಕೆಲ ವೇಳೆ ಹಾಗೆಯೆ ನಮ್ಮ ಸ್ನಾಯುಗಳ ಕ್ರಿಯೆಯನ್ನು ನಿಯಂತ್ರಿಸುವ ಈ ಭಾಗವು ಬುರುಡೆಯ ಹಿಮ್ಮಗ್ಗಲಲ್ಲಿರುತ್ತದೆ.

ಹೀಗೆ ತಂತುಗಳ ಜಾಲಗಳಿಂದ ತುಂಬಿದ ಮಿದುಳು ಇಡೀ ಶರೀರದ ಇಂದ್ರಿಯವ್ಯಾಪಾರದ ಮುಖ್ಯ ಕಚೇರಿಯಾಗಿದೆ. ಬಾಹ್ಯ ಜಗತ್ತಿನಿಂದ ಮತ್ತು ಶರೀರದ ಆಂತರಿಕ ಜಗತ್ತಿನಿಂದ ಇಲ್ಲಿ ಕ್ಷಣಕ್ಷಣಕ್ಕೂ ಬಂದು ಸೇರುವ ಸಂದೇಶಗಳನ್ನು ಪರೀಕ್ಷಿಸಿ ವಿಂಗಡಿಸಿ ಹೊಂದಿಸಿ ನಿರ್ಣಯ ಕೈ-ಕೊಳ್ಳುವ ಸ್ಥಳ ಇದು.

ಮಿದುಳಿನ ಸಂಘಟನೆಯ ಚಾತುರ್ಯ ಮನುಷ್ಯ ನಿರ್ಮಿತವಾದ ಯಾವ ಸಂಘಟನೆಯನ್ನೂ

ನಾಚಿಸುವಂತಿದೆ. ಪ್ರತಿಯೊಂದು ಇಂದ್ರಿಯದಿಂದ, ದೇಹದ ಪ್ರತಿಯೊಂದು ಭಾಗದಿಂದ, ಬರುವ ವರ್ತಮಾನಗಳನ್ನು ತೆಗೆದುಕೊಳ್ಳಲು ಮಿದುಳಿನಲ್ಲಿ ಪ್ರತ್ಯೇಕ ಪ್ರತ್ಯೇಕ ಭಾಗಗಳೇ ಇವೆ. ಮಿದುಳಿನ ಪಕ್ಕಗಳಲ್ಲಿರುವ ಕೆಲ ಪ್ರದೇಶಗಳು ನೀವು ಮುಟ್ಟುವ ಮತ್ತು ಕೇಳುವ ಸಂಗತಿಗಳ ಸುದ್ದಿಯನ್ನು ಮಾತ್ರವೇ ತೆಗೆದುಕೊಳ್ಳುವವು. ಮಿದುಳಿನ ಹಿಂಭಾಗದಲ್ಲಿರುವ ಒಂದು ದೊಡ್ಡ ಅಂಶ ನಿಮ್ಮ ಕಣ್ಣು ಕಂಡದ್ದನ್ನು ಮಾತ್ರವೇ ಗುರುತುಹಾಕಿಕೊಳ್ಳುವುದು. (ನಮ್ಮ ಇಂದ್ರಿಯಾನುಭವಗಳಲ್ಲಿ ಕಣ್ಣಿನ ಮೂಲಕ ಬರುವವುಗಳೇ ನೂರಕ್ಕೆ ೮೫ ರಷ್ಟು ಇವೆ.)

ಇವೆಲ್ಲ ಸಂದೇಶಗಳು ಮಿದುಳನ್ನು ತಲುಪುವುದು ಬೆನ್ನುಹುರಿಯ ಮೂಲಕವೇ. ನರಗಳ ಅಸಂಖ್ಯ ಸೂಕ್ಷ್ಮ ಎಳೆಗಳಿಂದೊಡಗೂಡಿ ತಂತಿಯ ಕೇಬಲ್ಲಿನಂತಿರುವ ಈ ಹುರಿಯು ಭದ್ರವಾದ ಎಲುಬಿನ ಕವಚದಿಂದ ರಕ್ಷಿತವಾಗಿದೆ. ಮಿದುಳು ತನಗೆ ದೊರೆತ ಸಂದೇಶಗಳನ್ನು ವಿಂಗಡಿಸಿ, ಸಂದರ್ಭಕ್ಕೆ ತಕ್ಕಂತೆ ಏನು ಕ್ರಮ ತೆಗೆದುಕೊಳ್ಳಬೇಕೆಂದು ಬೆನ್ನುಹುರಿಯಲ್ಲಿರುವ ಅಧೋಮುಖ ನರಗಳ ಮೂಲಕ ತಕ್ಕ ಅಂಗಕ್ಕೆ ಸೂಚನೆಗಳನ್ನು ಕಳಿಸುತ್ತದೆ. ಬೆನ್ನುಹುರಿಯು ನಿರಂತವಾಗಿ ಉಭಯ ದಿಕ್ಕುಗಳಲ್ಲಿ ವಿದ್ಯುತ್ ಪ್ರೇರಣೆಯಿಂದ ಸಂದೇಶಗಳನ್ನು ಸಾಗಿಸುವ ಒಂದು ಮಹಾ ವಾಹಕವಾಗಿದೆ.

ದೇಹದ ಪ್ರತಿಯೊಂದು ಭಾಗಕ್ಕೂ ಮಿದುಳಿನಲ್ಲಿ ಮೀಸಲಾದ ಸ್ಥಳಾವಕಾಶವು ಆಯಾ ಭಾಗದ ಮಹತ್ವವನ್ನು ಅವಲಂಬಿಸಿದೆ. ನಿಮ್ಮ ಕೈಗಳೂ ಬೆರಳುಗಳೂ ತುಂಬ ಜಟಿಲವೂ ಕುಶಲವೂ ಆದ ಉಪಕರಣಗಳು. ಅವುಗಳ ಚಟುವಟಿಕೆಗಳನ್ನು ನಿಯಂತ್ರಿಸಲು ಪ್ರಜ್ಞಾಪೂರ್ವಕವಾದ ಯತ್ನ ಬೇಕು. ಆದ್ದರಿಂದ ಕೈಗಳ ಬಗ್ಗೆ ಮಿದುಳಿನಲ್ಲಿ ಮೀಸಲಾದ ಸ್ಥಳವು ಅಷ್ಟು ಚಾಣಾಕ್ಷತನದ ಅಗತ್ಯವಿಲ್ಲದ ಕಾಲುಗಳಿಗಾಗಿ ಇರುವ ಸ್ಥಳಕ್ಕಿಂತ ತುಂಬ ಹೆಚ್ಚಾಗಿದೆ. ನಾಲಗೆ ಬಲು ಚಿಕ್ಕದಾದರೂ ಅದರ ನಿಯಂತ್ರಣಕ್ಕೆ ಮಿದುಳಿನಲ್ಲಿ ಸಾಕಷ್ಟು ವಿಶಾಲವಾದ ಸ್ಥಳ ಇದೆ.

ಮಿದುಳಿನ ಕಾರ್ಯಗಳಲ್ಲಿ ಅತ್ಯದ್ಭುತವಾದುದೆಂದರೆ ನೆನಪನ್ನು ಕಾದಿಡುವ ಪದ್ಧತಿ. ನಮ್ಮ ಜೀವಮಾನದಲ್ಲಾದ ಪ್ರತಿಯೊಂದು ಅನುಭವವನ್ನೂ ಮಿದುಳು ಕಾಪಾಡಿ ಇಡುತ್ತದೆಂದು ವಿಜ್ಞಾನಿಗಳು ಸಾಮಾನ್ಯವಾಗಿ ಒಪ್ಪುತ್ತಾರೆ. ಒಂದು ಕಚೇರಿಯು ತನಗೆ ದಿನಾಲೂ ಬರುವ ಲಕ್ಷಾಂತರ ಪತ್ರಗಳಲ್ಲಿ ಪ್ರತಿಯೊಂದನ್ನೂ ವಿಂಗಡಿಸಿ ಯೋಗ್ಯವಾದ ಫೈಲಿನಲ್ಲಿ ಹಾಕಿ ವ್ಯವಸ್ಥಿತವಾಗಿಟ್ಟು ಕಾಪಾಡಿ ಅನೇಕ ವರ್ಷಗಳ ನಂತರ ಬೇಕಾದ ಕ್ಷಣದಲ್ಲಿ ತೆಗೆದು ಕೊಡಲು ಸಿದ್ಧವಾಗಿರಬೇಕೆಂದು ಹೇಳಿದರೆ ಅದು ಸಾಧ್ಯವಿಲ್ಲ ಎಂದು ನೀವನ್ನುವಿರಿ. ಆದರೆ ಮಾನವನ ಮಿದುಳು ಅದನ್ನು ಯಶಸ್ವಿಯಾಗಿ ಮಾಡುತ್ತದೆ. ನೀವು ಮರೆತುಬಿಟ್ಟಿದ್ದೇವೆಂದು ಭಾವಿಸಿದ ಕೋಟ್ಯಂತರ ಅನುಭವಗಳು ಕೂಡ ನಿಮ್ಮ ಮಿದುಳಿನ "ನೆನಪಿನ" ಫೈಲುಗಳಲ್ಲಿ ಸುರಕ್ಷಿತವಾಗಿರುತ್ತವೆ. ಸಾವು ಮಾತ್ರವೇ ಈ ನೆನಪುಗಳನ್ನು ತೊಡೆದುಹಾಕಬಲ್ಲದೆಂದು ಭಾವಿಸಬೇಕಾಗಿದೆ.

ಮನೋವಿಜ್ಞಾನಿಗಳು ಮಾಡಿದ ಪ್ರಯೋಗಗಳು ಈ ಅಂಶವನ್ನು ಸ್ಪಷ್ಟವಾಗಿ ಎತ್ತಿ ತೋರಿಸಿವೆ. ಮೋಹಿನಿ ವಿದ್ಯೆಯ ಬಲದಿಂದ ವ್ಯಕ್ತಿಗಳನ್ನು ಮೋಹನಿದ್ರೆಗೊಳಪಡಿಸಿ ಅವರಿಗೆ ಹಿಂದಿನ ಘಟನೆಗಳನ್ನು ನೆನೆದುಕೊಳ್ಳಲು ಹೇಳಿದರೆ ಅವರು ತಮ್ಮ ಪ್ರೌಢ ಜೀವನದ ಸಂಗತಿಗಳನ್ನೇ ಏಕೆ, ಚಿಕ್ಕಮಕ್ಕಳಾಗಿದ್ದಾಗಿನ ಅತಿ ಸಾಮಾನ್ಯ ಘಟನೆಗಳನ್ನೂ ಸ್ಪಷ್ಟವಾಗಿ ನೆನೆದುಕೊಳ್ಳಬಲ್ಲರು.

ಇಂಥ ಒಂದು ನಾಟಕೀಯ ದೃಷ್ಟಾಂತ ಅಮೇರಿಕದ ಯೇಲ್ ವಿಶ್ವವಿದ್ಯಾಲಯದಲ್ಲಿ ಒಬ್ಬ ಇಟ್ಟಿಗೆ ಕಟ್ಟುವವನ ಮೇಲೆ ನಡೆಸಿದ ಪ್ರಯೋಗದಲ್ಲಿ ದೊರೆಯಿತು. ವಿಜ್ಞಾನಿಗಳು ಅವನನ್ನು ಸಂಮೋಹನಿಗೊಳಪಡಿಸಿದರು. ಆಮೇಲೆ ಗತಕಾಲದ ಒಂದಾನೊಂದು ದಿನದಲ್ಲಿ ಅವನು ಕಟ್ಟಿದ ಗೋಡೆಯ ಒಂದಾನೊಂದು ಇಟ್ಟಿಗೆಯ ರೂಪವನ್ನು ನೆನೆದುಕೊಳ್ಳಲು ಹೇಳಿದರು

ಅವನು ಆ ಇಟ್ಟಿಗೆಯನ್ನು ಸಾಕಷ್ಟು ವಿವರವಾಗಿ ನೆನೆದುಕೊಂಡನು. ಅದರ ಆಕಾರ ತುಸು ಡೊಂಕಾಗಿತ್ತು. ಅದರ ಬಣ್ಣ ಸ್ವಲ್ಪ ಕಪ್ಪಾಗಿತ್ತು ಮತ್ತು ಅದರಲ್ಲಿ ಒಂದು ಜಾಂಬಳಿ ಕಲ್ಲಿನ ಹರಳು ನಟ್ಟಿತ್ತು ಎಂದು ಆತ ಹೇಳಿದನು.

ಅವನ ವರ್ಣನೆ ಸರಿಯಾಗಿಯೇ ಇತ್ತೆಂದು ಆ ಗೋಡೆಯನ್ನು ಪರೀಕ್ಷಿಸಿ ನೋಡಿದಾಗ ತಿಳಿಯಿತು. ಅವನು ಆ ಇಟ್ಟಿಗೆಯನ್ನು ಕಟ್ಟಿದ್ದು ಹತ್ತು ವರ್ಷಗಳ ಹಿಂದೆ; ಮತ್ತು ಅದನ್ನು ಕಟ್ಟಿದ ದಿವಸ ಅವನು ಒಂದು ಸಾವಿರ ಇಟ್ಟಿಗೆಗಳನ್ನು ಕಟ್ಟಿದ್ದನು. ಅಂದ ಮೇಲೆ ಮನುಷ್ಯನ ಮಿದುಳು ಎಂಥ ಕ್ಷುಲ್ಲಕ ಅನುಭವವನ್ನೂ ಎಷ್ಟು ಜೋಪಾನವಾಗಿ ಕಾಯ್ದಿಡುತ್ತದೆಂದು ಅರ್ಥವಾದೀತು.

ಇಷ್ಟಿದ್ದರೂ ಮಿದುಳು ನಮ್ಮ ಇಂದ್ರಿಯಗಳಿಗೆ ಬರುವ ಪ್ರತಿಯೊಂದು ಕ್ಷುದ್ರ ಅನುಭವವನ್ನೂ ಸ್ವೀಕರಿಸುವುದೆಂದು ಹೇಳಲು ಬಾರದು. ನಿಮ್ಮ ಕಣ್ಣು, ಕಿವಿ, ಮೂಗು, ನಾಲಿಗೆ, ಸ್ಪರ್ಶ ಇವೆಲ್ಲವೂ ಕ್ಷಣಶಃ ಸಂಜ್ಞೆಗಳ ಪ್ರವಾಹವನ್ನೇ ತರುತ್ತವೆ. ಇವನ್ನೆಲ್ಲ ಮಿದುಳು ಸ್ವೀಕರಿಸಿದರೆ ತನ್ನ ಮೇಲೆ ಬೀಳುವ ಕೆಲಸದ ಭಾರದಿಂದ ಅದು ಸಂಪೂರ್ಣ ಕುಸಿದು ಹೋದೀತು. ಸುದೈವದಿಂದ ನರಗಳಲ್ಲಿ ಅಲ್ಲಲ್ಲಿ ಚಿಕ್ಕ ಚಿಕ್ಕ ಬಿರುಕುಗಳಿರುತ್ತವೆ. ಅವು ಚಿಕ್ಕ ನರಗಳಿಂದ ಬರುವ ಕ್ಷುಲ್ಲಕ ಸಂದೇಶಗಳನ್ನು ದಾರಿಯಲ್ಲೇ ತಡೆ ಹಿಡಿದು ಬಿಡುತ್ತವೆ. ಉದಾಹರಣೆಗೆ ಉಷ್ಣತಾಮಾನದಲ್ಲಿ ಒಂದು ಅಂಶದೊಳಗಿನ ವ್ಯತ್ಯಂತರಗಳು ಮಿದುಳಿನ ತನಕ ಹೋಗುವುದೇ ಇಲ್ಲ. ನಮ್ಮ ಶರೀರದಲ್ಲೆಲ್ಲ ಹಬ್ಬಿರುವ ಸೂಕ್ಷ್ಮ ನರಗಳ ಬಲೆಗಳಲ್ಲಿ ಒಂದು ಭಾಗದ ಅನೇಕ ನರಗಳಿಗೆ ಏಕಕಾಲದಲ್ಲಿ ಬಂದ ಅನುಭವಗಳ ಸುದ್ದಿ ಮಾತ್ರ ಸಾಕಷ್ಟು ಪ್ರಬಲವಾಗಿ ಹರಿದು ಮಿದುಳನ್ನು ಮುಟ್ಟುತ್ತದೆ. ಹೀಗೆ ಒಡೆಯನಿಗೆ ಬರುವ ಅಸಂಖ್ಯ ಪತ್ರಗಳಲ್ಲಿ ಮಹತ್ವವಿಲ್ಲದವುಗಳನ್ನೆಲ್ಲ ಸೋಸಿ ತೆಗೆಯುವ ಕಾರ್ಯದರ್ಶಿಯಂತೆ ಈ ನರಗಳ ಬಿರುಕುಗಳು ವರ್ತಿಸುತ್ತವೆ.

ಇನ್ನೊಂದು ವಿಧದಿಂದ ಮಿದುಳು ತನ್ನ ಮೇಲೆ ಬೀಳುವ ಕೆಲಸವನ್ನು ಕಡಿಮೆ ಮಾಡಿಕೊಳ್ಳುತ್ತದೆ. ನಿಮ್ಮ ಬೆರಳಿಗೆ ಬಿಸಿ ಹತ್ತಿದಾಗ ನೀವು ಸರಕ್ಕನೆ ಅದನ್ನೆಳೆದುಕೊಳ್ಳುವುದು ಮಿದುಳಿನ ಆಜ್ಞೆಯಿಂದಲ್ಲ. ಅಂಥ ಪ್ರಕರಣಗಳನ್ನು ಬೆನ್ನುಹುರಿಯೇ ಮುಗಿಸಿಬಿಡುತ್ತದೆ. ಇದಕ್ಕೆ "ಅಭ್ಯಸ್ತ (ರಿಫ್ಲೆಕ್ಸ್) ಕ್ರಿಯೆ" ಎಂದು ಹೇಳುತ್ತಾರೆ. ಕಾರ್ಯದರ್ಶಿಗೆ ಒಡೆಯನ ಮನಸ್ಸು ಗೊತ್ತು. ಅವನು ಕೆಲ ನಿತ್ಯಕಟ್ಟಳೆಯ ಪತ್ರಗಳಿಗೆ ಒಡೆಯನನ್ನು ಕೇಳದೇ ಉತ್ತರ ಬರೆದುಬಿಡುತ್ತಾನಲ್ಲ, ಹಾಗೆ.

ಹೀಗೆ ಅಭ್ಯಾಸಬಲದಿಂದ ಮಿದುಳಿನ ಪ್ರಜ್ಞಾಪೂರ್ವಕ ಆಜ್ಞೆಯಿಲ್ಲದೆ ನಾವು ದಿನವೂ ಅನೇಕ ಕೆಲಸಗಳನ್ನು ಮಾಡಿಕೊಂಡು ಹೋಗುತ್ತೇವೆ. ಸೈಕಲ್ ಸವಾರಿ ಕಲಿಯಲು ಪ್ರಾರಂಭದಲ್ಲಿ ಮಿದುಳಿನ ಯತ್ನಪೂರ್ವಕ ನಿಯಂತ್ರಣ ಬೇಕಾದರೂ ಬರಬರುತ್ತ ನಾವು ಯೋಚನೆಯಿಲ್ಲದೆ ಅದನ್ನು ಮಾಡಲು ಕಲಿಯುತ್ತೇವೆ. ಸಾಮಾನ್ಯ ಜನರ ಜೀವನದಲ್ಲಿ ಇಂಥ ಅಭ್ಯಾಸಬಲದ ಕಾರ್ಯಗಳೇ ಹೆಚ್ಚು, ಮಿದುಳಿನ ಯತ್ನ ಕಡಿಮೆ. ಏಕಾಗ್ರ ಚಿತ್ತದ ವಿಚಾರವೇ ಪ್ರಜ್ಞೆಯೆಂದು ಹೇಳುವುದಾದರೆ ನಾವು ಒಂದು ತಾಸಿನ ಜೀವನದಲ್ಲಿ ಒಂದು ನಿಮಿಷಕಾಲವಷ್ಟೇ ಪೂರ್ತಿ ಪ್ರಜ್ಞೆಯಲ್ಲಿರುತ್ತೇವೆಂದು ಒಬ್ಬ ವಿಜ್ಞಾನಿಯ ಮತ. ದೀರ್ಘಕಾಲದ ಏಕಾಗ್ರತೆ ಬಲು ಕಷ್ಟ.

ಮಿದುಳಿನ ಸರ್ಜನರ ಕಾರ್ಯವು ಮಿದುಳಿನ "ಉಗ್ರಾಣ" ಪದ್ಧತಿಯ ಮೇಲೆ ಬೆಳಕು ಚೆಲ್ಲಿದೆ. ಮಿದುಳಿನ ವಿವಿಧ ಭಾಗಗಳ ಮೇಲೆ ಸೂಕ್ಷ್ಮ ವಿದ್ಯುತ್ತರಂಗಗಳ ಸ್ಪರ್ಶ ಮಾಡಿದಾಗ ಆಶ್ಚರ್ಯಕರ ಸಂಗತಿಗಳನ್ನು ಅವರು ಕಂಡರು. ಒಬ್ಬ ರೋಗಿ ಮಿದುಳಿನ ಒಂದು ವಿಶಿಷ್ಟ ಸ್ಥಳದಲ್ಲಿ ವಿದ್ಯುತ್ ಸ್ಪರ್ಶವಾದೊಡನೆ ಸತ್ತಿದ್ದ ತನ್ನ ತಂದೆ ಕಾಣಿಸುತ್ತಿದ್ದಾನೆ ಎಂದ. ಶ್ರವಣವಿಷಯಕ ಮಿದುಳಿನ ಭಾಗದಲ್ಲಿ ವಿದ್ಯುತ್ ಸ್ಪರ್ಶವಾದಾಗ ನಿಶ್ಶಬ್ದವಿದ್ದರೂ ಶಬ್ದಗಳು ಕೇಳಿಸುತ್ತವೆ ಎಂದೂ ತಿಳಿಯಿತು. ಬೇರೊಂದೆಡೆಯಲ್ಲಿ

ಸ್ಪರ್ಶಿಸಿದರೆ ಮನುಷ್ಯನನ್ನು ಮಗುವಿನಂತೆ ಅಳಿಸಲು ಸಾಧ್ಯವಿದೆ.

ಇವೆಲ್ಲ ಸಂಗತಿಗಳಿಂದ ಮನೋರೋಗಗಳ ಕಾರಣಗಳನ್ನು ಅರ್ಥಮಾಡಿಕೊಳ್ಳಲು ಸಾಕಷ್ಟು ಸಹಾಯವಾಗಿದೆ. ಅನೇಕ ವೇಳೆ ಮಿದುಳಿನ ಕೋಶಗಳಲ್ಲಾಗಲಿ ಅವುಗಳಿಗೆ ಸಂಬಂಧಿಸಿದ ವಿದ್ಯುತ್-ಸಂಚಾರದಲ್ಲಾಗಲಿ ದೋಷವಿರುವುದೇ ಮನೋರೋಗಕ್ಕೆ ಕಾರಣವಾಗುತ್ತದೆ.

ಮೆದುಲಾ ಎಂಬ ಮಿದುಳಿನ ಭಾಗ ನಮ್ಮ ಮೂಲ, ಪಾಶವ ಭಾವನೆಗಳ ಕೇಂದ್ರ. ಅದರ ಮೇಲೆ, ಅನುಭವಗಳ ಮತ್ತು ಅವುಗಳಿಂದ ಬಂದ ವಿವೇಕದ ಸ್ಥಾನವಾದ ಮುಖ್ಯ ಮಿದುಳಿನ ನಿಯಂತ್ರಣವಿರುತ್ತದೆ. ಆದರೆ ಕೆಲ ವೇಳೆ ಈ ನಿಯಂತ್ರಣ ಹೇಗೋ ತಪ್ಪಿಹೋಗುತ್ತದೆ. ಅಂಥವರು ಉಗ್ರವಾದ ಉದ್ರೇಕಗಳನ್ನು ವ್ಯಕ್ತಪಡಿಸುತ್ತಾರೆ. ಅವರಲ್ಲಿ ತಡೆಯಲಾರದ ಕಾಮವಾಸನೆ, ಕ್ರೂರತನ, ದ್ವೇಷ ಮೊದಲಾದವು ವ್ಯಕ್ತವಾಗುತ್ತವೆ. ನಾನು ಮೈಸೂರು ಮಹಾರಾಜ ಎಂಬ ಭ್ರಾಂತಿಯಿಂದ ನರಳುವವನಿಗೆ ಮಹಾರಾಜರ ಹೆಸರಿನ ಜ್ಞಾಪಕವಿರುತ್ತದೆ, ಆದರೆ ಆ ವ್ಯಕ್ತಿ ಬೇರೆ, ತಾನು ಬೇರೆ ಎಂಬ ಅನುಭವಸಿದ್ಧವಾದ ತಥ್ಯದ ನಿಯಂತ್ರಣವು ಯಾವ ಕಾರಣದಿಂದಲೋ ಕೆಟ್ಟುಹೋಗಿರುತ್ತದೆ. ಸತ್ತ ತಂದೆ ಕಾಣಿಸುತ್ತಿದ್ದಾನೆ ಎಂದು ಹೇಳುತ್ತಿರುವವನಿಗೆ ತಂದೆಯ ರೂಪದ ನೆನಪನ್ನು ಕಾದಿಟ್ಟ ಮಿದುಳಿನ ಕೋಶದ ಮೇಲೆ ಯಾವುದೋ ದೋಷದಿಂದ ವಿದ್ಯುತ್ ಪ್ರಚೋದನೆಯಾಗಿರುತ್ತದೆ.

ಪ್ರತಿಭಾಶಾಲಿಗಳಿಗೂ ಸಾಮಾನ್ಯ ಜನರಿಗೂ ಮಿದುಳಿನ ರಚನೆಯಲ್ಲಿ ಏನಾದರೂ ಅಂತರವಿದೆಯೇ ? ಮಿದುಳಿನ ತೂಕ ಅಥವಾ ಪರಿಮಾಣವು ಬುದ್ಧಿಶಕ್ತಿಯ ಅಳತೆಯಲ್ಲವೆಂದು ಕಂಡುಬಂದಿದೆ. ಫ್ರಾನ್ಸಿನ ಪ್ರತಿಭಾಶಾಲಿ ಲೇಖಕನಾದ ಅನತೋಲೆ ಫ್ರಾನ್ಸ್‌ನಿಗೆ ಸಾಮಾನ್ಯರಿಗಿಂತ ಅರ್ಧ ಪೌಂಡ್ ಕಡಿಮೆ ಮಿದುಳಿತ್ತು. ಪ್ರತಿಭಾಶಾಲಿಗಳ ಮಿದುಳಿನ ಗಾತ್ರ ದೊಡ್ಡದಾಗಿರದೆ ಅವರ ಮಿದುಳಿನಲ್ಲಿ ವಿವಿಧ ಭಾಗಗಳೊಳಗೆ ವಿದ್ಯುತ್ ಸಂಚಾರದ ಕ್ರಿಯೆಯನ್ನು ಉತ್ತಮ ರೀತಿಯಿಂದ ಸಂಯೋಜನೆ ಮಾಡುವ ಉತ್ತಮ ನಿರ್ವಹಣ ಶಕ್ತಿ ಇರುವ ಹಾಗಿದೆ. ಅನುಭವಗಳ ರಾಶಿ ಮಾತ್ರವಲ್ಲ, ಅವುಗಳನ್ನು ಯೋಜಿಸುವ ಶಕ್ತಿಯೇ ಬುದ್ಧಿಶಕ್ತಿಯೆನಿಸುತ್ತದೆ.

ಮನುಷ್ಯನ ಮಿದುಳು ಇಷ್ಟು ದೊಡ್ಡದಾಗಿದ್ದರೂ ಅದರ ಪೂರ್ತಿ ಉಪಯೋಗವನ್ನು ಯಾರೂ ತೆಗೆದುಕೊಂಡಿಲ್ಲ. ಅತ್ಯಂತ ಬುದ್ಧಿಶಾಲಿ, ಅನುಭವಶಾಲಿಯೆನಿಸಿದವನ ಮಿದುಳಿನಲ್ಲಿ ಕೂಡ ಇನ್ನಷ್ಟು ಅನುಭವವನ್ನು ಸೇರಿಸಲು ಸ್ಥಳವಿದ್ದೇ ಇರುತ್ತದೆ; ಅವುಗಳನ್ನು ಸಂಯೋಜಿಸುವ ಸಾಧ್ಯತೆಯೂ ಇರುತ್ತದೆ. ನಮ್ಮಲ್ಲನೇಕರು ಈ ಅನುಪಯುಕ್ತ ಅವಕಾಶವನ್ನು ಉಪಯೋಗಿಸಿಕೊಳ್ಳಲು ಯತ್ನಿಸುವುದೇ ಇಲ್ಲ. ಕಪಿಸ್ಥಿತಿಯಿಂದ ಮಾನವಸ್ಥಿತಿಗೆ ಬರುತ್ತ ಮಾನವನ ಮಿದುಳು ಗಾತ್ರದಲ್ಲಿಯೂ ದಕ್ಷತೆಯಲ್ಲೂ ಬೆಳೆದಿದೆ. ೫೦ ಲಕ್ಷ ವರ್ಷಗಳ ಹಿಂದಿನ ನಮ್ಮ ಪೂರ್ವಜರ ಮಿದುಳಿನ ಗಾತ್ರ ೮೦೦–೧೦೦೦ ಘನ ಸೆಂಟಿಮೀಟರ್ ಇತ್ತು. ನಮ್ಮದು ೧೪೦೦ರಿಂದ ೧೮೦೦ ಘನ ಸೆಂಟಿಮೀಟರಿನಷ್ಟಿದೆ. ಭವಿಷ್ಯತ್ತು ಇನ್ನೂ ಪರಿಪೂರ್ಣವಾಗಿ ನಮ್ಮ ಮಿದುಳನ್ನು ರೂಪಿಸುವುದು ಖಂಡಿತ.

---

## ಶಾ–ಕಾರ

ಆದರ್ಶ ಪತಿಯು ಹೇಳಿದ್ದನ್ನೆಲ್ಲ ಚಾಚೂ ತಪ್ಪದೆ ಮಾಡುವವಳೇ ಆದರ್ಶ ಸತಿ.

—ಬರ್ನಾರ್ಡ್ ಶಾ

ಇದೇನೂ ಹರಟೆಯಲ್ಲ—
ಪ್ರತಿ ದಿನವೂ ೨½ ಕೋಟಿ ಬಟ್ಟಲುಗಳಿಗಿಂತಲೂ ಹೆಚ್ಚಾಗಿ ಬ್ರೂಕ್ ಬಾಂಡ್ ಚಹಾ ಕುಡಿಯಲ್ಪಡುತ್ತದೆ.

ಖಂಡಿತವಾಗಿಯೂ ಇದು ನಿಮಗೆ ಗೊತ್ತು—ಬ್ರೂಕ್ ಬಾಂಡ್ ಚಹಾ ಬೇಗನೆ ಸರಬರಾಜಾಗುವುದರಿಂದಲೇ ಅದು ತೋಟದಲ್ಲಿರುವ ಚಹದಷ್ಟೇ ತಾಜಾ ಆಗಿರುವುದು ಎಂಬ ರಹಸ್ಯ.

ಸಾಕು! ಸಾಕು! ಇತರ ಚಹಾಗಳಿಗಿಂತ ಬ್ರೂಕ್ ಬಾಂಡ್ ಚಹಾವನ್ನೇ ಹೆಚ್ಚು ಜನರು ಕುಡಿಯುತ್ತಾರೆ ಎಂಬುದು ವಿಶೇಷ ಸಮಾಚಾರವೇನೂ ಅಲ್ಲ.

ಎಲ್ಲಾ ಸಮಯದಲ್ಲೂ

# ಬ್ರೂಕ್ ಬಾಂಡ್ ಚಹಾ

ಕುಡಿದು ಆನಂದಿಸಿರಿ




ಬ್ರೂಕ್ ಬಾಂಡ್ ಇಂಡಿಯಾ ಪ್ರೈವೇಟ್ ಲಿಮಿಟೆಡ್

BG 269R

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. ಏಕಾಗ್ರ

(ಅ) ಸೂಜಿ (ಆ) ಒಂದೇ ವಿಷಯದಲ್ಲಿ ನಟ್ಟ (ಇ) ಬೆಟ್ಟದ ತುದಿ (ಈ) ಸಿಡುಕ

೨. ನಾದು

(ಅ) ಕೆಟ್ಟ ವಾಸನೆ ಇಡುಗು (ಆ) ಸಪ್ಪಳ (ಇ) ಉಬ್ಬು (ಈ) ಒದ್ದೆ ಮಾಡು

೩. ಧುರಂಧರ

(ಅ) ಮುಂದಾಳು (ಆ) ಯೋಧ (ಇ) ಧೈರ್ಯಶಾಲಿ (ಈ) ದೂರ ಹೋದ

೪. ಮುಳಿಸು

(ಅ) ಒಂದು ತರದ ಹುಲ್ಲು (ಆ) ಕೋಪ (ಇ) ಸಂತೋಷ (ಈ) ದುಃಖ.

೫. ಲೋಲುಪ

(ಅ) ಜೋತಾಡುವವ (ಆ) ಪ್ರಿಯ (ಇ) ಆಸೆಬುರುಕ (ಈ) ತಪ್ಪಿ ಹೋದ.

೬. ಬಿಗುಮಾನ

(ಅ) ಮಾತಾಡಲು ಒಲ್ಲದಿರುವುದು (ಆ) ಒಂದು ಅಳತೆ (ಇ) ಅಭಿಮಾನ (ಈ) ಮಾನಹಾನಿ.

೭. ಲಾಂಛನ

(ಅ) ಅನ್ಯಾಯ (ಆ) ಇಚ್ಛೆ (ಇ) ಓದುವಿಕೆ (ಈ) ಗುರುತು

೮. ಅವಗಾಹನೆ

(ಅ) ಮೋಸ (ಆ) ಗೋಪ್ಯ (ಇ) ತಿಳಿವಳಿಕೆ (ಈ) ಮೋಹ

೯. ಮಸುಳಿಸು

(ಅ) ಕಳೆಗುಂದು (ಆ) ವಿರೋಧಿಸು (ಇ) ಮೆರೆ (ಈ) ತಿಕ್ಕು

೧೦. ಪನ್ನತಿಕೆ

(ಅ) ನಿರರ್ಥಕತೆ (ಆ) ಸೋಲು (ಇ) ಪ್ರಸಾದ (ಈ) ಪರಾಕ್ರಮ.

೧೧. ದುರ್ಘಟ

(ಅ) ಕಷ್ಟಸಾಧ್ಯ (ಆ) ಅವಗಡ (ಇ) ಒಡೆದ ಗಡಿಗೆ (ಈ) ಭಾರೀ ಹಾವು.

೧೨. ವಾತಾಯನ

(ಅ) ಆಕಾಶ (ಆ) ಬಿರುಗಾಳಿ (ಇ) ಕಿಂಡಿ (ಈ) ಗಾಳಿಯ ದಿಕ್ಕು.

## 'ಶಬ್ದ ಭಾಂಡಾರ' ದ ಸರಿಯಾದ ಅರ್ಥಗಳು

೧. **ಏಕಾಗ್ರ.** (ಅ) ಒಂದೇ ವಿಷಯದಲ್ಲಿ ನಟ್ಟ. ಉದಾ.— ಏಕಾಗ್ರಚಿತ್ತನಾಗಿ ಓದುತ್ತಿದ್ದನು ಅಂದರೆ ಮನಸಿನಲ್ಲಿ ಬೇರೆ ವಿಷಯಕ್ಕೆ ಅಸ್ಪದ ಕೊಡದೆ ಓದುತ್ತಿದ್ದನು. [ಸಂ. ಏಕ = ಒಂದೇ, ಅಗ್ರ = ತುದಿ.]

೨. **ನಾದು.** (ಈ) ಒದ್ದೆ ಮಾಡು, ನೆನಸು, ತೋಯಿಸು; ತಂಪುಗೊಳಿಸು; ಕಲಸಿ ಮುದ್ದೆ ಮಾಡು. ಉದಾ.— ಹಿಟ್ಟನ್ನು ಚೆನ್ನಾಗಿ ನಾದಿ ಉಂಡೆಮಾಡು. [ಕನ್ನಡ]

೩. **ಧುರಂಧರ.** (ಅ) ಮುಂದಾಳು, ಧುರೀಣ, ಪ್ರಮುಖ; ನೊಗ ಅಥವಾ ಭಾರ ಅಥವಾ ಹೊಣೆಯನ್ನು ಹೊತ್ತವ, ಹೊರಲು ಯೋಗ್ಯನಾದವ; ಮಹಾಪುರುಷ [ಸಂ. ಧುರಂ = ನೊಗವನ್ನು, ಧರ = ಹೊತ್ತವ]

೪. **ಮುಳಿಸು.** (ಅ) ಕೋಪ; ಕೆರಳುವಿಕೆ; ಉದ್ರೇಕ. ಹುಸಿಮುಳಿಸು = ಕೋಪದ ನಟನೆ. [ಕನ್ನಡ. ಮುಳಿ= ಕೋಪಗೊಳ್ಳು]

೫. **ಲೋಲುಪ.** (ಇ) ಯಾವುದರಲ್ಲಾದರೂ ಆಸೆಬುರುಕ, ಮಿತಿಮೀರಿ ಹಂಬಲಿಸುವವ; ಲೋಭಿ; ಕಾಮಿ. ಉದಾ:— ಧನಲೋಲುಪ, ಕಾಮಲೋಲುಪ, ಜಿಹ್ವಾ (ನಾಲಿಗೆಯ) ಲೋಲುಪ. [ಸಂ.]

೬. **ಬಿಗುಮಾನ.** (ಅ) ಮಾತಾಡಲು ಒಲ್ಲದಿರುವುದು, ಬಿಗುಹು; ನಿಷ್ಠುರತೆ. ಉದಾ:— ಅವಳ ಬಿಗುಮಾನವನ್ನು ನೋಡಿದರೆ ಮಾತಾಡಲಿಕ್ಕೇ ಹೆದರಿಕೆಯಾಗುತ್ತದೆ. [ಕನ್ನಡ ಬಿಗು + (ಸಂ.) ಮಾನ]

೭. **ಲಾಂಛನ.** (ಈ) ಗುರುತು, ಕುರುಹು (ಉದಾ:— ಶ್ರೀವತ್ಸಲಾಂಛನ); ಕಲೆ, ಅಪಕೀರ್ತಿಯ ಗುರುತು. (ಉದಾ:— ನಿನ್ನ ವರ್ತನೆಯು ನಿನ್ನ ಕುಲಕ್ಕೆ ಲಾಂಛನಾಸ್ಪದವಾಗಿದೆ); ಹೆಸರು, ಬಿರುದು. [ಸಂ.]

೮. **ಅವಗಾಹನೆ.** (ಇ) ತಿಳಿವಳಿಕೆ, ಪರಿಜ್ಞಾನ; (ನೀರಲ್ಲಿ) ಮುಳುಗು ಹಾಕುವಿಕೆ; ಆಳವಾದ ಅಭ್ಯಾಸ. ಉದಾ.— ಸಾರ್ವಜನಿಕರ ಅವಗಾಹನೆಗಾಗಿ ಅಂದರೆ ಎಲ್ಲರ ತಿಳಿವಳಿಕೆಗಾಗಿ. [ಸಂ. ಅವ = ಕೆಳಗೆ ಗಾಹನ = ಮುಳುಗುವುದು.]

೯. **ಮುಸುಳಿಸು.** (ಅ) ಕಳೆಗುಂದು, ಮಾಸು, ಕಂದು; ಕಳೆಗುಂದಿಸು, ಕಂದಿಸು; ಮರೆಯಾಗು, ಅಡಗು; ಅಡಗಿಸು. [ಕನ್ನಡ, ಮುಸುಳ್ = ಮಾಸು + ಇಸು]

೧೦. **ಹನ್ನತಿಕೆ.** (ಈ) ಪರಾಕ್ರಮ. ಸಾಹಸ, ಧೈರ್ಯ; ಚಾತುರ್ಯ [ಕನ್ನಡ].

೧೧. **ದುರ್ಘಟ.** (ಅ) ಕಷ್ಟಸಾಧ್ಯ. ಕಠಿನ, ಅಸಾಧ್ಯ; ಅಸಂಭವ; ಕಷ್ಟದಾಯಕವಾದ (ಉದಾ:— ಈ ದುರ್ಘಟ ಪ್ರಸಂಗದಿಂದ ತಪ್ಪಿದರೆ ಸಾಕು). [ಸಂ.]

೧೨. **ವಾತಾಯನ.** ಕಿಂಡಿ, ಕಿಡಕಿ, ಗಾಳಿಕಿಂಡಿ [ಸಂ. ವಾತ= ಗಾಳಿ, ಅಯನ = ಚಲನೆ].

### ನಿಮ್ಮ ಶಬ್ದ ಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

೬—೮ ಸರಿಯಿದ್ದರೆ ....ಸಾಧಾರಣ
೯—೧೦ " ....ಉತ್ತಮ
೧೧—೧೨ " ....ಅತ್ಯುತ್ತಮ



ಒಂದು ಆಧುನಿಕ ಪುರಾಣ

# ಪುನಃ ನೆಲಗಟ್ಟೆ

**ಎನ್. ಆರ್. ದೇವಭಾನಕರ**

ವೈಕುಂಠದ ಉದ್ಯಾನವನದಲ್ಲಿ ಕಲ್ಪತರುಗಳ ನೆರಳಿನಲ್ಲಿ ಭಗವಾನ್ ವಿಷ್ಣು ಮತ್ತು ಲಕ್ಷ್ಮೀದೇವಿ ಕುಳಿತಿದ್ದರು. ವಸಂತ ಮಾಸದ ಮಧ್ಯಾಹ್ನ ಸುಖಕರವಾಗಿತ್ತು. ಮಂದಮಾರುತನು ಪುಷ್ಪಭರಿತ ಲತೆಗಳ ನಡುವೆ ಸುಳಿದಾಡುತ್ತಿದ್ದನು. ಲಕ್ಷ್ಮೀದೇವಿ ಗೃಹಕೃತ್ಯದ ಮಾತುಗಳನ್ನಾಡುತ್ತಿದ್ದಳು. ಕೇಳದೆಯೆ ಕೇಳುವಂತೆ ನಟಿಸುವ ಗಂಡಂದಿರೋಪಾದಿಯಲ್ಲಿ ವಿಷ್ಣು ಆ ಮಾತುಗಳನ್ನು ಆಲಿಸುತ್ತಿದ್ದನು. ಅಡಿಗೆಯವನ ತೀರ ಇತ್ತೀಚಿನ ಅಪರಾಧದ ಪ್ರಕರಣವನ್ನು ಲಕ್ಷ್ಮಿ ಪ್ರಸ್ತಾಪಿಸಿದಾಗ ವಿಷ್ಣು ಪ್ರಕಟವಾಗಿಯೇ ಆಕಳಿಸತೊಡಗಿದನು.

ಪ್ರಯತ್ನಪೂರ್ವಕವಾಗಿ ಆಲಸ್ಯವನ್ನು ಬದಿಗೊತ್ತಿ ವಿಷ್ಣು, "ಲಕ್ಷ್ಮೀ, ಇಂದು ಸಂಜೆ ಒಂದಿಷ್ಟು ಹೊತ್ತು ನಾನು ಗರುಡನನ್ನು ಉಪಯೋಗಿಸಿಕೊಳ್ಳಬಹುದೇ? ಭೂಲೋಕಕ್ಕೆ ಹೋಗಿ ಒಬ್ಬ ಭಕ್ತರನ್ನು ಕಾಣಬೇಕಾಗಿದೆ" ಎಂದ.

"ಭಕ್ತರೇ? ಗಂಡನ ಅಥವಾ ಪುತ್ರನ ಪಾಪ್ತಿಗಾಗಿ ಹಂಬಲಿಸುತ್ತಿರುವ ಯಾವಳೋ

"Hemakumari & Other Stories" ಸಂಗ್ರಹದಿಂದ

ಸ್ತ್ರೀ ಇರಬೇಕು. ಈ ಮಾನವ ಸ್ತ್ರೀಯರು ನಿಜವಾಗಿಯೂ ನಾಚಿಕೆಗೇಡಿಗಳು. ಅವರು ನಾಚಿಕೆಗೆಟ್ಟು ವರಗಳನ್ನು ಬೇಡುತ್ತಿರುವ ರೀತಿ ಅಸಹ್ಯವಾಗಿಲ್ಲವೇ? ಆದರೆ ಅವರಿಗೆ ಪ್ರೋತ್ಸಾಹವೀಯುತ್ತಿರುವವರು ನೀವೇ. ವರಾರ್ಥಿಗಳು ತರುಣಿಯರೂ ಸುಂದರಿಯರೂ ಆಗಿದ್ದರಂತೂ ಕೇಳುವುದೇ ಬೇಡ. ಮತ್ತೆ ಹೀಗಿದ್ದೂ ಚಂಚಲಳು ಎಂದು ಈ ಜನ ನನಗೆ ಹೆಸರಿಡುತ್ತಾರೆ." ಲಕ್ಷ್ಮಿ ಮೂಗು ಮುರಿದು ಕಟಾಕ್ಷ ಬೀರುತ್ತ ಮನಮೋಹಕ ಭಂಗಿಯನ್ನು ತೋರಿಸುತ್ತ ಹೇಳಿದಳು.

ವಿಷ್ಣು ಅವಳನ್ನಾಲಿಂಗಿಸಿಕೊಂಡು ಸಪ್ರೇಮ ಸಾಂತ್ವನದ ನಗುವನ್ನು ನಕ್ಕು ಹೇಳಿದನು. "ಪ್ರಿಯೇ, ಈ ಸಲ ಮಾತ್ರ ನೀನು ತಪ್ಪಿದಿ. ನಾನು ಕಾಣಲಿರುವುದು ಭಕ್ತಳನ್ನಲ್ಲ, ಓರ್ವ ಬ್ರಾಹ್ಮಣ ಭಕ್ತನನ್ನು."

"ಅಂದರೆ ನಮಗೆ ಬಂಗಾರವನ್ನೂ ಮುತ್ತು ರತ್ನಗಳನ್ನೂ ಧಾರಾಳವಾಗಿ ಕಾಣಿಕೆಯಾಗಿ ಅರ್ಪಿಸುತ್ತಿರುವ ಆ ವೃದ್ಧನನ್ನು ಕಾಣಲಿರುವಿರಾ?"

"ಪುನಃ ತಪ್ಪಿದೆ. ಆ ವೃದ್ಧ ಒಳ್ಳೆಯವನೇನೋ ನಿಜ. ಆದರೆ ನಾನು ಕಾಣಲಿರುವುದು ನಿನ್ನ ಚಂದ್ರಕಾಂತನನ್ನಲ್ಲ."

"ಹಾಗಾದರೆ ಯಾರು? ನಮ್ಮ ಮೂರ್ತಿಗಳ ಮೇಲೆ ಕಾಡು ಹೂಗಳನ್ನೂ ಎಲೆಗಳನ್ನೂ ಸುರುವಿ ಉಸಿರುಗಟ್ಟಿಸುತ್ತಿರುವ ಆ ದರಿದ್ರ ವಿದ್ಯಾಧರನೇನು ಮತ್ತೆ?"

"ಹೌದು, ಪ್ರಿಯೆ."

"ಛಿ!" ಲಕ್ಷ್ಮೀ ಹೇವರಿಸುತ್ತ ಹೇಳಿದಳು. "ನಿಮ್ಮ ಅಭಿರುಚಿ ದಿನ ಹೋದಂತೆ ಸುಧಾರಿಸುತ್ತಿದೆಯೆಂದೇ ಹೇಳಬೇಕು. ತಲೆತಿರುಕ ಮಹಾದೇವನನ್ನು ಬಿಟ್ಟರೆ ಮುತ್ತು-ರತ್ನಗಳನ್ನು ಬಿಟ್ಟು ಎಲೆ-ಹೂವುಗಳನ್ನು ಪ್ರೀತಿಸುವ ದೇವರು ಮತ್ತಾರಾದರೂ ಇದ್ದಾರೆಯೆ? ಕೈಲಾಸದ ಆ ಹುಚ್ಚನನ್ನು ನೀವು ಇತ್ತೀಚೆಗೆ ಪುನಃ ಪುನಃ ಭೆಟ್ಟಿಯಾಗುತ್ತಿದ್ದೀರೆಂದು ಕಾಣುತ್ತದೆ. ಮಹಾರಾಯರೇ, ಎಂದಾದರೊಂದು ದಿನ ಆತನಂತೆಯೇ ಕೇವಲ ಭಸ್ಮ ಮತ್ತು ತಲೆಬುರುಡೆಗಳನ್ನು ಧರಿಸಿ ದಿಗಂಬರರಾಗಿ ಮಾತ್ರ ಬರಬೇಡಿರಿ ವೈಕುಂಠಕ್ಕೆ. ಹಾಗೇನಾದರೂ ಆದಲ್ಲಿ, ಆ ಬಡಪಾಯಿ ಪಾರ್ವತಿಯಂತೆ ಸ್ವರ್ಗದಲ್ಲೆಲ್ಲ ನಗೆಗೀಡಾಗುವ ಬದಲು ನಾನು ನನ್ನ ತಂದೆಯ ಮನೆಗೆ-ಸಾಗರಕ್ಕೆ-ಹೋಗಬೇಕಾದೀತು. ಅಲ್ಲಾ, ಸಂಪತ್ತನ್ನು ಅರ್ಪಿಸುವವರನ್ನು ಬದಿಗೆ ಸರಿಸಿ ನೀವು ಕವಡೆ ಬೆಲೆ ಬಾಳದ ವಸ್ತುಗಳನ್ನು ಅರ್ಪಿಸುವವರಿಗೆ ಮಹತ್ವವಿತ್ತರೆ ನಿಮ್ಮ ದೇವನ್ಯಾಯ ಎಲ್ಲಿ ಉಳಿಯಿತು? ಅದೂ ಅಲ್ಲದೆ ಚಂದ್ರಕಾಂತ ಮಹಾಪಂಡಿತ. ಪಂಡಿತರ ಸಭೆಯಲ್ಲಿ ಆತ ವಾದದಲ್ಲಿ ಎಲ್ಲರನ್ನೂ ಸೋಲಿಸಿದ್ದಾನೆ. ನಿಮ್ಮ ಈಗಿನ ಕಾರ್ಯದ ಮೂರ್ಖತನವು ತ್ರಿಮೂರ್ತಿಗಳನ್ನು ಬಿಟ್ಟರೆ ಉಳಿದೆಲ್ಲರಿಗೂ ನಿಚ್ಚಳವಾಗಿ ಕಾಣುವಂತಿದೆ."

ಲಕ್ಷ್ಮಿಯ ವ್ಯಂಗ್ಯೋಕ್ತಿಗಳನ್ನು ಗಮನಿಸದೆ ವಿಷ್ಣು, "ಪ್ರಿಯೆ, ನನ್ನದೊಂದು ಸೂಚನೆಯನ್ನು ಕೇಳು. ನಾವು ವಿದ್ಯಾಧರ ಮತ್ತು ಚಂದ್ರಕಾಂತ ಇಬ್ಬರನ್ನೂ ಪರೀಕ್ಷಿಸೋಣ. ನಮ್ಮ ಅನುಗ್ರಹಕ್ಕೆ ಹೆಚ್ಚು ಪಾತ್ರರು ಯಾರು ಎಂದು ನೀನೇ ಬಳಿಕ ನಿರ್ಧರಿಸು" ಎಂದನು.

ತುಸು ಹೊತ್ತು ವಾದಿಸಿ ಬಳಿಕ ಲಕ್ಷ್ಮಿ ಒಪ್ಪಿಕೊಂಡಳು.

೨

ಚಂದ್ರಕಾಂತ ವಿಷ್ಣುವಿನ ಪರಮ ಭಕ್ತನಾಗಿದ್ದ. ಈಗ ಇಪ್ಪತ್ತೊಂದು ವರ್ಷಗಳಿಂದ ಆತ ಪ್ರತಿ ಹುಣ್ಣಿಮೆಯ ದಿನವೂ ಆ ಮಹಾದೇವಸ್ಥಾನದಲ್ಲಿರುವ ಎರಡೂ ಮೂರ್ತಿಗಳಿಗೆ ಮುತ್ತು-ರತ್ನಗಳನ್ನರ್ಪಿಸುತ್ತ ಬಂದಿದ್ದ. ಆತನ ಉಪವಾಸ ಮತ್ತು ಪ್ರಾರ್ಥನೆಗಳು ವಿಧಿವತ್ತಾಗಿ ನಡೆಯುತ್ತಿದ್ದವು. ವೇದಗಳಲ್ಲಿ ಆತ ನಿಷ್ಣಾತ. ಆತನ ಆಶ್ರಮದಲ್ಲಿ ಕಲಿಯಲೆಂದು ಜಗತ್ತಿನ ಎಲ್ಲೆಡೆಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು.

ಒಂದು ಮಧ್ಯಾಹ್ನ ಆತ ಪೂಜೆಯಲ್ಲಿ ಮಗ್ನನಾಗಿರಲು ಒಂದು ಆಡು ತನ್ನ ಮರಿಯೊಂದಿಗೆ ಬಂದು "ಬೇ-ಏ-ಏ" ಎಂದು ದೀನ ಸ್ವರದಲ್ಲಿ

ಕೂಗಿತು. "ಬೇ-ಏ-ಏ" ಮರಿ ಕೂಡ ಅಷ್ಟೇ ದೀನವಾಣಿಯಲ್ಲಿ ಧ್ವನಿಗೈದಿತು.

"ಛೆ! ಏನಿದು ಪೀಡೆ!" ಚಂದ್ರಕಾಂತ ಸಿಟ್ಟಿನಿಂದ ಗುಡುಗಿದ. "ಪೂಜಾ ಸಮಯ ದಲ್ಲಿಯೂ ಮನುಷ್ಯನಿಗೆ ಶಾಂತಿ ದೊರೆಯಬಾ-ರದೇ? ನಾನು ಏಳುವ ಮೊದಲು ಒಳ್ಳೇ ಮಾತಿನಲ್ಲಿ ಇಲ್ಲಿಂದ ಓಡಿರಿ" ಎಂದು ಆತ ಹೋಮ ಕುಂಡದಿಂದ ಉರಿಯುವ ಕೊಳ್ಳಿಯೊಂದನ್ನೆತ್ತಿ ಆಡನ್ನು ಹೊಡೆಯುವವನಂತೆ ಅದನ್ನು ಅತ್ತಿತ್ತ ಬೀಸಿದ.

"ವಿಪ್ರಶ್ರೇಷ್ಠಾ, ನಮ್ಮನ್ನು ರಕ್ಷಿಸು. ಕಾಲಿ ದೇವಿಗೆ ಬಲಿಕೊಡಲು ಅವರು ನನ್ನ ಮರಿಯನ್ನು ಒಯ್ಯಬೇಕೆನ್ನುತ್ತಾರೆ. ಮರಿಯ ಬದಲು ನನ್ನನ್ನು ಬಲಿಕೊಡಿರಿ ಎಂದು ನಾನು ಬೇಡಿಕೊಂಡೆ. ಆದರೆ ಪೂಜಾರಿಗಳು ಕೇಳುವುದಿಲ್ಲ. ಸ್ವಾಮಿ, ನೋಡಿ, ನನ್ನ ಮರಿ ಎಷ್ಟು ಕೋಮಲವೂ ಸುಂದರವೂ ಆಗಿದೆ. ವಿಷ್ಣುವಿನ ಆಣೆ! ಅದನ್ನು ಮೃತ್ಯುವಿನ ದವಡೆಯಿಂದ ತಪ್ಪಿಸಿ ಕಾಪಾಡಿರಿ" ಎಂದು ಆಡು ಗೋಗರೆಯಿತು.

"ಮರುಳು ಪ್ರಾಣಿಯೇ, ನಿನ್ನ ಬಡಬಡಿಕೆಯನ್ನು ನಿಲ್ಲಿಸು. ನೀನೇನಾಡುತ್ತಿರುವಿ ಎಂದು ನಿನಗೆ ತಿಳಿಯದು. ಕೇವಲ ಪುಣ್ಯಾತ್ಮರಷ್ಟೇ ಉಚ್ಚರಿಸಬಹುದಾದ ವಿಷ್ಣುವಿನ ನಾಮವನ್ನು ಹಾಗೆಲ್ಲ ಉಚ್ಚರಿಸಬೇಡ. ನಿನ್ನ ಮರಿಯನ್ನು ಕಾಪಾಡಬೇಕೆಂದೆಯಾ? ದೇವರಿಗರ್ಪಿಸುವ ಬಲಿಗಳಿಗೆ ಮೂರ್ಖರು ಮಾತ್ರ ಅಡ್ಡ ಬರುತ್ತಾರೆ. ನಡಿ ಇಲ್ಲಿಂದ" ಎಂದು ಚಂದ್ರಕಾಂತ ಮತ್ತೆ ಉರಿಯುವ ಕೊಳ್ಳಿಯನ್ನು ಬೀಸಿದ.

"ಬೇ ಽ-ಽ-" ಎನ್ನುತ್ತ ಆಡು ಮತ್ತು ಮರಿ ಆಶ್ರಮದಿಂದ ಓಡಿ ನೆಟ್ಟಗೆ ವಿದ್ಯಾಧರನ ಗುಡಿಸಲಿಗೆ ಬಂದವು.

ವಿದ್ಯಾಧರನೂ ವಿಷ್ಣುವಿನ ಭಕ್ತ. ಆತ ತನ್ನ ಯೌವನವನ್ನು ಅಧ್ಯಯನ ಮತ್ತು ಮನನಗಳಲ್ಲಿ ಕಳೆದಿದ್ದ. ವೃದ್ಧಾಪ್ಯದೊಡನೆ ಜನರ ಪ್ರೀತಿ-ಗೌರವಗಳನ್ನು ಪಡೆದಿದ್ದ. ಆದರೆ ಆತನ ಬಳಿ ಒಂದಿನಿತು ಸಂಪತ್ತೂ ಇರಲಿಲ್ಲ. ಕೀರ್ತಿಯೂ ಅವನಿಗೆ ಲಭಿಸಿರಲಿಲ್ಲ. ಅವನ ಬಳಿಯಲ್ಲಿ ಮರುದಿನದ ಆಹಾರವೂ ಇರುತ್ತಿರಲಿಲ್ಲ. ಆತ ಶಿಷ್ಯರನ್ನು ಸಂಪಾದಿಸುವ ಗೋಜಿಗೆ ಹೋಗಿರಲಿಲ್ಲ. ಧರ್ಮಕ್ಕೆ ಸಂಬಂಧಪಟ್ಟ ವಾದ-ವಿವಾದಗಳಿಂದ ಆತ ದೂರವಿರುತ್ತಿದ್ದ.

ಆತನೂ ಮಧ್ಯಾಹ್ನದ ಪೂಜೆಯಲ್ಲಿ ಮಗ್ನನಾಗಿದ್ದಾಗ ಆಡು ಬಂದು, "ಬೇಽಽ" ಎಂದಿತು. "ಬೇಽಽಽ ಬೇಽಽಽ" ಎಂದು ಅದರ ಮರಿ ದನಿಗೂಡಿಸಿತು.

ಕಣ್ಣು ತೆರೆದು ವಿದ್ಯಾಧರ, "ಬನ್ನಿ, ಬನ್ನಿ, ಏನು ಬಂದಿರಿ?" ಎನ್ನುತ್ತ ವಿಷ್ಣುವಿನ ಮೂ-ರ್ತಿಗೇರಿಸಿದ್ದ ಪತ್ರಪುಷ್ಪಗಳನ್ನು ಒಂದು ಮುಷ್ಟಿಯಷ್ಟು ತೆಗೆದು ಅವುಗಳ ಮುಂದೆ ಚೆಲ್ಲಿದ.

ಆಡು ಅವನ್ನು ತಿನ್ನುತ್ತ ತನ್ನ ಕಷ್ಟವನ್ನು ತೋಡಿಕೊಂಡು ರಕ್ಷಣೆಯನ್ನು ಕೋರಿತು.

"ಅಂಜಬೇಡ. ನನ್ನ ದನದ ಕೊಟ್ಟಿಗೆಗೆ ಹೋಗಿರು. ನೋಡೋಣ, ಆ ದುಷ್ಟರು ನಿನಗೇನು ಮಾಡುತ್ತಾರೋ ನೋಡೋಣ. ಅಥವಾ, ಇಲ್ಲೇ ಇದ್ದುಬಿಡಲ್ಲ. ಈ ಪೂಜಾಗೃಹಕ್ಕೆ ಬರುವ ಧೈರ್ಯ ಅವರಿಗಾಗದು," ಎಂದು ವಿದ್ಯಾಧರ ಹೇಳಿದ.

ಆಡು ಕೃತಜ್ಞತೆಯಿಂದ, "ಬೇಽಽಽ" ಎಂದೊದರಿತು. ಮರಿ ಆನಂದದಿಂದ ಜಿಗಿಯುತ್ತ "ಬೇಽಽಽ" ಎಂದು ಕೂಗಿತು. ಅವುಗಳಿಗಾಗಿ ಇನ್ನಿಷ್ಟು ಎಲೆಗಳನ್ನು ತರಲೆಂದು ವಿದ್ಯಾಧರ ಪೂಜಾಗೃಹದಿಂದ ಹೊರಬಿದ್ದ.

"ನಾನು ನಿನಗೇನು ಹೇಳಿದ್ದೆ, ಪ್ರಿಯೆ?" ಎಂದು ಆಡಿನ ರೂಪಧಾರಣ ಮಾಡಿದ್ದ ವಿಷ್ಣು ಕೇಳಿದ.

"ಒಂದು ಪರೀಕ್ಷೆಯಿಂದ ಏನನ್ನೂ ಹೇಳಲು ಸಾಧ್ಯವಿಲ್ಲ" ಎಂದು ಮರಿಯಾಗಿದ್ದ ಲಕ್ಷ್ಮಿ ಹೇಳಿದಳು.

೩

ಮರುದಿನ ಮುಂಜಾನೆ ಚಂದ್ರಕಾಂತ ಗಂಗಾನದಿಯಲ್ಲಿ ಸ್ನಾನಮಾಡಿ ನಿತ್ಯಕ್ರಮದಂತೆ ವಿಷ್ಣುವಿನ ಗುಡಿಗೆ ಹೊರಟಿದ್ದ. ಗುಡಿಯ ದರ್ಶನವನ್ನು ಮಾಡಿಸುವ ರಸ್ತೆಯ ತಿರುವಿನಲ್ಲಿ ಆತ ಹೊರಳುತಿ

ದ್ದಂತೆ ಬಾಲಿಕೆಯೊಬ್ಬಳು ಕುಂಟ ವೃದ್ಧನೊಬ್ಬ ನನ್ನು ನಡೆಸಿಕೊಂಡು ಬರುವುದು ಆತನ ಕಣ್ಣಿಗೆ ಬಿತ್ತು. ಒಮ್ಮಿಂದೊಮ್ಮೆ ಆ ಕುಂಟ ನೆಲಕ್ಕೆ ಕುಸಿದು ಬಿದ್ದ.

"ಅಯ್ಯೋ ಅಪ್ಪಾ, ಅಯ್ಯೊ ಅಪ್ಪಾ" ಎಂದು ಕೂಗಿಕೊಳ್ಳುತ್ತಾ ಆ ಹುಡುಗಿ, "ಸ್ವಾಮೀ, ನನ್ನ ತಂದೆಯನ್ನೆಬ್ಬಿಸಲು ದಯವಿಟ್ಟು ನನಗೆ ಸಹಾಯ ಮಾಡಿ" ಎಂದು ಚಂದ್ರಕಾಂತನನ್ನು ಬೇಡಿಕೊಂಡಳು.

ಹುಡುಗಿ ಪಾದಗಳನ್ನು ಮುಟ್ಟಿ ನಮಸ್ಕರಿಸ ಬೇಕೆಂದಾಗ ಚಂದ್ರಕಾಂತ ಹಿಂದಕ್ಕೆ ಸರಿದು, "ತಡೆ ತಡೆ. ನೀನು ಯಾರು?" ಎಂದು ಕೇಳಿದ.

"ಪೂಜ್ಯರೇ, ನಾನೊರ್ವ ದುರ್ದೈವಿ ಚಂಡಾ ಲಳು. ನನ್ನ..."

"ನನಗನಿಸಿತ್ತು! ಅಸ್ಪೃಶ್ಯನನ್ನು ನಾನು ಮುಟ್ಟಬೇಕೆನ್ನುವ ನಿನಗೆ ತುಸುವಾದರೂ ಬುದ್ಧಿ ಯಿದೆಯೋ ಇಲ್ಲವೋ?"

"ಆದರೆ ಸ್ವಾಮಿ, ಹೀಗೆಯೆ ರಕ್ತಸ್ರಾವವಾದರೆ ನನ್ನ ತಂದೆ ಸತ್ತು ಹೋದಾನು," ಎಂದಳು ಹುಡುಗಿ. ಆ ಕುಂಟವೃದ್ಧನ ತಲೆ ಅವನು ನೆಲಕ್ಕೆ ಬಿದ್ದಾಗ ಒಡೆದು ಹೋಗಿತ್ತು. ಅವನ ಬಾಯಲ್ಲಿ ನೊರೆ ಬರತೊಡಗಿತ್ತು.

"ಅಯ್ಯೋ ಮರುಳೆ, ಮರಣವೆಂದರೇನು? ಅದೂ ಒಂದು ಮಾಯೆಯೇ. ಎಲ್ಲವೂ ಕರ್ಮ ಫಲ. ಇಹದಲ್ಲಿಯೂ ಪರದಲ್ಲಿಯೂ ನಾವು ನಮ್ಮ ಕರ್ಮಗಳ ಫಲವನ್ನ ಪಡೆಯುತ್ತೇವೆ. ನಿನ್ನ ತಂದೆಗೆ ಅವನ ಗತಪಾಪಗಳ ಫಲವೇ ದೊರೆ ಯುತ್ತಿದೆ. ಬಹುಶಃ ಅವನಿಗೆ ಬೇಗನೆ ಗುಣವಾ ಗಲೂ ಬಹುದು. ಹೇಗೇ ಇರಲಿ, ದೇಹವು ಕೇವಲ ಮಾಯೆ. ಆತ್ಮಕ್ಕೆಂದೂ ಕಷ್ಟವಾಗುವು ದಿಲ್ಲ. ನಾನಿನ್ನು ಹೋಗಬೇಕು. ಇಲ್ಲವಾದರೆ ದೇವಪೂಜೆಗೆ ನನ್ನಿಂದಾಗಿ ವಿಲಂಬವಾ ದೀತು," ಎಂದು ಚಂದ್ರಕಾಂತನು ಮೈಮುದು ಡಿಕೊಂಡು ನೆಲಕ್ಕೆ ಬಿದ್ದ ವೃದ್ಧನ ಸ್ಪರ್ಶವಾಗ ದಂತೆ ಅಲ್ಲಿಂದ ಮುಂದಕ್ಕೆ ನಡೆದನು

ಕೆಲ ನಿಮಿಷಗಳು ಕಳೆದವು. ನದಿಯಲ್ಲಿ ಸ್ನಾನ ಮಾಡಿಕೊಂಡು ವಿದ್ಯಾಧರ ಅದೇ ಹಾದಿ ಯಿಂದ ಬಂದ. ರಸ್ತೆಯಲ್ಲಿ ವೃದ್ಧ ಬಿದ್ದಿರುವುದು ಕಾಣಿಸುತ್ತಲೇ ಆತ ಲಗುಬಗೆಯಿಂದ ಬಂದು ಆತನ ಬಳಿ ಮೊಣಕಾಲೂರಿ ರಕ್ತ ಸೋರುತ್ತಿದ್ದ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡ. ತನ್ನ ಕಮಂಡಲುವಿನಿಂದ ನೀರನ್ನು ಬಸಿದು ಕೊಂಡು ವೃದ್ಧನ ತಲೆಗೆ ತಟ್ಟಿದ. ವೃದ್ಧ ಕಣ್ಣು ಬಿಟ್ಟ.

"ನನ್ನ ಮಗಳು-ಎಲ್ಲಿದ್ದಾಳೆ?" ಎಂದು ಕಣ್ಣು ತೆರೆದೊಡನೆ ಮುದುಕ ತೊದಲಿದ

ಕಣ್ಣೀರನ್ನೊರಸಿಕೊಳ್ಳುತ್ತ "ಇಲ್ಲೇ ಇದ್ದೇನೆ ಅಪ್ಪಾ, ಈಗ ಸೌಖ್ಯವಾಯಿತೇ?" ಎಂದು ಹುಡುಗಿ ಕೇಳಿದಳು.

"ಹೌದು. ಸ್ವಾಮಿ, ತಮಗೆ ನನ್ನಿಂದ ತುಂಬ ತೊಂದರೆಯಾಯಿತು."

"ಛೆ! ಛೆ!" ಎನ್ನುತ್ತ ವಿದ್ಯಾಧರ ತನ್ನ ಪಂಚೆಯನ್ನು ಹರಿದು ಆ ತುಂಡಿನಿಂದ ಮುದ ಕನ ತಲೆಗೆ ಪಟ್ಟಿ ಕಟ್ಟಿದ.

"ಸ್ವಾಮಿ, ನೀವಲ್ಲದಿದ್ದರೆ ನನ್ನ ತಂದೆ ರಕ್ತ ಸ್ರಾವದಿಂದ ಸತ್ತು ಹೋಗುತ್ತಿದ್ದ" ಎಂದು ಕೃತಜ್ಞತೆಯಿಂದ ಹುಡುಗಿ ಹೇಳಿದಳು. "ಮತ್ತೆ ನೀವಿನ್ನು ಪುನಃ ಸ್ನಾನ ಮಾಡಬೇಕಾಯಿತು ನಮ್ಮ ಸಲುವಾಗಿ" ಎಂದವಳು ದುಃಖದಿಂದ ಹೇಳಿದಳು.

"ನನ್ನ ಕೈಗಳನ್ನು ತೊಳೆದುಕೊಳ್ಳಬೇಕೆಂಬು ದೇನೋ ನಿಜ. ಅದೇನು ಮಹಾ! ಮನೆಯಲ್ಲೆ ತೊಳೆದುಕೊಳ್ಳಬಲ್ಲೆ" ಎಂದ ವಿದ್ಯಾಧರ.

"ಆದರೆ ನೀವು ನಮ್ಮನ್ನು ಮುಟ್ಟಿದ್ದೀರಿ. ನೀವು ಸ್ನಾನ ಮಾಡುವುದು ಬೇಡವೇ? ನಾವು ಚಾಂಡಾಲರು ಸ್ವಾಮಿ," ಎಂದು ಹುಡುಗಿ ತಲೆ ಕೆಳಗೆ ಹಾಕಿ ಅಂಜುತ್ತಲೇ ಹೇಳಿದಳು.

"ಆದರೇನಾಯಿತು ಮಗು, ನಮ್ಮಿಬ್ಬರಲ್ಲೂ ಒಂದೇ ಜೀವಾತ್ಮನಿಲ್ಲವೆ? ನಾನು ಬಿದ್ದು ಗಾಯ ವಾದರೆ ನನ್ನ ದೇಹದಿಂದಲೂ ಇದೇ ರೀತಿಯಾಗಿ ರಕ್ತ ಸೋರುವುದಿಲ್ಲವೆ? ಒಬ್ಬನೇ ದೇವರ ಮಕ್ಕ ಳಲ್ಲಿ ಇಂಥ ಭೇದವಿರಬಾರದು ಬನ್ನಿ, ಅಲ್ಲಿ ನನ್ನ ಗುಡಿಸಲಿದೆ. ಅಲ್ಲಿ ಬಂದು ವಿಶ್ರಾಂತಿ ಪಡೆಯಿರಿ" ಎಂದು ವಿದ್ಯಾಧರ ಹುಡುಗಿಯ ಸಹಾಯದಿಂದ

ವೃದ್ಧನನ್ನು ತನ್ನ ಗುಡಿಸಲಿಗೆ ನಡೆಸಿಕೊಂಡು ಹೋದ.

ವಿದ್ಯಾಧರನ ಗುಡಿಸಲಲ್ಲಿ ತಂದೆ ಮಗಳು ಇಬ್ಬರೇ ಇದ್ದಾಗ ಹುಡುಗಿಯ ರೂಪ ತಾಳಿದ್ದ ಲಕ್ಷ್ಮಿ ಪಿಸುದನಿಯಲ್ಲಿ, "ಆ ಲಫಂಗ ಚಂದ್ರ ಕಾಂತನ ಮೇಲೆ ನನಗೆ ಸಂಶಯ ಮೊದಲಿನಿಂದಲೂ ಇತ್ತು" ಎಂದಳು.

ಮುದುಕನ ರೂಪದಲ್ಲಿದ್ದ ವಿಷ್ಣುವು ಆಶ್ಚರ್ಯ ದಿಂದ, "ಅಂ! ಮೊನ್ನೆ ಮೊನ್ನೆ ಅವನ ಗುಣ ವರ್ಣನೆ ಮಾಡುತ್ತಿದ್ದಿ. ನಾನೇ . ."

ಸ್ತ್ರೀಸ್ವಭಾವಸಹಜವಾಗಿ ಲಕ್ಷ್ಮಿ "ಛೀ! ತೆಗೆಯಿರಿ. ನನ್ನ ಮಾತಿಗೆ ವಿಪರೀತ ಅರ್ಥ ಮಾಡುವುದೆಂದರೆ ನಿಮಗೆ ಎಲ್ಲಿಲ್ಲದ ಪ್ರೀತಿ" ಎಂದಳು.

೪

ಮಾರನೆಯ ದಿನ ಊಟದ ಹೊತ್ತಿಗೆ ತುಸ ಮುಂಚೆ ಕೆಲ ವಿದ್ಯಾರ್ಥಿಗಳು ಒಬ್ಬ ಮುದುಕಿಯನ್ನೂ ಅಸ್ಥಿ ಪಂಜರದಂತಿದ್ದ ಒಬ್ಬ ಹುಡುಗನನ್ನೂ ಎಳೆದುಕೊಂಡು ಚಂದ್ರಕಾಂತನ ಕೋಣೆಗೆ ನುಗ್ಗಿದರು.

"ಏನಿದು ಗದ್ದಲ?'' ಚಂದ್ರಕಾಂತ ಸಿಟ್ಟಿನಿಂದ ಕೇಳಿದನು.

"ಗುರುಗಳೇ, ಅನ್ನವನ್ನು ಕದಿಯುತ್ತಿದ್ದಾಗ ಇವರನ್ನು ಹಿಡಿದಿದ್ದೇವೆ.''

"ದಯವಿಟ್ಟು ನನ್ನ ಕೂದಲನ್ನು ಬಿಡಿ" ಎಂದು ಬೇಡಿಕೊಂಡಳು ಆ ಮುದುಕಿ.

"ಅಯ್ಯೊ, ನೋಯುತ್ತಿದೆ. ಅಷ್ಟು ಬಲವಾಗಿ ಹಿಂಡಬೇಡಿ, ಬಿಡಿ ನನ್ನ ಕಿವಿಯನ್ನು'' ಹುಡುಗ ಅಳುತ್ತಲೇ ಕೂಗಿಕೊಂಡ.

"ದಯೆ ಮತ್ತು ದೇವರ ಹೆಸರನ್ನುಚ್ಚರಿಸಲು ಪಾಪಿಗಳಾದ ನಿಮಗೆ ನಾಚಿಕೆಯಾಗುವುದಿಲ್ಲವೆ? ನೀವು ಅಪರಾಧವೆಸಗಿಲ್ಲವೆ? ಕಳವು ಮಾಡಲಿಲ್ಲವೇ?" ಚಂದ್ರಕಾಂತ ಗುಡುಗಿದನು.

"ಸ್ವಾಮಿ. ಮೂರು ದಿನಗಳಿಂದ ಉಪವಾಸ ವಿದ್ದೇನೆ. ನಾನು ಸತ್ತರೂ ಚಿಂತೆಯಿಲ್ಲ. ಆದರೆ ನನ್ನ ಕಣ್ಣೆದುರು ಹುಡುಗ ಸಾಯುವುದನ್ನು ನೋಡಲಾರೆ ಆದ್ದರಿಂದ...."

"ನನಗೆ ಅದೆಲ್ಲ ಪುರಾಣ ಬೇಡ. ಕದ್ದಿಯೊ ಇಲ್ಲವೊ ಬೊಗಳು" ಚಂದ್ರಕಾಂತ ಗರ್ಜಿಸಿದ.

"ಸ್ವಾಮಿ, ಒಂದು ತುತ್ತು ಅನ್ನ ಕೊಡಿರೆಂದು ಅಂಗಲಾಚಿದೆ ಆದರೆ ಈ ತರುಣ ಪಂಡಿತರು ಕನಿಕರ ತೋರಲಿಲ್ಲ."

ನಡುವೆಯೆ ಬಾಯಿಹಾಕಿ ಚಂದ್ರಕಾಂತ, "ನೀನು ಸರಿಯಾಗಿ ಉತ್ತರ ಹೇಳುವುದಿಲ್ಲ. ಹೇಳುವುದಾದರೂ ಹೇಗೆ? ಹೇಳಿ ಕೇಳಿ ನೀವು ಶೂದ್ರರು. ಅದು ನಿಮ್ಮ ರಕ್ತದಲ್ಲಿಯೇ ಬೇರೂರಿದೆ. ಈ ಪಾಪಿಗಳನ್ನು ಕೊತವಾಲನಲ್ಲಿ ಒಯ್ಯಿರಿ. ಸಮಾಜಕ್ಕೆ ನಾವು ಸಲ್ಲಿಸಬೇಕಾದ ಕರ್ತವ್ಯಗಳಿವೆ. ಇಂಥ ನೀಚರನ್ನು ಹೀಗೆ ಮುಕ್ತರನ್ನಾಗಿ ಇಡುವುದು ಗಂಡಾಂತರಕಾರಿ" ಎಂದು ಹೇಳಿದ.

೫

ವಿದ್ಯಾರ್ಥಿಗಳು ಮುದುಕಿ ಮತ್ತು ಹುಡುಗನನ್ನು ಎಳೆದೊಯ್ಯುತ್ತಿದ್ದಾಗ ಹಾದಿಯಲ್ಲಿ ಮಾವಿನ ತೋಪೊಂದು ಹತ್ತಿತು. ಗಿಡಗಳ ತುಂಬ ಮಾವಿನ ಹಣ್ಣುಗಳಿದ್ದವು. ಆ ವಿದ್ಯಾರ್ಥಿಗಳೂ ಹುಡುಗರೇ ಅಲ್ಲವೇ? ಮುದುಕಿ ಮತ್ತು ಹುಡುಗನ ಕಾವಲಿಗೆ ಒಬ್ಬನನ್ನು ಬಿಟ್ಟು ಉಳಿದವರೆಲ್ಲ ಮಾವಿನ ಹಣ್ಣುಗಳನ್ನು ಹಾರಿಸುವುದರಲ್ಲಿ ಮಗ್ನರಾದರು. ಈ ಸಂಧಿ ಸಾಧಿಸಿ ಆ ಮುದುಕಿ ಮತ್ತು ಹುಡುಗ ಕಾವಲಿನ ಹುಡುಗನ ಕಣ್ಣು ತಪ್ಪಿಸಿ ಓಡಿದರು

ತುಸು ದೂರದಲ್ಲೇ ಇದ್ದ ವಿದ್ಯಾಧರನ ಗುಡಿಸಲಿಗೆ ಅವರಿಬ್ಬರೂ ಗಿಡಗಳ ಮರೆಯಲ್ಲಿ ಸದ್ದಾಗದಂತೆ ನಡೆದು ಹೋದರು. ಗುಡಿಸಲಿನ ಹಿಂಬದಿಯ ಕಿಟಕಿಯಲ್ಲಿ ಮುದುಕಿ ಇಣಿಕಿ ನೋಡಿದಾಗ ಬಡಿಸಿದ ತಾಟೊಂದು ಅವಳ ಕಣ್ಣಿಗೆ ಬಿತ್ತು. ಮುದುಕಿ ಕಿಟಕಿಯೊಳಗಿಂದ ಕೈ ಹಾಕಿದಾಗ ಅದು ಅವಳ ಕೈಗೆ ಎಟುಕಿತು. ಮುದುಕಿ ತಾಟನ್ನೆಳೆದುಕೊಂಡು ಓಡಿದಳು. ಆದರೆ ಅವಸರದಲ್ಲಿ ತಾಟಿನಲ್ಲಿದ್ದ ಒಂದು ಬಟ್ಟಲ ಉರುಳಿ ಸಪ್ಪಳವಾಯಿತು. ಅಡಿಗೆ ಮನೆಯಲ್ಲಿದ್ದ ವಿದ್ಯಾಧರನ ಪತ್ನಿ ಆ ಸಪ್ಪಳ ಕೇಳಿ ನೋಡಿದಾಗ ಮುದುಕಿ ಓಡುತ್ತಿರುವುದು ಕಾಣಿಸಿತು. ಅವಳು

ಗಂಡನಿಗೆ ವಿಷಯವನ್ನು ತಿಳಿಸಿ "ಮುದುಕಿ ಮತ್ತು ಹುಡುಗ ಬಹುಶಃ ಆ ಗಿಡಗಂಟೆಯ ಹಿಂದೆ ಅವಿತುಕೊಂಡಿರಬೇಕು," ಎಂದಳು.

ವಿದ್ಯಾಧರ ಕಿಡಿಕಿಯಲ್ಲಿ ತಲೆಹಾಕಿ ನೋಡಿದ. "ಅಲ್ಲಿ ನೆಲದ ಮೇಲೆ ಬೆಳ್ಳಗೆ ಕಾಣಿಸುತ್ತದಲ್ಲ, ಅದೇನು?" ಎಂದಾತ ಹೆಂಡತಿಯನ್ನು ಕೇಳಿದ.

"ಮುದುಕಿ ಓಡುವಾಗ ತಾಟಿನಲ್ಲಿದ್ದ ತುಪ್ಪ ಕೆಳಗೆ ಬಿದ್ದಿದೆ."

"ಅಯ್ಯೋ, ಪಾಪ! ತುಪ್ಪವಿಲ್ಲದೆ ಅವಳು ಉಣ್ಣಬೇಕೆ? ಬೇಗ ಒಂದಿಷ್ಟು ತುಪ್ಪ ಕೊಡು."

ವಿದ್ಯಾಧರ ತುಪ್ಪದ ಬಟ್ಟಲನ್ನು ಹಿಡಿದು ಕೊಂಡು ಹೊರಗೋಡಿದ. "ಅಮ್ಮಾ ಮುದುಕಿ, ನಿಲ್ಲು ನಿಲ್ಲು" ಎಂದಾತ ಕೂಗಿದ. ಆದರೆ ಮುದುಕಿ ಓಡುವುದನ್ನು ನಿಲ್ಲಿಸಲಿಲ್ಲ. ಒಂದು ಕೈಲಿ ತಾಟು ಹಿಡಿದುಕೊಂಡು ಇನ್ನೊಂದು ಕೈಲಿ ಹುಡುಗನ ಕೈ ಹಿಡಿದುಕೊಂಡು ಓಡುತ್ತಿದ್ದ ಮುದುಕಿಯ ವೇಗ ಮಂದವಾಗಿದ್ದುದರಿಂದ ವಿದ್ಯಾಧರ ಬೇಗನೆ ಅವಳ ಸಮೀಪಕ್ಕೆ ಬಂದ.

"ಓಡಬೇಡ, ಅಮ್ಮಾ" ಎಂದು ತೇಕುತ್ತ ವಿದ್ಯಾಧರ ಹೇಳಿದ.

"ಸ್ವಾಮಿ, ನನ್ನ ಮಗನನ್ನು ಬಡಿಯಬೇಡಿ. ನಾವು ಹಸಿವೆಯಿಂದ ಕಂಗಾಲಾಗಿದ್ದೇವೆ" ಎಂದು ಸಿಕ್ಕಿಬಿದ್ದ ಮುದುಕಿ ಥರಥರ ನಡುಗುತ್ತ ಹೇಳಿದಳು.

"ನನಗೆ ಗೊತ್ತು ಅಮ್ಮಾ, ನೀನು ಓಡಿಬರುವಾಗ ತಾಟಿನಲ್ಲಿದ್ದ ತುಪ್ಪ ಚೆಲ್ಲಿ ಹೋಗಿದೆ. ಇದೋ, ಬೇರೆ ತುಪ್ಪ ತಂದಿದ್ದೇನೆ," ವಿದ್ಯಾಧರ ಹೇಳಿದ.

ಮುದುಕಿಗೆ ನಂಬಿಕೆಯಾಗಲೇ ಇಲ್ಲ. ಆದರೆ ಕೊನೆಗೆ ವಿದ್ಯಾಧರನ ಮಾತಿನಲ್ಲಿ ನಂಬಿಕೆ ಹುಟ್ಟಿ ಅವಳು ಹುಡುಗನೊಂದಿಗೆ ಅವನ ಗುಡಿಸಲಿಗೆ ಬಂದಳು. ಅಲ್ಲಿ ಅವರಿಬ್ಬರಿಗೂ ಹೊಟ್ಟೆ ತುಂಬ ಅನ್ನ ದೊರೆಯಿತು.

೬

ಕೊನೆಗೆ ಮತ್ತೆ ತಾವಿಬ್ಬರೇ ಉಳಿದಾಗ ಲಕ್ಷ್ಮಿ ಹುಡುಗನ ವೇಷಬಿಟ್ಟು ಹೇಳಿದಳು : "ಮೊದಲೇ

ಹೇಳಿರಲಿಲ್ಲವೇ ನಾನು ? ಚಂದ್ರಕಾಂತನಂಥವರ ಕಾಣಿಕೆ ಮತ್ತು ಪ್ರಾರ್ಥನೆಗಳಿಂದ ದೂರವಾಗಿರಬೇಕು. ಆದರೆ ನೀವೇನು, ಬಹಳ ಸುಲಭದಲ್ಲಿ ಮೋಸಹೋಗುತ್ತೀರಿ."

"ಆದರೆ ಪ್ರಿಯೆ, ನೀನೇ ಅವನನ್ನು...." ಎಂದು ಮುದುಕಿಯ ವೇಷ ತ್ಯಜಿಸಿದ ವಿಷ್ಣು ಆರಂಭಿಸಿದ.

"ನನಗೆ ಗೊತ್ತು ಕೊನೆಗೆ ನನ್ನ ಮೇಲೆ ದೋಷ ಹೊರಿಸುತ್ತೀರೆಂದು. ಹೆಂಡತಿ ಅಂದಮೇಲೆ ಅನ್ನಿಸಿಕೊಳ್ಳಲೇಬೇಕು. ಎಲ್ಲ ಗಂಡಂದಿರೂ—ಮಹಾದೇವನನ್ನು ಬಿಟ್ಟರೆ–ಒಂದೇ. ಆತ ವಿಕ್ಷಿಪ್ತನಾದರೂ ಪಾರ್ವತಿಯ ಮಾತುಗಳಿಗೆ ಪ್ರತಿಯಾಗಿ ಒಂದಕ್ಷರವನ್ನೂ ಆಡುವುದಿಲ್ಲ. ಅವನಿಂದ ಒಂದೆರಡು ಒಳ್ಳೆಯ ಪಾಠಗಳನ್ನು ನೀವೇಕೆ ಕಲಿತುಕೊಳ್ಳುವುದಿಲ್ಲ ?"

"ಆದರೆ ಆತ ಅಪಾಯಕಾರಿ, ಅವನ ಸಹವಾಸ ಒಳ್ಳೆಯದಲ್ಲ ಎಂದು ಮೊನ್ನೆಯ ನೀನು ನನಗೆ ಎಚ್ಚರಿಕೆ ಕೊಡಲಿಲ್ಲವೆ ?"

"ಹುಂ. ಹೇಳಿರಿ. ನಿಮ್ಮ ತಪ್ಪು ಮುಚ್ಚಿಕೊಳ್ಳಲು ನನ್ನನ್ನು ಆರೋಪಿಯನ್ನಾಗಿ ಮಾಡಿರಿ. ಹೆಣ್ಣಿನ ಹಣೆಬರಹವಿಷ್ಟೇ! ಆ ಹಾಳು ಸರ್ಪದ ಮೇಲೆ ಇಡೀ ದಿನ ಮೈಚಾಚಿ ಮಲಗುವ ನಿಮ್ಮ ಪಾದಗಳನ್ನು ಒಂದೇ ಸವನೆ ಒತ್ತುತ್ತಿರುವುದಕ್ಕೆ ನನಗೆ ನೀವು ಕೊಡುವ ಬಹುಮಾನ ಇದು."

ಲಕ್ಷ್ಮಿ ಈ ರೀತಿ ಮಾತನಾಡುತ್ತಿದ್ದಾಗ ಅವುಗಳನ್ನು ಕೇಳಿ ಅಭ್ಯಾಸವಿದ್ದ ವಿಷ್ಣು ಮುಗುಳ್ನಗೆ ನಗುತ್ತಿದ್ದ.

"ಹುಂ. ನಗುವುದು ಮುಗಿದಮೇಲೆ ಗರುಡನನ್ನು ಕರೆಯುವಿರೇನು ? ವೈಕುಂಠವನ್ನು ಬಿಟ್ಟು ಮೂರು ದಿನಗಳಾಗಿವೆ. ಅಲ್ಲಿಗೆ ತಿರುಗಿ ಹೋಗಬೇಕು ಎಂಬ ನೆನಪಿದೆಯೇನು ನಿಮಗೆ? ಅಡಿಗೆಯವ ಉಗ್ರಾಣದ ಬಾಗಿಲನ್ನು ಹಾಕಿಯೇ ಇರಲಿಕ್ಕಿಲ್ಲ. ಕಾಮಧೇನುವನ್ನು ಕಾಲಕಾಲಕ್ಕೆ ಕರೆದು ಮೇವು ಹಾಕಿರಲಿಕ್ಕೂ ಇಲ್ಲ."

"ಹೌದು, ಮನೆಗೆ ಹೋಗೋಣ. ಆದರೆ ಈ ಇಬ್ಬರು ಭಕ್ತರ ಬಗ್ಗೆ ನಿನ್ನ ಅಭಿಪ್ರಾಯ ವೇನು ?"

"ವಿದ್ಯಾಧರನಿಗೆ ಅವನ ಹೆಂಡತಿ ಸಹಿತ, ವೈಕುಂಠದಲ್ಲಿ ಸ್ಥಳ ಕೊಡಬೇಕು."

"ಮತ್ತೆ ಚಂದ್ರಕಾಂತನಿಗೆ ?"

"ಆತ ಮತ್ತೆ ನೆಲಗಪ್ಪೆಯಾಗಿ ಜೀವನವನ್ನಾರಂಭಿಸಲಿ."

"ನೆಲಗಪ್ಪೆ ! ಪಾಪ ! ಇದು ತುಸು ಕಠಿಣ ಶಿಕ್ಷೆಯಾಗಲಿಲ್ಲವೆ? ಚಂದ್ರಕಾಂತ ಲಫಂಗನೇನೊ ಹೌದು. ಲವಲೇಶವೂ ಕರುಣೆಯಿಲ್ಲದ ಕ್ರೂರ, ನಿಜ. ಆದರೆ ಪುನಃ ಉತ್ಕ್ರಾಂತಿಯ ಪ್ರಾರಂಭಾವಸ್ಥೆಯಿಂದ ಜೀವನ ಆರಂಭಿಸುವುದೆಂದರೆ..."

"ಮತ್ತೆ ನೀವು ನಿಮ್ಮ ಮೂಲ ಸ್ವಭಾವಕ್ಕೇ ಬಂದಿರಲ್ಲ. ನಿಮ್ಮ ಹೃದಯ ಅವನಿಗಾಗಿ ಮರುಗುತ್ತದೆ. ಅವನೇ ನಿಮ್ಮ ಪ್ರೀತಿಪಾತ್ರ ಎಂದು ನನಗೆ ಗೊತ್ತಿತ್ತು. ಅವನ ವಿದ್ಯಾರ್ಥಿಗಳು ಜಗ್ಗಿದ ಸ್ಥಳದಲ್ಲಿ ನನ್ನ ಕಿವಿ ಇನ್ನೂ ಉರಿಯುತ್ತಿದೆ. ಅದೇನಿಲ್ಲ, ಆತ ನೆಲಗಪ್ಪೆಯಾಗಬೇಕು" ಲಕ್ಷ್ಮಿ ನಿರ್ಧಾರದಿಂದ ಹೇಳಿದಳು.

ಚಂದ್ರಕಾಂತ ನೆಲಗಪ್ಪೆಯಾದ.



**ಮಾತು ಬೆಳ್ಳಿಯಾದರೆ—**

**ಮೌನ ಬಂಗಾರವಂತೆ ;**

**ಹಾಗಾದರೆ, ಸದಾ ಮೌನಿಯಾದ ಮೂಕ ಚಿನ್ನದ ಬೊಂಬೆಯಲ್ಲದೆ ಮತ್ತೇನು ?**



# ಲಲ್ಲಿ ಅತ್ತದ್ದೇಕೆ ?

ಅಪರಾಹ್ನ ಸುಮಾರು 2 ಘಂಟೆಯ ಹೊತ್ತು. ನಾನು ನನ್ನ ಯಜಮಾನರ ಷರ್ಟಿಗೆ ಬಟನ್ ಹೊಲಿದು ಹರಿದ ಕಾಲರ್ ಮತ್ತು ಕಫ್ ಸರಿ ಮಾಡುತ್ತಿದ್ದೆ. ಅಷ್ಟರಲ್ಲಿ ಇದ್ದಕ್ಕಿದ್ದ ಹಾಗೆ, ನೆರೆಮನೆಯ ಪಮ್ಮಿಯೊಡನೆ ಆಡುತ್ತಿದ್ದ ನನ್ನ ಮಗಳು ಲಲ್ಲಿ ಗಟ್ಟಿಯಾಗಿ ಅಳುವ ಶಬ್ದ ಕೇಳಿಸಿತು. ನನಗೆ ಒಮ್ಮೆಲೇ ಗಾಬರಿಯಾಗಿ ಸೂಜಿ ಬೆರಳಿಗೆ ಚುಚ್ಚಿತು. ನಾನು ಎದ್ದು ಕೋಪದಿಂದಲೇ ಹೊರಗೆ ಓಡಿದೆ. ಆಗಲೇ ಪಮ್ಮಿಯ ಅಮ್ಮ ಸುಶೀಲಮ್ಮನೂ ಓಡಿಬಂದು ಲಲ್ಲಿಯನ್ನು ಎತ್ತಿಕೊಂಡರು. ಅವಳ ಕಣ್ಣೀರನ್ನು ಒರಸಿ " ನನ್ನ ಮುದ್ದು ಮಗುವಿಗೆ ಯಾರು ಹೊಡೆದರು ? " ಎಂದು ಕೇಳಿದರು.

ಲಲ್ಲಿ ಬಿಕ್ಕಿ ಬಿಕ್ಕಿ ಅಳುತ್ತಾ " ಅತ್ತೆ, ಅತ್ತೆ, ಪ... ಪ... ಪಮ್ಮಿ ನನ್ನ ಗೊಂಬೆಯ ಫ್ರಾಕನ್ನು ಕೊಳೆ ಮಾಡಿದಳು ! " ಎಂದಳು. " ಓಹೋ, ಹಾಗೋ ? ಪಮ್ಮಿಗೆ ಚೆನ್ನಾಗಿ ಹೊಡೆಯೋಣ. ನಿನ್ನ ಗೊಂಬೆಗೆ ಹೊಸ ಫ್ರಾಕ್ ತರುತ್ತೇನೆ " ಎಂದು ಹೇಳಿ ಸುಶೀಲಮ್ಮ ಲಲ್ಲಿಯನ್ನೂ ಪಮ್ಮಿಯನ್ನೂ ತಮ್ಮ ಮನೆಗೆ ಕರೆದುಕೊಂಡು ಹೋದರು. ಸುಶೀಲಮ್ಮ ಬಹಳ ಸದ್ಗುಣಿ. ಅವರಿಗೆ ಮಕ್ಕಳೆಂದರೆ ಜೀವ. ತನ್ನ ಮಕ್ಕಳು, ಬೇರೆಯವರ ಮಕ್ಕಳು ಎಂಬ ಭೇದ ಭಾವ ಅವರಿಗಿರಲಿಲ್ಲ. ಅವರ ಅಪ್ಪ ಬಹಳ ಶ್ರೀಮಂತರು. ಆದರೆ ಸುಶೀಲಮ್ಮನಿಗೆ ಸ್ವಲ್ಪವೂ ಜಂಭವಿರಲಿಲ್ಲ. ಇದನ್ನೆಲ್ಲಾ ನೆನಸುತ್ತ ಕುಳಿತಿದ್ದ ನನಗೆ ಅಲ್ಲಿಯೆ ಸ್ವಲ್ಪ ಕಣ್ಣು ಕೂರಿತು. ಸ್ವಲ್ಪ ಹೊತ್ತಿನ ಮೇಲೆ ಲಲ್ಲಿ ನನ್ನನ್ನು ಎಚ್ಚರಿಸಿದಳು. ಕಣ್ಣು ತೆರೆದಾಗ ಮೊದಲು ನನಗೆ ಕಾಣಿಸಿದ್ದು ಲಲ್ಲಿಯ ಗೊಂಬೆಗೆ ತೊಡಿಸಿದ್ದ ಹೊಸ ಫ್ರಾಕ್. ಅದು ಮುಂಚಿನ ಫ್ರಾಕ್‌ನ ಹಾಗೆಯೇ ಇತ್ತು. ಸುಶೀಲಮ್ಮ ಹೊಸ ಫ್ರಾಕ್ ಕೊಟ್ಟದ್ದು ನನಗೆ ಸರಿ ಕಾಣಲಿಲ್ಲ. ಕೂಡಲೇ ಅವರಲ್ಲಿಗೆ ಹೋಗಿ ಈ ವಿಷಯ ಅವರಿಗೆ ಹೇಳಿದೆ. ಆಗ ಸುಶೀಲಮ್ಮ "ಇಲ್ಲಮ್ಮ, ನಾನು ಹೊಸ ಫ್ರಾಕ್ ಕೊಂಡುಕೊಳ್ಳಲಿಲ್ಲ. ಕೆಲವು ಬಟ್ಟೆಗಳನ್ನು ಒಗೆಯಲಿಕ್ಕಿತ್ತು.



ಅವುಗಳೊಡನೆ ಈ ಫ್ರಾಕನ್ನೂ ಒಗೆದೆ. ಅಷ್ಟೆ." ಅಂದರು. ಅವರ ಮಾತನ್ನು ನಾನು ನಂಬಲಿಲ್ಲ. ಸುಶೀಲಮ್ಮನಂಥವರು ತಮ್ಮ ಬಟ್ಟೆಗಳನ್ನು ತಾವೇ ಒಗೆದು ಕೊಳ್ಳುವುದೆಂದರೇನು ? ಬಹಳ ವಿಚಿತ್ರ. ನಮ್ಮ ಬಟ್ಟೆಗಳನ್ನು ನಾನು ಮನೆಯಲ್ಲಿ ಒಗೆಯುವುದಿಲ್ಲ. ಒಗೆಯಲು ಅವನ್ನು ಹೊರಗೆ ಕಳುಹಿಸುತ್ತೇನೆ. ನಾನು ಹೇಳಿದೆ. "ಸುಶೀಲಮ್ಮ, ನೀವು ಹೇಳಿದ್ದನ್ನು ನಾನು ಹೇಗೆ ನಂಬಲಿ ? ನೀವು ಬಟ್ಟೆಗಳನ್ನು ಬಡಿಯುವ ಶಬ್ದ ನನಗೇಕೆ ಕೇಳಿಸಲಿಲ್ಲ?" "ನಿನಗೆ ನನ್ನ ಮಾತಿನಲ್ಲಿ ವಿಶ್ವಾಸವಾಗದಿದ್ದರೆ ಈ ಬಟ್ಟೆಗಳನ್ನು ನೋಡು. ಅವುಗಳಿಗೆ ಈಗ ತಾನೆ ಇಸ್ತ್ರಿ ಮಾಡಿ ಮುಗಿಸಿದೆ. ಇನ್ನು ಬಟ್ಟೆಗಳನ್ನು ಬಡಿಯುವ ವಿಷಯ ಹೇಳುವುದಾದರೆ...". ನಾನು ಅವರ ಮಾತಿನ ಕಡೆಗೆ ಲಕ್ಷ್ಯ ಕೊಡುತ್ತಿರಲಿಲ್ಲ. ಆ ಬಟ್ಟೆಗಳನ್ನೆ ಎವೆಯಿಕ್ಕದೆ ನೋಡುತ್ತಿದ್ದೆ. ಅವು ಎಷ್ಟು ನಿರ್ಮಲ ಹಾಗೂ ಪ್ರಕಾಶಮಾನವಾಗಿದ್ದುವು ! ಅವರನ್ನು ಹೊಗಳುತ್ತಿದ್ದೆ, ಆದರೆ ನನಗೆ ಒಂದು ವಿಷಯವನ್ನು ಅವರಿಂದ ತಿಳಿದುಕೊಳ್ಳ ಬೇಕಾಗಿತ್ತು. ತಾನು ಬಟ್ಟೆ ಒಗೆಯುವ ವಿಷಯದಲ್ಲಿ ಜನರು ಏನಾದರೂ ಅಂದುಕೊಂಡಾರೆಂಬ ಅಂಜಿಕೆ ಅವರಿಗಿಲ್ಲವೆ ? ನಾನು ಇದನ್ನು ಕೇಳಿದಾಗ ಅವರು ನಗುತ್ತಾ ಹೇಳಿದರು. "ಚೆನ್ನಾಗಿ ಹೇಳಿದೆ !...ನನ್ನ ಕೆಲಸವನ್ನು ಮಾಡಿಕೊಳ್ಳುವುದಕ್ಕೆ ನಾನೇಕೆ ನಾಚಬೇಕು ? ನನಗೆ ಅಂತಹ ಒಣ ಜಂಭವಿಲ್ಲಮ್ಮ.



ಬಟ್ಟೆಗಳನ್ನು ನಾನೇ ಒಗೆಯುವುದರಿಂದ ಬಹಳ ಮಿತವ್ಯಯವಾಗುತ್ತದೆ. ಪ್ರತಿದಿನವೂ ಉಡಲು ಸ್ವಚ್ಛವಾದ ಬಟ್ಟೆಗಳು ಸಿಗುವುದು ಮಾತ್ರವಲ್ಲ, ಅವು ಹೆಚ್ಚು ಬಾಳಿಕೆ ಕೂಡ ಬರುತ್ತವೆ." "ಹೆಚ್ಚು ಬಾಳಿಕೆ ಬರುತ್ತವೆಯೆ ? ಅದು ಹೇಗಮ್ಮ ? ನಮ್ಮ ಬಟ್ಟೆಗಳು ಬಹಳ ಬೇಗ ಹರಿದು ಹೋಗುತ್ತವೆ." "ಅದಕ್ಕೆ ಕಾರಣ ನಿಮ್ಮ ಬಟ್ಟೆಗಳು ಬಡಿದು ಒಗೆಯಲ್ಪಡುತ್ತವೆ. ನಾನು ನನ್ನ ಬಟ್ಟೆಗಳನ್ನು ಬಡಿಯದೆಯೆ ಸನ್‌ಲೈಟ್ ಸೋಪಿನಿಂದ ಒಗೆಯುತ್ತೇನೆ." ಆಗ ನಾನು ಅಂದೆ "ಇದು ನನಗೆ ಹೊಸ ವಿಷಯ." "ಇದರಲ್ಲಿ ಹೊಸತೇನೂ ಇಲ್ಲ. ನೀನೂ ನಾನೂ ಹುಟ್ಟುವ ಮೊದಲೇ ಸನ್‌ಲೈಟ್ ಸೋಪು ಪ್ರಸಿದ್ಧವಾಗಿತ್ತು !" ಈ ಶುದ್ಧವಾದ, ಉತ್ತಮವಾದ ಸೋಪು ಸಮೃದ್ಧ ನೊರೆಯನ್ನು ಕೊಡುತ್ತದೆಂದೂ, ಆ ನೊರೆ ಎಲ್ಲಾ ಕೊಳೆಯನ್ನು–ಕಣ್ಣಿಗೆ ಕಾಣಿಸುವ ಮತ್ತು ಕಾಣಿಸದ ಕೊಳೆಯನ್ನು–ಕೆಲವೇ ಕ್ಷಣಗಳಲ್ಲಿ ತೆಗೆದು ಬಿಡುತ್ತದೆಂದೂ ಸುಶೀಲಮ್ಮ ವಿವರಿಸಿ ಹೇಳಿದರು. ಈಗ ನನಗೆ ಕೂಡ ಜನರು ಏನು ಅಂದುಕೊಳ್ಳುತ್ತಾರೋ ಎಂಬ ಭಯ ಇಲ್ಲ. ನಮ್ಮ ಎಲ್ಲ ಬಟ್ಟೆಗಳನ್ನು ಸನ್‌ಲೈಟ್ ಸೋಪಿನಿಂದ ನಾನೇ ಮನೆಯಲ್ಲಿಯೇ ಒಗೆದುಕೊಳ್ಳುತ್ತೇನೆ. ಆದರಿಂದ ಮಿತವ್ಯಯವಾಗುತ್ತದೆ. ಕೇವಲ ಒಂದು ಸನ್‌ಲೈಟ್



ಸೋಪು 40–50 ಸಣ್ಣ ದೊಡ್ಡ ಬಟ್ಟೆಗಳನ್ನು ನಿರ್ಮಲವಾಗಿ ಮತ್ತು ಪ್ರಕಾಶಮಾನವಾಗಿ ಒಗೆಯುತ್ತದೆಂದು ನನಗೆ ಗೊತ್ತಾಗಿದೆ. ಹರಿದದ್ದನ್ನು ಸರಿಮಾಡಿದ ಬಟ್ಟೆಗಳನ್ನು ಈಗ ನನ್ನ ಯಜಮಾನರು ಧರಿಸಬೇಕಾಗಿಲ್ಲ. ಕಫ್‌ಗಳನ್ನೂ ಕಾಲರ್‌ಗಳನ್ನೂ ಕೋಟಿನಿಂದ ಅಡಗಿಸುವ ಆವಶ್ಯಕತೆ ಈಗ ಅವರಿಗಿರುವುದಿಲ್ಲ. ಈಗ ನಮಗೆಲ್ಲರಿಗೂ ಚೆನ್ನಾಗಿ ಒಗೆದ ಬಟ್ಟೆಗಳು ನಿತ್ಯದ ಉಪಯೋಗಕ್ಕೆ ಸಿಗುತ್ತವೆ. ಎಲ್ಲ ವಿಧಗಳಲ್ಲಿಯೂ ಉಳಿತಾಯವಾಗುತ್ತದೆ. ಗೃಹಿಣಿಗೆ ಇನ್ನೇನು ಬೇಕು ?



ಪ್ರಾಚೀನ ರಾಜರ ಸತ್ವಪರೀಕ್ಷೆ ಇದರಿಂದಾಗುತ್ತಿತ್ತು

# ಅಶ್ವಮೇಧವೆಂದರೇನು?

ಅಶ್ವಮೇಧಯಾಗದ ಹೆಸರು ಕೇಳದವರಾರು? ಅದು ನಮ್ಮ ನುಡಿಕಟ್ಟಿನಲ್ಲೇ ಸೇರಿಹೋಗಿದೆ. "ಇದೇನು ಅಶ್ವಮೇಧ ಯಾಗವೇ?" ಎಂದು ಸಣ್ಣ ಕೆಲಸಗಳನ್ನು ಕುರಿತು ನಾವು ಹೇಳುತ್ತೇವೆ. ಲಕ್ಷ್ಮೀಶನ ಜೈಮಿನಿ ಭಾರತ ಅಶ್ವಮೇಧ ಯಾಗವನ್ನು ನಮಗೆ ಸುಪರಿಚಿತವಾಗಿ ಮಾಡಿದೆ. ಪಾಂಡವರು ಆ ಯಜ್ಞವನ್ನು ಮಾಡಿ ಚಕ್ರವರ್ತಿಗಳೆನಿಸಿದರು. ರಾಮನು ಬ್ರಹ್ಮಹತ್ಯಾದೋಷವನ್ನು (ರಾವಣ ಬ್ರಾಹ್ಮಣನಾಗಿದ್ದ) ನಿವಾರಿಸಿಕೊಳ್ಳಲು ಅಶ್ವಮೇಧವನ್ನು ಮಾಡಿದ. ನೂರು ಅಶ್ವಮೇಧಗಳನ್ನು ಮಾಡಿದವನಿಗೆ ಇಂದ್ರಪಟ್ಟ ದೊರಕುವುದೆಂದಿತ್ತು. ಅಂಥ ಪ್ರಯತ್ನಗಳ ಫಲವನ್ನು ನಹುಷ, ತ್ರಿಶಂಕು ಮೊದಲಾದವರ ಕಥೆಗಳು ಹೇಳುತ್ತವೆ.

ಪುರಾಣ ಕಾಲದಲ್ಲಿ ಅಶ್ವಮೇಧಯಾಗ ಸಾಕಷ್ಟು ಪ್ರಚಲಿತವಾಗಿತ್ತು. ಆದರೆ ಇತಿಹಾಸ ಕಾಲದಲ್ಲಿ ಅದನ್ನೆಸಗಿದವರು ವಿರಳ. ಶುಂಗ ವಂಶದ ಪುಷ್ಯಮಿತ್ರನು (ಕ್ರಿ. ಪೂ. ೨ನೇ ಶತಮಾನ) ಗ್ರೀಕ್ ದಾಳಿಗಾರರನ್ನು ಸೋಲಿಸಿದ ನಂತರ ಅಶ್ವಮೇಧಯಾಗವನ್ನು ಮಾಡಿದನು. ಭಾರತದ ಸ್ವರ್ಣಯುಗವಾದ ಗುಪ್ತಕಾಲದಲ್ಲಿ ಸಮುದ್ರಗುಪ್ತನೂ (ಕ್ರಿ. ಶ. ೪ನೇ ಶತಮಾನ) ಎರಡನೇ ಚಂದ್ರಗುಪ್ತನೂ (ಕ್ರಿ. ಶ. ೫ನೇ ಶತಮಾನ) ಆ ಯಾಗವನ್ನು ಆಚರಿಸಿದರು. ಪರ್ಶಿಯದಿಂದ ಕನ್ಯಾಕುಮಾರಿಯ ವರೆಗೆ ಅಶ್ವಮೇಧದ ಕುದುರೆಯನ್ನು ಬೆಂಬತ್ತಿ ವಿಜಯಯಾತ್ರೆ ಮಾಡಿದ ಸಮುದ್ರಗುಪ್ತನ ಯಜ್ಞವನ್ನೇ ಕಾಲಿದಾಸ ತನ್ನ ರಘುವಂಶ ಕಾವ್ಯದಲ್ಲಿ ರಘುರಾಜನ ಅಶ್ವಮೇಧದ ವ್ಯಾಜದಿಂದ ಬಣ್ಣಿಸಿದ್ದಾನೆಂದು ಭಾವಿಸಲಾಗಿದೆ.

೧೯೫೩ರಲ್ಲಿ ದೆಹರಾದೂನದ ಬಳಿ ನಡೆದ ಉತ್ಖನನಗಳಲ್ಲಿ ಕ್ರಿ. ಶ. ೩ನೇ ಶತಮಾನದಲ್ಲಿ ಶೀಲವರ್ಮ ಚಕ್ರವರ್ತಿ ಆಚರಿಸಿದ ಅಶ್ವಮೇಧ ಯಾಗದ ವೇದಿಕೆ ಮೊದಲಾದವು ದೊರೆತವು. ಅಶ್ವಮೇಧ ಯಾಗವನ್ನು ಮಾಡಿದ ಕೊನೆಯ ಮಹಾ ಚಕ್ರವರ್ತಿಯೆಂದರೆ ಬಹುಶಃ ಚಾಲುಕ್ಯ ಸಾಮ್ರಾಜ್ಯಸ್ಥಾಪಕನಾದ ಕರ್ನಾಟಕದ ಮೊದಲನೇ ಪುಲಿಕೇಶಿ (ಕ್ರಿ. ಶ. ೬ನೇ ಶತಮಾನ) ಯೆಂದು ತೋರುತ್ತದೆ. ಅನಂತರ ಅಶ್ವಮೇಧ ಯಾಗದ ಹೆಸರು ಕೇಳಿಸುವುದಿಲ್ಲ.

ಇತಿಹಾಸ ಕಾಲದಲ್ಲಿ ಅಶ್ವಮೇಧ ಯಾಗ ಮಾಡಿದವರು ವಿರಳವಾಗಿರಲು ಕಾರಣವಿಲ್ಲದಿಲ್ಲ. ಅಶ್ವಮೇಧವು ಬಹಳ ದುಷ್ಕರವಾದ ಯಜ್ಞ. ಅದಕ್ಕೆ ಅಪಾರ ಹಣ ಬೇಕಾಗುತ್ತಿತ್ತು. ಅದನ್ನು ಒದಗಿಸಿಕೊಂಡರೂ ಅದಕ್ಕೆ ಸಂಕಲ್ಪ ಮಾಡುವ ರಾಜನ ಭುಜಬಲವು ಅಗಾಧವಾಗಿದ್ದ ಹೊರತು ಯಜ್ಞ ಪೂರ್ಣವಾಗಲಾರದು. ಸುತ್ತಮುತ್ತಲ ಚಿಕ್ಕದೊಡ್ಡ ರಾಜರನ್ನು ಗೆಲ್ಲುವ ಶೌರ್ಯ ಧೈರ್ಯ ಚತುರಂಗ ಬಲಗಳು ಅವನಲ್ಲಿರಬೇಕು. ಅಶ್ವಮೇಧದ ಕುದುರೆಯನ್ನು ಬಿಟ್ಟು ಒಂದು ವರ್ಷ ಕಾಲ ಅದು ಹೋದಲ್ಲೆಲ್ಲ ಬೆಂಬತ್ತಿ ಅಲ್ಲಿನ ರಾಜರನ್ನು ಶರಣಾಗತರಾಗಿಸಿಕೊಳ್ಳಬೇಕಾಗುತ್ತಿತ್ತು. ಪಾಂಡವರ ಕುದುರೆಯು ಒಂದು ವರ್ಷ ಕಾಲದಲ್ಲಿ ೭,೦೦೦ ಮೈಲು ಪ್ರದೇ

"ಕರ್ಮವೀರ" ದಿಂದ

ಶದಲ್ಲಿ ಸಂಚರಿಸಿರಬೇಕೆಂದು ಶ್ರೀ ರಾ. ನ. ಮಳಗಿಯವರು ಮಹಾಭಾರತದ ಆಧಾರದಿಂದ ಅಂದಾಜು ಮಾಡಿದ್ದಾರೆ. ಇಷ್ಟು ವಿಸ್ತಾರ ಪ್ರದೇಶವನ್ನು ಗೆಲ್ಲುವುದೆಂದರೆ ಸಾಮಾನ್ಯವೆ ?

ಒಂದೇ ಮಾತಿನಲ್ಲಿ, ಒಬ್ಬ ರಾಜನು ಅಶ್ವಮೇಧಯಾಗದ ಸಂಕಲ್ಪ ಮಾಡಿದನೆಂದರೆ ಭೂಮಂಡಲದ ಸಕಲ ರಾಜರಿಗೂ ಇದೊಂದು ಆಹ್ವಾನವೆಂದು ಅರ್ಥವಾಗುತ್ತಿತ್ತು. ಆ ಅರಸನು ತನ್ನ ಪರಾಕ್ರಮದ ಪರೀಕ್ಷೆಗಷ್ಟೇ ಅಲ್ಲ, ತನ್ನ ಅದೃಷ್ಟದ ಸಂಗಡ ಚದುರಂಗಕ್ಕೂ ಇಳಿದಂತೆ. ಈ ಬಗೆಯ ಒಂದು ಧಾರ್ಮಿಕ ವಿಧಿ ಜಗತ್ತಿನ ಬೇರಾವ ದೇಶದಲ್ಲಿಯೂ ಪ್ರಚಲಿತವಾಗಿದ್ದಂತಿಲ್ಲ.

ಅಶ್ವಮೇಧವು ಅತ್ಯಂತ ಪ್ರಾಚೀನ ಆರ್ಯ ವಿಧಿಯಾಗಿತ್ತೆಂಬಲ್ಲಿ ಸಂಶಯವಿಲ್ಲ. ಯಜುರ್ವೇದದಲ್ಲಿ ಅದರ ಜಟಿಲ ವಿಧಾನವು ವಿಸ್ತಾರವಾಗಿ ಉಕ್ತವಾಗಿದೆ. ಭವ್ಯತೆಯಲ್ಲಿ ಅದನ್ನು ಮೀರಿಸುವ ಯಜ್ಞವಿಲ್ಲ. ಅದನ್ನು ನೆರವೇರಿಸಬಯಸುವ ರಾಜನು ತನ್ನ ಸಮಸ್ತವಿತ್ತವನ್ನೂ ಶೂರ ಸೈನಿಕರನ್ನೂ ಒಂದೆಡೆ ಕೂಡಿಸಬೇಕಾಗುತ್ತಿತ್ತು. ಅವನ ಪ್ರಜೆಗಳಾದರೂ ಅದರಲ್ಲಿ ಹೃತ್ಪೂರ್ವಕ ಸಹಕಾರ ನೀಡುತ್ತಿದ್ದರು. ಯಾಕಂದರೆ ಅದು ಅರಸನ ಸ್ವಂತ ಧೈರ್ಯ ಸಾಹಸಗಳ ಕೀರ್ತಿಯನ್ನು ದಿಗ್ದೇಶದಲ್ಲಿ ಹಬ್ಬಿಸುವುದು ಮಾತ್ರವಲ್ಲ, ಇಡೀ ರಾಜ್ಯದ ಐಹಿಕ ಕಲ್ಯಾಣವನ್ನು ಸಾಧಿಸುವುದೆಂಬ ವಿಶ್ವಾಸ ಅವರಿಗಿತ್ತು. ಯಜ್ಞದ ಫಲವು ಯಜುರ್ವೇದದಲ್ಲಿ ಹೀಗೆ ಹೇಳಲ್ಪಟ್ಟಿದೆ :

**“ಆ ಬ್ರಹ್ಮನ್ ಬ್ರಾಹ್ಮಣಸ್ತೇಜಸ್ವೀ ವರ್ಚಸ್ವೀ ಜಾಯತಾಂ; ಆ ರಾಷ್ಟ್ರೇ ರಾಜನ್ಯಃ ಶೂರ ಇಷವ್ಯೋ ಮಹಾರಥೋ ಜಾಯತಾಂ; ದೋಗ್ಧ್ರೀ ಧೇನುಃ ; ವೋಢಾನಡ್ವಾನ್ ; ಆಶುಃ ಸಪ್ತಿಃ ; ಸಭೇಯೋ ಯುವಾ ; ಪುರಂಧಿರ್ಯೋಷಾ; ಜಿಷ್ಣೂ ರಥೇಷ್ಠಾ; ಅಸ್ಯ ಯಜಮಾನಸ್ಯ ವೀರೋ ಜಾಯತಾಂ; ನಿಕಾಮೇ ನಿಕಾಮೇ ನಃ ಪರ್ಜನ್ಯೋ ವರ್ಷತು; ಫಲವತೀರ್ನಾ ಓಷಧಯಃ ಪಚ್ಯಂತಾಂ; ಯೋಗಕ್ಷೇಮೋ ನಃ ಕಲ್ಪತಾಮ್.”**

(ಬ್ರಾಹ್ಮಣನು ತೇಜಸ್ವಿಯೂ ವರ್ಚಸ್ವಿಯೂ, ಕ್ಷತ್ರಿಯನು ಶೂರನೂ ಮಹಾರಥನೂ, ಹಸು ತುಂಬ ಹಾಲು ಕೊಡುವಂಥದೂ, ಎತ್ತು ಭಾರ ಹೊರುವಂಥದೂ, ಕುದುರೆಗಳು ವೇಗಶೀಲವೂ, ಹೆಂಗಸರು ಕೀರ್ತಿಶಾಲಿಗಳೂ ಆಗಿ ಕಾಲಕಾಲದಲ್ಲಿ ಮಳೆ ಬೆಳೆಯಾಗಿ ನಮಗೆ ಕಲ್ಯಾಣ ದೊರಕೊಳ್ಳಲಿ.)

ಯಜಮಾನನಾದ ರಾಜನು ಕುದುರೆಗೆ ದರ್ಭೆಯಿಂದ ರಚಿಸಿದ ಮೇಖಲೆ(ನಡುಪಟ್ಟಿ)ಯನ್ನು ಬಿಗಿಯುವುದರಿಂದ ಯಜ್ಞ ವಿಧಿ ಪ್ರಾರಂಭವಾಗುತ್ತಿತ್ತು. ಈ ಮೇಖಲೆ ೪॥ ಅಡಿ ಉದ್ದವಾಗಿರಬೇಕೆಂದು ವಿಧಿಸಲ್ಪಟ್ಟಿದೆ. ಕುದುರೆ ಸಕಲ ಲಕ್ಷಣ ಲಕ್ಷಿತವಾಗಿರತಕ್ಕದ್ದು. ಅದರ ವಯಸ್ಸು ೨೪ ಮಿಕ್ಕಿ ೧೦೦ ಕ್ಕೆ ಕಡಿಮೆಯಿರತಕ್ಕದ್ದು.

ಲಕ್ಷ್ಮೀಶ ಕವಿ ಆ ಕುದುರೆಯ ಲಕ್ಷಣಗಳನ್ನು ವ್ಯಾಸರ ಬಾಯಿಂದ ಹೀಗೆ ಹೇಳಿಸಿದ್ದಾನೆ :

**“ಸ್ವಚ್ಛತರ ಧವಳಾಂಗದತಿಮನೋಹರ ಪೀತಪುಚ್ಛದ ಸುಗಮನದೊಂದೇ ಕಿವಿಯೊಳೆಸೆವ ನೀಲಚ್ಛವಿಯ ಕೋಮಲ ತುರಂಗಮಂ...”**

ಮೈ ಬೆಳ್ಳಗಿರಬೇಕು, ಬಾಲ ಹಳದಿಯಿರಬೇಕು, ನಡೆಸುಂದರವಾಗಿರಬೇಕು, ಒಂದೇ ಕಿವಿಯಲ್ಲಿ ನೀಲ ಬಣ್ಣದ ಪಟ್ಟೆಯಿರಬೇಕು... ಯಜಮಾನನು ಕುದುರೆಗೆ ಮಂತ್ರಜಲವನ್ನು ಪ್ರೋಕ್ಷಿಸಿ, “ಇದನ್ನು ಕೊಂದು ಯಜ್ಞ ವಿಘ್ನವನ್ನುಂಟುಮಾಡಿದವನನ್ನು ನಾಶಮಾಡುವೆನು” ಎಂದು ಶಪಥ ತೊಡುತ್ತಿದ್ದನು. ಯಜ್ಞಸ್ಥಾನದಲ್ಲಿ ಆಗ ಒಂದು ನಾಯಿಯನ್ನು ಕೊಂದು ಕುದುರೆಗೆ ಅಡ್ಡಿ ಮಾಡಿದವನಿಗೆ ಅದೇ ಗತಿಯಾಗುವುದೆಂದು ಭಯಪ್ರದರ್ಶನ ಮಾಡಲಾಗುತ್ತಿತ್ತು.

ಅಲ್ಲಿಂದ ಆ ಕುದುರೆಯನ್ನು ಹೋಮವೇದಿಕೆಯ ಬಳಿಗೆ ಒಯ್ದು ನಾನಾ ದೇವತೆಗಳಿಗೆ ಆಜ್ಯಾಹುತಿಯನ್ನು ಕೊಟ್ಟು ಕುದುರೆಯ ವಿವಿಧ ಗುಣಗಳನ್ನು ವರ್ಣಿಸುವ ಮಂತ್ರಗಳನ್ನು ಪಠಿಸುತ್ತಾರೆ. ಆಮೇಲೆ ಯಜಮಾನನು ಕುದುರೆಯ ಕಿವಿಯಲ್ಲಿ—

" ವಿಭೂ ಮಾತ್ರಾ ಪ್ರಭುಃ ಪಿತ್ರಾ ಅಶ್ವೋಽಸಿ
-- ಆದಿತ್ಯಾನಾಂ ಪತ್ವಾನ್ವಿಹಿ.."

(ತಾಯಿಯಿಂದ ವೈಭವಯುತನೂ ತಂದೆಯಿಂದ ಪ್ರಭಾವಯುತನೂ ಆದ ಕುದುರೆಯೇ, ಆದಿತ್ಯರ ಪಥವನ್ನು ಅನುಸರಿಸುವವನಾಗು) ಎಂದು ಉಸುರುತ್ತಾನೆ. ಅನಂತರ ಕುದುರೆಯನ್ನು ಈಶಾನ್ಯಾಭಿಮುಖವಾಗಿ ನಿಲ್ಲಿಸಿ ಹಗ್ಗ ಬಿಚ್ಚಿ ಬಿಡಲಾಗುತ್ತದೆ.

ಯಜ್ಞಾಶ್ವದ ಹಿಂದೆ ವೀರಾಧಿವೀರರೂ ಸಾಮಂತರೂ ಬೆಂಗಾವಲಾಗಿ ಹೊರಡುವರು. ಸರ್ವಾಯುಧ ಸಂಪನ್ನರಾದ ಅವರು ಕುದುರೆ ಹೋದಲ್ಲಿ ಹೋಗಿ ಅದನ್ನು ತಡೆದವರನ್ನೂ ಹಿಡಿಸಿದವರನ್ನೂ ಜಯಿಸಬೇಕು.

ಅದು ಯಾವ ಯಾವ ರಾಜ್ಯದಲ್ಲಿ ಕಾಲಿರಿಸಿತೋ ಆಯಾ ರಾಜ್ಯದ ಅರಸರು ಅದನ್ನು ಕಟ್ಟಿ ಅಶ್ವಪಾಲರೊಡನೆ ಹೋರಾಡಲು ಸಿದ್ಧರಾಗಬೇಕು, ಇಲ್ಲದಿದ್ದರೆ ತೆಪ್ಪಗೆ ಶರಣಾಗತರಾಗಿ ಕಪ್ಪಕೊಟ್ಟು ಅಶ್ವಮೇಧದ ಯಜಮಾನನ ಚಕ್ರಾಧಿಪತ್ಯವನ್ನು ಒಪ್ಪಿಕೊಳ್ಳಬೇಕು.

ಅದು ಹೀಗೆ ಸಂಚರಿಸುತ್ತಿರುವಾಗ ಇತ್ತ ಹೋಮಾಗ್ನಿಯನ್ನು ಕಾಪಾಡಿಕೊಂಡು ಅನೇಕ ವಿಧಿಗಳನ್ನು ಅರಸನು ಆಚರಿಸುತ್ತಿದ್ದು ಬ್ರಾಹ್ಮಣ ಸಂತರ್ಪಣೆ ಮಾಡುತ್ತಿರಬೇಕು.

ಈ ಪ್ರಕಾರ ಒಂದು ಸಂವತ್ಸರ ಕಾಲ ಕುದುರೆ ಅಲೆಯುತ್ತಿರುತ್ತದೆ. ಅದು ಹೋದಹೋದಲ್ಲಿ ರಾಜರನ್ನು ಹತ್ತಿಕ್ಕಿ ಬೆಂಗಾವಲಿಗರು ಸಂವತ್ಸರಾಂತ್ಯದಲ್ಲಿ ವಿಜಯಿಗಳಾಗಿ ರಾಜಧಾನಿಗೆ ಮರಳುವರು.

ಆ ಮೇಲೆ ಯಜ್ಞ ಆರಂಭ. ಯಜ್ಞಾಶ್ವವನ್ನು " ಈ ಸಮಸ್ತ ಜಗತ್ತಿನಲ್ಲಿ ಎಲ್ಲ ಉಸಿರಾಡಿಸುವ ಮತ್ತು ನಿದ್ರಿಸುವ ವಸ್ತುಗಳ ಒಡೆಯನಾದ, ದ್ವಿಪದ ಚತುಷ್ಪದಗಳೆಲ್ಲವುಗಳ ಈಶ್ವರನಾದ, ಪ್ರಜಾಪತಿಗೆ ಹವಿಸ್ಸನ್ನರ್ಪಿಸುವೆವು" ಎಂದು

ಪೂಜಿಸಿ ಶೃಂಗರಿಸಿದ ರಥಕ್ಕೆ ಹೂಡುವರು. ಬಳಿಕ ಕುದುರೆಗೆ ಮಂತ್ರಪೂರ್ವಕ ಸ್ನಾನ ಮಾಡಿಸಬೇಕು.

ಆಮೇಲೆ ಪಟ್ಟದ ರಾಣಿಯೂ ಇತರ ರಾಜ ಮಹಿಷಿಯರೂ ಕುದುರೆಗೆ ತುಪ್ಪದಿಂದ ಅಭ್ಯಂಜನ ಮಾಡಿಸಿ ಅದರ ನೆತ್ತಿ, ಕೊರಳು ಬಾಲಗಳ ಕೂದಲುಗಳನ್ನು ಚಿನ್ನದ ಸರಪಣಿಯಿಂದ ಹೆಣೆಯುವರು. ಯಜಮಾನನು ಅದಕ್ಕೆ ಮೊಸರಲ್ಲಿ ಬೆರಸಿದ ಧಾನ್ಯಗಳನ್ನು ಉಣಿಸುವನು.

ಇನ್ನು ಕೊನೆಯ ಘಟ್ಟ ಪ್ರಾಪ್ತವಾಗುತ್ತದೆ. ಯಜ್ಞಾಶ್ವವೂ ಒಂದು ಕಾಡು ಹೋರಿಯೂ ಯಜ್ಞ ವೇದಿಕೆಯ ಬಳಿ ಯೂಪ(ಗೂಟ)ಗಳಿಗೆ ಕಟ್ಟಲ್ಪಡುತ್ತವೆ. ಇತರ ೨೧ ಯೂಪಗಳಿಗೆ ೩೨೭ ಸಾಧು ಪಶುಗಳನ್ನೂ ಅವುಗಳ ನಡನಡುವೆ ೨೬೨ ಕಾಡು ಪಶುಗಳನ್ನೂ ಬಿಗಿಯಬೇಕು.

ಸಾಧು ಪಶುಗಳಲ್ಲಿ ಗೋವು, ಆಡು, ಹೋರಿ, ಒಂಟೆ ಮೊದಲಾದವು ಇರುತ್ತಿದ್ದರೆ ಕಾಡುಪ್ರಾಣಿಗಳಲ್ಲಿ ಆನೆ, ಸಿಂಹ, ಹುಲಿ ಮೊದಲಾದವು ಇರುತ್ತಿದ್ದವು. ಕೋಳಿ, ತುಂಬಿ, ಪಾರಿವಾಳ ಮೊದಲಾದ ಹಕ್ಕಿಗಳೂ ಮೊಸಳೆ, ಹಾವು, ಮೀನ ಮೊದಲಾದ ಜಲಚರಗಳೂ ಯಜ್ಞಕಾಲಕ್ಕೆ ಪ್ರದರ್ಶಿಸಲ್ಪಡುತ್ತಿದ್ದವು. ಯಜುರ್ವೇದದಲ್ಲಿ ಈ ಪಶುಗಳ ವಿವರವಾದ ಉಲ್ಲೇಖವಿದ್ದು ಅವುಗಳಲ್ಲಿ ಕೆಲವುಗಳ ಹೆಸರುಗಳ ಮೇಲಿಂದ ಅವು ಯಾವ ಪ್ರಾಣಿಗಳಿರಬಹುದೆಂದು ಕೂಡ ಇಂದು ತಿಳಿಯದಾಗಿದೆ.

ಈ ಯಜ್ಞಕ್ಕೆ ಪ್ರಜಾಪತಿಯೇ ಪ್ರಧಾನದೈವತ. ಆದ್ದರಿಂದ ಕುದುರೆ ಪ್ರಜಾಪತಿಗೆ ಆಹುತಿಯಾಗುತ್ತದೆ. ಇತರ ದೇವತೆಗಳಿಗೆ ಇತರ ಪ್ರಾಣಿಗಳು ಅರ್ಪಿತವಾಗುತ್ತಿದ್ದವು. ಉದ್ದ ಕಿವಿಯ ಆಡು ಯಮನಿಗೆ, ಕಪ್ಪು ಮುಖದ ಆಡು ಅಗ್ನಿಗೆ, ಮೊಸಳೆ ವರುಣನಿಗೆ, ಇಲಿ ಪೃಥಿವೀ ದೇವತೆಗೆ, ಆನೆ ಪರ್ವತಕ್ಕೆ, ನವಿಲು ಅಶ್ವಿನೀ ದೇವತೆಗಳಿಗೆ, ಇರುವೆಗಳು ವಾಕ್ ದೇವತೆಗೆ, ಇತ್ಯಾದಿ. ಆದರೆ ಬಲಿ ಕೊಡುತ್ತಿದ್ದುದು ಕುದುರೆ ಮೊದಲಾದ ಸಾಕುಪಶುಗಳನ್ನು ಮಾತ್ರ. ಅರಣ್ಯದ ಪಶುಗಳನ್ನು ಯಜ್ಞಾಂತದಲ್ಲಿ ಬಿಡುಗಡೆ ಮಾಡುತ್ತಿದ್ದರು.

ರಾಣಿಯರು ಅಲಂಕರಿಸಿ ರಾಜನು ಕೊನೆಯ ಕವಳ ಕೊಟ್ಟು ಆದರಿಸಿದ ಮೇಲೆ ಕುದುರೆಯನ್ನು ವಧಿಸುತ್ತಿದ್ದರು. ಕುದುರೆಯ ಈ ಸಾವು ನಿರರ್ಥಕವಲ್ಲೆಂದು ಪುರೋಹಿತರು ಅದನ್ನು ಕೊಲ್ಲುವ ಕಾಲಕ್ಕೆ ಅದಕ್ಕೆ ಹೇಳುತ್ತಿದ್ದರು. ಅದರ ಮಂತ್ರ ಹೀಗಿದೆ:

> ನ ವಾ ಏತನ್ಮ್ರಿಯಸೇ ನೋತ ರಿಷ್ಯಸಿ
> ದೇವಂ ಇದೇಷಿ ಪಥಿಭಿಃ ಶಿವೇಭಿಃ ।
> ಯತ್ರ ಯಂತಿ ಸುಕೃತೋ ನಾಪಿ ದುಷ್ಕೃತ-
> ಸ್ತತ್ರ ತ್ವಾ ದೇವಃ ಸವಿತಾ ದಧಾತು ॥

"ಎಲೈ ಕುದುರೆಯೇ, ನೀನಿಂದು ಸಾಯುತ್ತ ಇಲ್ಲ, ನೋಯುತ್ತಲೂ ಇಲ್ಲ. ಮಂಗಲ ಮಾರ್ಗದಿಂದ ನೀನು ದೇವಲೋಕಕ್ಕೆ ಹೋಗುತ್ತಿರುವಿ. ಪುಣ್ಯಶಾಲಿಗಳಲ್ಲದೆ ಪಾಪಿಗಳು ಹೋಗಲಾರದ ಅಲ್ಲಿ ಸವಿತೃ ದೇವತೆಯು ನಿನ್ನನ್ನು ನೆಲೆಗೊಳಿಸಲಿ."

ಯಜುರ್ವೇದದಲ್ಲಿ ಆ ರಾತ್ರಿಯನ್ನು ಪಟ್ಟಮಹಿಷಿಯು ಈ ಸತ್ತ ಯಜ್ಞಪಶುವಿನ ಸಂಗಡ ಕಳೆಯಬೇಕೆಂದೂ ಅದರಿಂದ ಅವಳು ಪುತ್ರವತಿಯಾಗುವಳೆಂದೂ ಹೇಳಿದೆ. ಆದರೆ ಮುಂದೆ ಈ ರೂಢಿ ತ್ಯಜಿಸಲ್ಪಟ್ಟಂತೆ ತೋರುತ್ತದೆ.

ಮರುದಿನ ಬೆಳಿಗ್ಗೆ ಮಹಾರಾಣಿಯನ್ನು ಎಬ್ಬಿಸಿ ಮಂಗಲಸ್ನಾನ ಮಾಡಿಸಿ ಪುರೋಹಿತರು ನೂರೊಂದು ಚಿನ್ನ, ಬೆಳ್ಳಿ, ತಾಮ್ರಗಳ ಸೂಜಿಗಳಿಂದ ಕುದುರೆಯ ಮೈಯ ಮೇಲೆ ರಾಣಿಯ ಕೈಯಿಂದ ಸೀಳಿಸುತ್ತಿದ್ದರು. ಆ ಧಾರೆಯ ಮೇಲೆಯೇ ಅನಂತರ ಕುದುರೆಯ ದೇಹವನ್ನು ಕೊಯ್ಯಬೇಕಾಗಿತ್ತು.

ಹೀಗೆ ಕೊಯ್ದ ಅಂಗಗಳನ್ನು ಒಂದೊಂದಾಗಿ ಮಂತ್ರಪೂರ್ವಕ ಅಗ್ನಿಯಲ್ಲಿ ಹೋಮ ಮಾಡಲಾಗುವುದು. ಅದರ ಮೊದಲನೇ ಬಲ ಪಕ್ಕೆಲುಬು ಅಗ್ನಿಗೂ ಎರಡನೆಯದು ವಾಯುವಿಗೂ ಮೂರನೆಯದು ಇಂದ್ರನಿಗೂ ಭುಜಗಳು ಮರುತ್ತುಗಳಿಗೂ ಎದೆಯು ಇಂದ್ರನಿಗೂ ಅರ್ಪಿತವಾಗುತ್ತಿದ್ದವು. ಅದೇ ಪ್ರಕಾರ ವಾತನು ಅದರ

ಶ್ವಾಸದಿಂದಲೂ ಬೃಹಸ್ಪತಿಯು ಅದರ ಜಗಿತದಿಂದಲೂ ಅಂತರನು ಅದರ ದೃಷ್ಟಿಕ್ರಾಂತಿಯಿಂದಲೂ ಪ್ರಸನ್ನರಾಗುತ್ತಿದ್ದರು.

ಕೊನೆಗೆ ಎಲ್ಲ ಅಂಗಾಂಗಗಳೂ ಹೋಮವಾದ ಮೇಲೆ ಯಜುರ್ವೇದದ ಅತ್ಯಂತ ಸುಂದರ ಮಂತ್ರಗಳನ್ನೊಳಗೊಂಡ ಕುದುರೆಯ ಗುಣವರ್ಣನೆಯಾಗುತ್ತದೆ.

ಕಟ್ಟಕಡೆಗೆ ಈ ಮಂಗಲ ವಾಕ್ಯವನ್ನು ಉಚ್ಚರಿಸಲಾಗುವುದು :

ಸುಗವ್ಯಂ ನೋ ವಾಜೀ
ಸ್ವಶ್ವಂ ಪುಂಸಃ
ಪುತ್ರಾನ್ ಉತ ವಿಶ್ವಪುಷಂ
ರಯಿಂ ।
ಅನಾಗಾಸ್ತ್ವಂ ನೋ ಅದಿತಿಃ
ಕೃಣೋತು
ಕ್ಷತ್ರಂ ನೋ ಅಶ್ವೋ ವನತೇ
ಹವಿಷ್ಮಾನ್ ॥

( ಈ ಕುದುರೆಯು ನಮಗೆ ಶಾಶ್ವತ ಸಂಪತ್ತನ್ನೂ ಒಳ್ಳೇ ದನಗಳನ್ನೂ ಶೂರರಾದ ಪುತ್ರರನ್ನೂ ಪಾಪಪರಿಹಾರವನ್ನೂ ತರಲಿ. )

ಹೀಗೆ ಯಜ್ಞ ಮುಗಿದು, ಅದಕ್ಕಾಗಿ ಸೇರಿದ್ದ ಅಸಂಖ್ಯ ಪುರೋಹಿತರಿಗೂ ಬ್ರಾಹ್ಮಣರಿಗೂ ದಾನ ದಕ್ಷಿಣೆಗಳು ದೊರೆಯುತ್ತವೆ. ರಾಜನ ಅನುಚರರೂ ಅತಿಥಿ ಅಭ್ಯಾಗತರೂ ದಿವ್ಯ ಭೋಜನ ಪಡೆದು ಮರುಳುತ್ತಾರೆ. ಕುದುರೆಯ ಸಂಚಾರದಲ್ಲಿ ದೊರೆತ ಕಪ್ಪ ಕಾಣಿಕೆಗಳ ದ್ರವ್ಯವು ದಾನ ದಕ್ಷಿಣೆಯಲ್ಲಿ ಸೂರೆಯಾಗುತ್ತದೆ. ರಾಜ ಕಂಕಣಬದ್ಧನಾಗಿರುವಷ್ಟು ಕಾಲ ಕೇಳಿದವರಿಗೆ ಇಲ್ಲವೆಂದು ಹೇಳುವಂತಿರಲಿಲ್ಲ. ಎಲ್ಲ ದ್ರವ್ಯವನ್ನೂ ಕೊಟ್ಟು ಮಣ್ಣಿನ ಥಾಲಿಯಷ್ಟೇ ರಾಜನಿಗೆ ಉಳಿಯಿತೆಂದು ಕಾಲಿದಾಸ ರಘುವಿನ ಯಜ್ಞವನ್ನು ವರ್ಣಿಸುತ್ತ ಹೇಳಿದ್ದಾನೆ.

ಇಷ್ಟೆಲ್ಲ ಮಾಡಿದ ಮೇಲೆ ರಾಜ "ಚಕ್ರವರ್ತಿ" ಬಿರುದನ್ನು ಧರಿಸಬೇಕಾಗುತ್ತಿತ್ತು.

ಮೊಗಲ ಸಾಮ್ರಾಜ್ಯದ ವಿರುದ್ಧ ಹೋರಾಡಿ ಮಡಿದ

# ರಾಣಿ ದುರ್ಗಾವತಿ

ಭಾರತದ ಇತಿಹಾಸದಲ್ಲಿ ಪುರುಷರಿಗಿಂತಲೂ ಹೆಚ್ಚಾದ ಧೈರ್ಯ-ಸಾಹಸ-ನಿರ್ಧಾರಗಳನ್ನು ತೋರಿದ ರಾಣಿಯರನೇಕರ ಉದಾಹರಣೆಗಳಿವೆ. ಸ್ವಾತಂತ್ರ್ಯರಕ್ಷಣೆಗಾಗಿ, ಅಭಿಮಾನರಕ್ಷಣೆಗಾಗಿ, ಕರ್ತವ್ಯಪಾಲನೆಗಾಗಿ ಈ ರಮಣಿಯರು ಪ್ರಾಣದ ಪರಿವೆಯನ್ನು ತ್ಯಜಿಸಿ ಸಮರಾಂಗಣದಲ್ಲಿ ಹೋರಾಡಿ ಮಡಿದು ಶಾಶ್ವತ ಕೀರ್ತಿಯನ್ನು ಸಂಪಾದಿಸಿದ್ದಾರೆ. ಝಾಂಸಿಯ ರಾಣಿ ಲಕ್ಷ್ಮೀಬಾಯಿ, ಕಿತ್ತೂರು ಚೆನ್ನಮ್ಮ ಮೊದಲಾದ ಕೆಲವರ ಹೆಸರು ಸಾಕಷ್ಟು ಪರಿಚಿತವಾಗಿದ್ದರೂ ಇನ್ನೂ ಕೆಲವರು ಅಷ್ಟೇ ತೇಜಸ್ವಿನಿಯರಾದ ರಾಣಿಯರ ಕಥೆ ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿಲ್ಲ. ಈ ರೀತಿ ಅಷ್ಟೊಂದು ಪರಿಚಿತರಲ್ಲದವರಲ್ಲಿ ರಾಣಿ ದುರ್ಗಾವತಿ ಒಬ್ಬಳು.

೧೬ನೆಯ ಶತಮಾನದಲ್ಲಿ ದಿಲ್ಲಿಯಲ್ಲಿ ಮೊಗಲ ಬಾದಶಾಹ ಅಕಬರನು ಆಳುತ್ತಿದ್ದಾಗ ಭಾರತದಲ್ಲಿ ಅನೇಕ ಚಿಕ್ಕ ದೊಡ್ಡ ರಾಜ್ಯಗಳಿದ್ದವು. ಅವುಗಳೆಲ್ಲ ಒಂದೊಂದಾಗಿ ಅಕಬರನ ಸಾಮ್ರಾಜ್ಯದಲ್ಲಿ ಸೇರಿಕೊಳ್ಳತೊಡಗಿದ್ದವು. ಅಂಥ ಕಾಲದಲ್ಲಿಯೂ ಗೋಂಡ ಜಾತಿಯ ರಾಜರ ಗಢಾ-ಮಂಡಳವೆಂಬ ಚಿಕ್ಕ ರಾಜ್ಯವೊಂದು ಮಧ್ಯ ಹಿಂದುಸ್ತಾನದಲ್ಲಿತ್ತು. ಎಲ್ಲೆಲ್ಲಿಯೂ ಹಿಂದೂ ರಾಜರು ಮೊಗಲರ ಸಾರ್ವಭೌಮತ್ವಕ್ಕೆ ತಲೆಬಾಗುತ್ತಿದ್ದರೂ ಈ ಚಿಕ್ಕ ರಾಜ್ಯವು ಮಾತ್ರ ತನ್ನ ಸ್ವಾತಂತ್ರ್ಯವನ್ನು ಅಬಾಧಿತವಾಗಿರಿಸಿಕೊಂಡಿತ್ತು.

ಈ ರಾಜ್ಯದ ಸೂತ್ರಗಳೆಲ್ಲ ಓರ್ವ ಸ್ತ್ರೀಯ—ರಾಣಿ ದುರ್ಗಾವತಿಯ ಕೈಲಿದ್ದವು.

ದುರ್ಗಾವತಿ ಮಹೋಬದ ರಜಪೂತ ಅರಸು ಚಂದೇಲನ ಮಗಳು. ಮಾಳವದ ಕವಿಗಳು ಅವಳ ಅನುಪಮ ಸೌಂದರ್ಯ-ಚಾತುರ್ಯಗಳ ವರ್ಣನೆಯನ್ನು ಮಾಡಿದ್ದಾರೆ. ತನ್ನ ಈ ರೂಪಗುಣಸಂಪನ್ನ ಕನ್ಯೆ ತನ್ನ ಸಮಾನಸ್ಕಂಧನಾದ ರಜಪೂತ ರಾಜನೊಬ್ಬನ ಕೈಹಿಡಿಯಬೇಕು



ಎಂದು ಚಂದೇಲ ರಾಜನ ಇಚ್ಛೆಯಾಗಿತ್ತು. ಆದರೆ ಗೋಂಡ ರಾಜನಾದ ದಲಪತಶಾಹನ ಶೌರ್ಯರ ಕೀರ್ತಿಯನ್ನು ಕೇಳಿದ ದುರ್ಗಾವತಿ ಅವನಲ್ಲಿ ಅನುರಕ್ತಳಾಗಿದ್ದಳು. ಇತರ ಅನೇಕ ರಜಪೂತ ರಾಜರಂತೆ ದಲಪತಶಾಹನೂ ದುರ್ಗಾವತಿಯ ಪಾಣಿಗ್ರಹಣವನ್ನು ಅಪೇಕ್ಷಿಸಿದ್ದ.

ದುರ್ಗಾವತಿ ತಂದೆಗೆ ವಿನಯಪೂರ್ವಕವಾಗಿ ತನ್ನ ಮನದಿಂಗಿತವನ್ನು ತಿಳಿಸಿದಳು. "ಅಪ್ಪಾ, ಎಲ್ಲ ರಜಪೂತ ರಾಜರಿಗೂ ಇಲ್ಲವೆಂದು ತಿಳಿಸಿ. ಗೋಂಡ ರಾಜನನ್ನು ನಾನು ಮನಸಾ ವರಿಸಿರುವದರಿಂದ ಅವನ ಬೇಡಿಕೆಯನ್ನು ಮನ್ನಿಸಿ" ಎಂದಳವಳು.

ಚಂದೇಲ ರಾಜನಿಗೆ ಇದರಿಂದ ಆಘಾತವಾಯಿತು. ಆದರೆ ಪ್ರೀತಿಯ ಮಗಳ ಮನಸ್ಸನ್ನು ನೇರವಾಗಿ ನೋಯಿಸಲಾರದೆ ಆತನೊಂದು ಹಂಚಿಕೆ ಹೂಡಿದ. "೫೦,೦೦೦ ಸೇನೆ ನಿಬ್ಬಂದಿಯೊಂದಿಗೆ ಮಹೋಬಕ್ಕೆ ಬಂದರೆ ದುರ್ಗಾವತಿಯನ್ನು ವಿವಾಹ ಮಾಡಿಕೊಡುವೆ" ಎಂದಾತ ದಲಪತಶಾಹನಿಗೆ ಹೇಳಿ ಕಳಿಹಿದ. ಗಢಾಮಂಡಳ ತೀರ ಚಿಕ್ಕ ರಾಜ್ಯವಾದ್ದರಿಂದ ದಲಪತಶಾಹ ೫೦,೦೦೦ ಜನರೊಂದಿಗೆ ಬರುವದು ಸಾಧ್ಯವಿಲ್ಲೆಂದು ಚಂದೇಲರಾಜ ತಿಳಿದಿದ್ದ. ಆದರೆ ದಲಪತಶಾಹ ೫೦,೦೦೦ ಜನರೊಂದಿಗೆ ಬಂದೇ ಬಿಟ್ಟ. ಕೊಟ್ಟ ಮಾತನ್ನು ರಜಪೂತನಾದವನು ಮುರಿಯುವದಾದರೂ ಹೇಗೆ? ಮಾತು ನಡಿಸಿದರೆ ಮನದಿಚ್ಛೆ ಪೂರೈಸುವದು ಹೇಗೆ? ಪೇಚಿನಲ್ಲಿ ಸಿಕ್ಕು ಚಂದೇಲ ರಾಜ ಕೊನೆಗೂ ಗಟ್ಟಿ ಮನಸುಮಾಡಿ ದಲಪತಶಾಹನಿಗೆ ನಕಾರಾತ್ಮಕ ಉತ್ತರವನ್ನಿತ್ತ. ಆದರೆ ಅಲ್ಲಿಯವರೆಗೆ ಬಂದ ದಲಪತಶಾಹ ಕೇಳಿಯಾನೇ? ಆತ ಚಂದೇಲ ರಾಜನ ಅರಮನೆಯ ಮೇಲೆ ಹಲ್ಲೆ ಮಾಡಿ ದುರ್ಗಾವತಿಯನ್ನು ಕರೆದುಕೊಂಡು ಹೋದ.

ಮುಂದೊಂದು ವರ್ಷದಲ್ಲಿ ದುರ್ಗಾವತಿ ಪುತ್ರರತ್ನವೊಂದನ್ನು ಹೆತ್ತಳು. ಮನವೊಪ್ಪಿದ ಪತಿ, ರತ್ನದಂಥ ಮಗನನ್ನು ಪಡೆದ ದುರ್ಗಾವತಿ ಧನ್ಯಳಾದೆನೆಂದುಕೊಂಡಳು. ಮಗನಿಗೆ ವೀರನಾರಾಯಣ ಎಂಬ ಹೆಸರನ್ನಿಟ್ಟರು.

ಆದರೆ ಅವಳ ಭಾಗ್ಯಸಂಪತ್ತೆಲ್ಲ ಇಷ್ಟರಲ್ಲೇ ಸೂರೆಯಾದಂತಿತ್ತು. ಮುಂದೆ ಮೂರೇ ವರ್ಷಗಳಲ್ಲಿ ಏನೊ ಒಂದು ಚಿಕ್ಕ ಬೇನೆಯ ನೆಪದಲ್ಲಿ ದಲಪತಶಾಹ ನಿಧನಹೊಂದಿದ.

ದುಃಖದಿಂದ ಜೀವವೇ ಬೇಡವೆನಿಸಿತು ದುರ್ಗಾವತಿಗೆ. ಆದರೆ ಮೂರು ವರ್ಷದ ಮಗನ ಮತ್ತು ಪ್ರಜೆಗಳ ಕಲ್ಯಾಣದ ವಿಚಾರದಿಂದ ಅವಳು ತನ್ನ ದುಃಖವನ್ನು ನುಂಗಿಕೊಂಡು ಗಢಾಮಂಡಳ ರಾಜ್ಯದ ಸೂತ್ರಗಳನ್ನು ಕೈಗೆ ತೆಗೆದುಕೊಂಡಳು.

ಇದುವರೆಗೆ ಅಕಬರ ಬಾದಶಾಹನ ಸುಭೇದಾರರು ಎಷ್ಟೋ ಸಲ ಗಢಾಮಂಡಳದ ಮೇಲೆ ದಾಳಿ ಮಾಡಿದ್ದರೂ ದಲಪತಶಾಹನಿಂದ ಪರಾಭೂತರಾಗಿ ಹಿಂತಿರುಗಿದ್ದರು. ಅಕಬರ ಗುಣಗ್ರಾಹಿ. ರಾಣಿ ದುರ್ಗಾವತಿ ರಾಜ್ಯವನ್ನು ಚೆನ್ನಾಗಿ ಆಳುತ್ತಿರುವದನ್ನು ಕೇಳಿ ತಿಳಿದ ಆತ ತನ್ನ ಸುಭೇದಾರರಿಗೆ ಗಢಾಮಂಡಳದ ಮೇಲೆ ದಾಳಿ ಮಾಡಲು ಅನುಮತಿಯನ್ನೀಯಲಿಲ್ಲ.

ಆದರೆ ಅಸಫಖಾನನೆಂಬ ಸರದಾರನಿಗೆ ತರುಣಿಯೂ ಸುಂದರಿಯೂ ವಿಧವೆಯೂ ಆದ ರಾಣಿ ದುರ್ಗಾವತಿಯ ಮೇಲೆ ಮೋಹವುಂಟಾಗಿ ಆತ ಒಂದೇ ಸವನೆ ಅಕಬರನ ಬೆನ್ನು ಬಿದ್ದು ಏನೇನೋ ಹೇಳಿ ಗಢಾಮಂಡಳದ ಮೇಲೆ ದಾಳಿ ಮಾಡಲು ಅಪ್ಪಣೆಯನ್ನು ಪಡೆದುಕೊಂಡ. ರಾಣಿ ದುರ್ಗಾವತಿಯ ಬಳಿ ಒಂದು ಶ್ರೇಷ್ಠವಾದ ಬಿಳಿಯ ಆನೆಯಿತ್ತು. ಇಂಥ ಆನೆ ಮೊಗಲ ಬಾದಶಾಹರ ಸಂಪತ್ತಾಗಿರುವದೇ ಶೋಭೆ ಎಂದು ಅಸಫಖಾನ ಹೇಳಿದ್ದೂ ಅಕಬರನು ಅವನಿಗೆ ದಾಳಿಯ ಅಪ್ಪಣೆ ಕೊಡುವದಕ್ಕೆ ಪ್ರೇರಕವಾಯಿತು.

ರಾಜ್ಯದ ಮೇಲೆ ದಾಳಿಯಾಗಲಿದೆ ಎಂಬ ಸುದ್ದಿ ತಿಳಿದೊಡನೆ ರಾಣಿ ದುರ್ಗಾವತಿ ಶತ್ರುವನ್ನೆದುರಿಸಲು ಸಕಲ ಸನ್ನಾಹಗಳನ್ನು ಮಾಡಿಕೊಂಡಳು. ಆದರೆ ಬಾವಿ ಎಷ್ಟೇ ತುಂಬಿದರೂ ಸಮುದ್ರವನ್ನು ಸರಿಗಟ್ಟೀತೆ?

ಗೋಂಡರು ಕಲ್ಲೆದೆಯ ವೀರರು. ಚಿಕ್ಕ-

ಮಕ್ಕಳು ಮತ್ತು ತೀರ ಮುದುಕರನ್ನು ಬಿಟ್ಟು ಉಳಿದೆಲ್ಲ ಗಂಡಸರೂ ಸ್ವಾತಂತ್ರ್ಯ ರಕ್ಷಣೆಗಾಗಿ ಸೈನ್ಯದಲ್ಲಿ ಸೇರಿಕೊಂಡರು. ರಾಣಿ ದುರ್ಗಾವತಿ ತಾನೇ ಸೇನಾಧಿಪತ್ಯವನ್ನು ವಹಿಸಿಕೊಂಡಳು.

ಅಸಫಖಾನ ಕೇವಲ ೫,೦೦೦ ಸೈನ್ಯದೊಂದಿಗೆ ಬಂದಿದ್ದ. ತಾನು ಯುದ್ಧವನ್ನೇ ಮಾಡಬೇಕಾಗುವದಿಲ್ಲ ಎಂದು ಅವನ ಭ್ರಮೆಯಿತ್ತು. ಹೆಂಗಸು ಏನು ಯುದ್ಧ ಮಾಡಿಯಾಳು ಎಂದಾತ ಎಣಿಸಿದ್ದ.

ಆದರೆ ಅವನು ಕ್ಷುಲ್ಲಕಳೆಂದು ಭಾವಿಸಿದ್ದ ಹೆಂಗಸೇ ಮಹಿಷಾಸುರಮರ್ದಿನಿಯಂತೆ ರಣರಂಗಕ್ಕಿಳಿದುದನ್ನು ಕಂಡಾಗ ಅವನ ಎದೆ ಯೊಡೆಯಿತು. ಹಿಂತಿರುಗೋಣವೆಂದರೆ ಹೇಡಿಯ ಮುದ್ರೆಯನ್ನು ಒತ್ತಿಸಿಕೊಂಡಂತೆ; ಏರಿ ಹೋಗೋಣವೆಂದರೆ ಬಳಿಯಲ್ಲಿರುವದು ಕೇವಲ ೫,೦೦೦ ಸೈನ್ಯ!

ಆದರೂ ಆದದ್ದಾಗಲಿ ಎಂದು ಅಸಫಖಾನ ಯುದ್ಧವನ್ನು ಪ್ರಾರಂಭಿಸಿದ. ಗೋಂಡರ ಕಲಿತನದೆದುರು ಖಾನನ ಜನರು ತಡೆಯಲಿಲ್ಲ. ಜೀವವುಳಿಸಿಕೊಳ್ಳಲು ಅವರು ಸಿಕ್ಕತ್ತ ಓಡಿದರು.

ಗಢಾಮಂಡಳದ ಜನರು ಈ ವಿಜಯದಿಂದ ಉಬ್ಬಿದರು. ಆದರೆ ರಾಣಿ ದುರ್ಗಾವತಿ ಮಾತ್ರ ಮುಂದಿನ ಸಂಕಟವನ್ನು ಊಹಿಸಿಕೊಂಡಳು. ಪರಾಜಿತನಾದ ಖಾನ ಬಾದಶಾಹನ ಸಹಾಯದಿಂದ ದೊಡ್ಡ ಸೇನೆಯನ್ನು ತಂದು ದಾಳಿ ಮಾಡದೆ ಬಿಡಲಾರ, ಆಗ ಆತನನ್ನು ಎದುರಿಸುವದು ಬಹು ಕಠಿಣವಾದೀತು ಎಂದು ಅವಳಿಗೆ ಗೊತ್ತಿತ್ತು.

ಅವಳೆಣಿಸಿದಂತೆಯೇ ಆಯಿತು. ಸುಮಾರು ಒಂದೂವರೆ ವರ್ಷದ ನಂತರ ಭಾರಿ ಸೈನ್ಯದೊಂದಿಗೆ ಅಸಫಖಾನ ಗಢಾಮಂಡಳದ ಮೇಲೇರಿ ಬಂದ. ಗಢಾಮಂಡಳವನ್ನು ಗೆದ್ದು ಅದನ್ನು ಮೊಗಲ ಸಾಮ್ರಾಜ್ಯದಲ್ಲಿ ಸೇರಿಸಬೇಕೆಂಬ ಆಜ್ಞಾಪತ್ರವನ್ನು ಆತ ಅಕಬರನಿಂದ ಪಡೆದುಕೊಂಡು ಬಂದಿದ್ದ.

ಆದರೆ ಮಾನಿನಿಯಾದ ರಾಣಿ ದುರ್ಗಾವತಿ ಇಂಥ ಆಜ್ಞೆಗೆ ಮಣಿಯತಕ್ಕವಳೇ? ಪ್ರಾಣಬಲಿಯನ್ನಾದರೂ ಇತ್ತು ತನ್ನ ರಾಜ್ಯವನ್ನು ರಕ್ಷಿಸುವ ನಿರ್ಧಾರವನ್ನಾಕೆ ಮಾಡಿದ್ದಳು. ಅವಳು ತನ್ನ ಸೈನ್ಯದೊಂದಿಗೆ ಕೋಟೆಯಿಂದ ಹೊರಬಿದ್ದು ಬಂದು ಖಾನನ ಸೈನ್ಯದ ಸಮ್ಮುಖದಲ್ಲಿ ನಿಂತಳು.

ಎರಡೂ ಸೈನ್ಯಗಳಲ್ಲಿ ಘೋರ ಕದನ ನಡೆಯಿತು. ಮತ್ತೊಮ್ಮೆ ವಿಜಯಶ್ರೀ ದುರ್ಗಾವತಿಗೆ ಮಾಲೆ ಹಾಕಿದಳು. ಖಾನನ ಸೈನ್ಯ ಚೆಲ್ಲಾಪಿಲ್ಲಿಯಾಯಿತು.

ಸಾಮ ಮತ್ತು ದಂಡೋಪಾಯಗಳಿಂದ ರಾಣಿ ದುರ್ಗಾವತಿಯನ್ನು ಮಣಿಸುವದು ಅಸಾಧ್ಯವಾದಾಗ ಅಸಫಖಾನನು ಭೇದೋಪಾಯವನ್ನು ಯೋಚಿಸಿದ. ಆತ ಗುಪ್ತಚಾರರ ಮೂಲಕ ಕೋಟೆಯೊಳಗಿನ ಜನರಿಗೆ ಲಂಚವಿತ್ತು, ಅವರನ್ನು ತನ್ನವರನ್ನಾಗಿ ಮಾಡಿಕೊಂಡ.

ರಾಣಿ ದುರ್ಗಾವತಿಗೆ ಒಳಸಂಚಿನ ಸುಳಿವು ಹತ್ತಿ ಅವಳು ಅವರ ಪಾರುಪತ್ಯ ಮಾಡಬೇಕೆನ್ನುವಷ್ಟರಲ್ಲಿ ಅಸಫಖಾನನು ಮೂರನೆಯ ಸಲ ಅವಳ ಮೇಲೆ ದಂಡೆತ್ತಿ ಬಂದ. ಈ ಸಲ ತನಗೆ ಉಳಿಗಾಲವಿಲ್ಲ ಎಂದು ರಾಣಿಗೆ ಅನಿಸಿತಾದರೂ ಕೊನೆಯವರೆಗೂ ಯತ್ನಿಸಬೇಕೆಂಬ ನಿರ್ಧಾರದಿಂದ ಅವಳು ಸಾಧ್ಯವಿದ್ದಷ್ಟು ಸೈನ್ಯ ಸಂಗ್ರಹ ಮಾಡಿಕೊಂಡು ಹದಿನಾಲ್ಕು ವರ್ಷ ಪ್ರಾಯದ ಮಗನೊಂದಿಗೆ ರಣರಂಗಕ್ಕಿಳಿದಳು.

ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ಉಭಯ ಸೇನೆಗಳಲ್ಲಿ ಘನಘೋರ ಕಾಳಗ ನಡೆಯಿತು. ಕುಮಾರ ವೀರನಾರಾಯಣನು ತಾಯಿಯ ಮಗ್ಗಲಲ್ಲಿ ನಿಂತು ವೀರಾವೇಶದಿಂದ ಕಾದುತ್ತಿದ್ದ. ಆ ಬಾಲಕನ ಪರಾಕ್ರಮವನ್ನು ಕಂಡು ಶತ್ರುಗಳು ದಿಗಿಲುಗೊಂಡರು.

ಆದರೆ ದೈವೇಚ್ಛೆ ಬೇರೆಯೇ ಆಗಿತ್ತು. ಕುಮಾರನಿಗೆ ಮರಣಾಂತಿಕ ಗಾಯವಾಗಿ ಆತ ನೆಲಕ್ಕುರುಳಿದ.

ರಾಣಿಯ ಕಣ್ಣುಗಳಿಗೆ ಕತ್ತಲೆ ಬಂದಿತು. ಎಲ್ಲ ಮುಗಿಯಿತು! ಇನ್ನು ಯುದ್ಧ ಮಾಡುವದಾದರೂ ಏತಕ್ಕೆ ಎಂದೂ ಅವಳಿಗನಿಸಿತು. ಆದರೆ ಮರುಕ್ಷಣದಲ್ಲಿ ತನ್ನ ಪ್ರಿಯದೇಶವಾದ

ಗಢಾಮಂಡಳದ ಸ್ವಾತಂತ್ರ್ಯದ ವಿಚಾರ ಬಂದು ಆ ಶೂರ ಮಹಿಳೆ ತನ್ನ ದುಃಖವನ್ನೆಲ್ಲ ನುಂಗಿ ಕೊಂಡಳು. ಅವಳು ತನ್ನ ಜನರಿಗೆ "ಕುಮಾರ ನನ್ನು ಡೇರೆಯೊಳಗೆ ಒಯ್ಯಿರಿ" ಎಂದಳು.

ಕರ್ತವ್ಯಕ್ಕಾಗಿ, ದೇಶಕ್ಕಾಗಿ ಅವಳು ತನ್ನ ಹೃದಯವನ್ನು ಕಠೋರವನ್ನಾಗಿ ಮಾಡಿಕೊಂಡಳು. ಮಗ ವೀರನಾರಾಯಣನ ಪ್ರತಿಯೊಂದು ಮಾತು, ಕೃತಿ ಅವಳಿಗೆ ಅವಳ ಜೀವನದಲ್ಲಿ ಸರ್ವಸ್ವವಾಗಿತ್ತು. ಅಂಥ ಮಗ ಇಂದು ಅವಳ ಕಣ್ಣೆದುರಿನಲ್ಲಿ ಪ್ರಾಣನೀಗಿದ್ದ. ಕರುಳು ಹಿಂಡಿ ಹಿಪ್ಪೆಯಾಗಿ ಹೋಗಿದ್ದರೂ ಕರ್ತವ್ಯವನ್ನು ಮರೆಯದ ಆ ತಾಯಿ ಮಹೋನ್ನತಳೇ ಅಲ್ಲವೇ?

ರಾಣಿ ದುರ್ಗಾವತಿ ತಟ್ಟನೆ ಕಣ್ಣೀರನ್ನೊರಸಿ ಕೊಂಡಳು. ಅವಳ ಬಳಿಯಲ್ಲಿದ್ದ ನಂಬಿಗಸ್ಥ ಸೇವಕನೊಬ್ಬ, "ರಾಣಿಯವರೇ, ಡೇರೆಗೆ ಬನ್ನಿ. ಕುಮಾರರ ಅಂತ್ಯದರ್ಶನವನ್ನು ತೆಗೆದುಕೊಳ್ಳಿರಿ" ಎಂದ.

ಉಕ್ಕಿ ಬಂದ ಅಳುವನ್ನು ನುಂಗಿಕೊಂಡು ರಾಣಿ ಹೇಳಿದಳು: "ಇಲ್ಲ. ಕುಮಾರನ ಕೊನೆಯ ದರ್ಶನ ಪಡೆಯುವದಕ್ಕಾಗಿಯೂ ನಾನೀಗ ಡೇರೆಗೆ ಬರಲಾರೆ. ನಾನು ಇಲ್ಲಿಂದ ಕದಲಿದರೆ ನನ್ನ ವೀರ ಸೈನಿಕರು ಗಾಬರಿಗೊಳ್ಳುವರು. ಅವರು ಹೆದರಿ ಪಲಾಯನ ಹೇಳಬಹುದು. ನನ್ನ ಪ್ರಿಯ ಕುಮಾರ ವೀರಮರಣವನ್ನಪ್ಪಿ ತಂದೆಯ ಬಳಿ ಸ್ವರ್ಗಕ್ಕೆ ಹೊರಟಿದ್ದಾನೆ. ಈ ಯುದ್ಧ ಮುಗಿದ ಬಳಿಕ ಸ್ವರ್ಗದಲ್ಲಿ ನಾನು ಅವರೀರ್ವರನ್ನು ಭೆಟ್ಟಿಯಾಗುವೆ."

ಕುಮಾರನನ್ನು ಡೇರೆಗೊಯ್ಯುವ ಸಂಧಿ ಸಾಧಿಸಿ ಬಹಳಷ್ಟು ಭೀರುಗಳು ತಾವೂ ಡೇರೆ ಯತ್ತ ಸಾಗಿದರು. ರಾಣಿಯ ಬಳಿ ಕೇವಲ ಮೂರು ನೂರು ಜನ ಮಾತ್ರ ಉಳಿದರು. ಅಷ್ಟೇ ಜನರೊಂದಿಗೆ ಅವರಿಗೆ ಉತ್ತೇಜನವೀಯುತ್ತ ರಾಣಿ ಕಾದತೊಡಗಿದಳು.

ಅಷ್ಟರಲ್ಲಿ ತೀಕ್ಷ್ಣವಾದ ಬಾಣವೊಂದು ಬಂದು ಅವಳ ಕಣ್ಣಿನಲ್ಲಿ ನಟ್ಟಿತು. ರಾಣಿ ಅದನ್ನು ಕಿತ್ತೆಸೆದಳು. ಇನ್ನೊಂದು ಬಾಣ ಬಂದು ಅವಳ ಎದೆಯಲ್ಲಿ ನಟ್ಟಿತು. ಅದನ್ನೂ ಅವಳು ಕಿತ್ತೆಸೆದಳು. ಆದರೆ ಅವಳ ಇಚ್ಛಾಶಕ್ತಿ ಎಷ್ಟು ದುರ್ದಮ್ಯವಾಗಿದ್ದರೂ ದೇಹ ಮಾನವದೇಹವೇ ಆಗಿತ್ತು.

ಅವಳ ಕಣ್ಣು ಮೇಲಿ ಮೇಲೆ ಕತ್ತಲುಗೂಡತೊಡಗಿತು ಆದರೂ ರಾಣಿ ದುರ್ಗಾವತಿ ಕೆರಳಿದ ಕೇಸರಿಯಂತೆ ಯುದ್ಧ ಮಾಡುತ್ತಿದ್ದಳು. ಕೊನೆಗೆ ಅವಳು ಎಚ್ಚರದಪ್ಪಿ ಅಂಬಾರಿಯಲ್ಲಿ ಒರಗಿದಳು.

ಅವಳಿಗೆ ತುಸು ಪ್ರಜ್ಞೆ ಬಂದಾಗ ಸ್ವಾಮಿಭಕ್ತ ಸರದಾರನೊಬ್ಬ "ತಾವು ಅಪ್ಪಣೆಯಿತ್ತರೆ ಆನೆಯನ್ನು ರಣರಂಗದ ಹೊರಗೊಯ್ಯುವೆ" ಎಂದ

"ಛೆ! ನಾನಿನ್ನು ಎಷ್ಟು ಸಮಯ ಬದುಕಬಲ್ಲೆ? ಅಷ್ಟಕ್ಕಾಗಿ ರಣಭೂಮಿಯಿಂದ ಕಾಲ್ತೆಗೆದ ದೋಷವನ್ನೇತಕ್ಕೆ ಕಟ್ಟಿಕೊಳ್ಳಲಿ? ನೀವು ನನ್ನ ನಿಷ್ಠ ಸೇವಕರಾಗಿದ್ದರೆ ನನ್ನದೊಂದು ಕೆಲಸವನ್ನು ಮಾಡಿರಿ. ಈ ಭರ್ಚಿಯಿಂದ ನನ್ನ ಪ್ರಾಣವನ್ನು ದೇಹದಿಂದ ಮುಕ್ತ ಮಾಡಿರಿ. ಆತ್ಮಹತ್ಯೆಯ ಪಾತಕದಿಂದ ನನ್ನನ್ನುಳಿಸಿರಿ," ಎಂದು ರಾಣಿ ದುರ್ಗಾವತಿ ಹೇಳಿದಳು.

ರಾಣಿಯ ಮಾತುಗಳನ್ನು ಕೇಳಿ ಆ ಸರದಾರನ ಕಣ್ಣುಗಳಿಂದ ಅಶ್ರುಗಳು ಉದುರಿದವು. ರಾಣಿಯ ಮಾತನ್ನು ನಡೆಸಿಕೊಡುವ ಸಾಹಸ ಅವನಿಂದಾಗಲಿಲ್ಲ.

ರಾಣಿ ದುರ್ಗಾವತಿ ನಿಟ್ಟುಸುರನ್ನು ಬಿಟ್ಟು ಅಶ್ರುಪೂರ್ಣ ನಯನದಿಂದ ದೂರದಲ್ಲಿ ಕಾಣುತ್ತಿದ್ದ ಗಢಾಮಂಡಳದ ದರ್ಶನವನ್ನು ಪಡೆದು ಭರ್ಚಿಯಿಂದ ಎದೆಯನ್ನು ಇರಿದುಕೊಂಡಳು.

ಅವಳ ಇಚ್ಛೆಯಂತೆ ಅವಳ ದೇಹ ಜೀವಂತವಾಗಿ ಶತ್ರುಗಳ ಕೈಗೆ ಸಿಗಲಿಲ್ಲ; ಮಾತ್ರವಲ್ಲ, ಅವಳ ಕಳೇವರಕ್ಕೆ ಕೂಡ ಶತ್ರುಗಳ ಸ್ಪರ್ಶವಾಗದಂತೆ ಅವಳ ನಿಷ್ಠ ಸೇವಕರು ನೋಡಿಕೊಂಡರು.

ಅಲ್ಲಿಯ ಪರ್ವತ ಪ್ರದೇಶದಲ್ಲಿ ರಾಣಿ ದುರ್ಗಾವತಿಯ ಸ್ಮಾರಕಕ್ಕಾಗಿ ನಿಲ್ಲಿಸಿದ ಎರಡು ಕಲ್ಲಿನ ಸ್ತಂಭಗಳು ಇಂದಿಗೂ ಅವಳ ಕಥೆಯನ್ನು ಜಗತ್ತಿಗೆ ಹೇಳುತ್ತಿವೆ.

ಈ ಔಷಧವಿಲ್ಲದ ರೋಗದಿಂದ ಎಚ್ಚರವಿರಲಿ !

# ಶಬ್ದಚ್ಛಟವೆಂಬ ರೋಗ

ಲಾಂಗೂಲಾಚಾರ್ಯ

ನಿಮಗೆ ಸಿಗರೇಟಿನ ಅಥವಾ ಬೀಡಿಯ ಅಥವಾ ಚಹದ ಅಥವಾ ಅದಕ್ಕಿಂತೂ ತುಸು ಬಲವಾದ ಪೇಯದ ಚಟ ಎಂದು ಅಂಟಿಕೊಂಡಿತು ? ಎಂದು ಕೇಳಿದರೆ ನೀವು ಕಾಲದ ಮೋಟಾರಿನಲ್ಲಿ ತುಸು ರಿವರ್ಸ್ ಗೇರಿನ ಮೇಲೆ ಚಲಿಸಿ ಸಾಧಾರಣ ಸರಿಯಾಗಿ ಉತ್ತರ ಹೇಳಬಲ್ಲಿರಿ. ಹೌದು, ನಿಮ್ಮ ಮಿತ್ರ ನಿಮಗೆ ಮೊದಲನೇ " ಚಾರ್ ಮಿನಾರ್ " ಸಿಗರೇಟನ್ನು ಕೊಟ್ಟು " ಸೇದಯ್ಯಾ, ಚೆನ್ನಾಗಿರುತ್ತೆ" ಎಂದ ದಿವಸ ಅದರ ಚಟ ನಿಮ್ಮನ್ನು ಸೇರಿಕೊಂಡಿತು ; ಮತ್ತು ನಿಮ್ಮ ಆ ಮಿತ್ರ ಆ ಮೊದಲನೇ ಸಿಗರೇಟ್ ದಾನದ ಪ್ರತಿಫಲವನ್ನು ದಿನಕ್ಕೆ ಸೇಕಡಾ ಇನ್ನೂರರ ದರದಲ್ಲಿ ವಸೂಲು ಮಾಡುತ್ತಿದ್ದಾನೆ ಎಂದು ನಿಮಗೆ ಖಂಡಿತ ನೆನಪಿಗೆ ಬರುವುದು. ಅಥವಾ ಬೀಡಿ ಸಿಗರೇಟ್ ಚುಟ್ಟಗಳ ಘೋರ ಪರಿಣಾಮಗಳನ್ನು ನಿಮ್ಮ ಆರೋಗ್ಯಶಾಸ್ತ್ರ ಪುಸ್ತಕದಲ್ಲಿ ಓದಿದ ನಂತರ ಅದರ ಸತ್ಯಾಸತ್ಯತೆಯನ್ನು ಒರೆದು ನೋಡುವ ವೈಜ್ಞಾನಿಕ ಲವಲವಿಕೆಯೇ ನಿಮ್ಮನ್ನು ನಿಮ್ಮ ತಂದೆ ಸೇದಿ ಒಗೆದ ಬೀಡಿಯ ತುಣುಕಿನಿಂದ ಪ್ರಯೋಗವನ್ನಾರಂಭಿಸಲು ಪ್ರೇರಿಸಿತೆಂದು ನೀವು ನೆನೆದುಕೊಳ್ಳುವಿರಿ. ಅಥವಾ ನೀವು ನಿಮ್ಮ ಮೊದಲನೇ ಕವಿತೆಯನ್ನು ಬರೆಯಲು ಕುಳಿತಾಗ ಸರಸ್ವತೀದೇವಿ ನಿಮ್ಮನ್ನು ಕೈಬಿಟ್ಟು ಮಾಯವಾಗಿರಬಹುದು ; ಆಗ ಪ್ರತಿಯೊಬ್ಬ ಕಲಾವಿದನೂ ಒಂದು ಚಟದ ಮೂಲಕ ಸರಸ್ವತಿಯನ್ನು ಆರಾಧಿಸಿ ಕೃತಕೃತ್ಯನಾಗಿದ್ದಾನೆಂಬ ವಿಚಾರ ನಿಮ್ಮ ಮತಿಗೆ ಹೊಳೆದು ನೀವು ನಿಮ್ಮ ಮೊದಲ ಗುಟುಕನ್ನು ಕುಡಿದಿರಬಹುದು. ಅನಂತರ ಕಾವ್ಯಕಾಮಿನಿ ನಿಮಗೊಲಿಯದಿದ್ದರೂ ನೀವು ಚಟದ ಭಾಮಿನಿಯನ್ನು ನಿಮ್ಮವಳಾಗಿ ಮಾಡಿಕೊಂಡಿದ್ದೀರಿ ಎಂಬ ಅಂಶವನ್ನು ನೀವು ಮರೆತಿರಲಿಕ್ಕಿಲ್ಲ.

ಆದರೆ ಕೆಲಕೆಲವು ಮಾತುಗಳ ಚಟ ನಿಮಗೆ ಎಂದು, ಎಲ್ಲಿ, ಹೇಗೆ ಅಂಟಿಕೊಂಡಿತೆಂದು ಕೇಳಿದರೆ ನೀವು ಕೂದಲು ಕಿತ್ತು ಬರುವ ವರೆಗೆ ತಲೆ ಕೆರೆದುಕೊಂಡರೂ ಅದರ ಮೂಲವನ್ನು ಕಂಡು ಹಿಡಿಯಲಾರಿರಿ. ನೀವು ಮಾತುಮಾತಿಗೆ "ಮತ್ತೆ" "ಅಂದ ಬಳಿಕ" ಎಂದು ಹೇಳುತ್ತೀರಲ್ಲ, ಆ ಚಟ ನಿಮಗೆ ಎಂದು ತಗಲಿತು ಹೇಳಿ? ನೀವು ಮಾತುಮಾತಿಗೆ "ಮತ್ತೆ" ಅನ್ನುತ್ತೀರೆಂದು ಕೇಳಿ ನಿಮಗೇ ಆಶ್ಚರ್ಯವಾಗುತ್ತದೆ. ನನ್ನ ಪ್ರಶ್ನೆಗೆ ಉತ್ತರ ಹೇಳಲು ನಿಮ್ಮಿಂದಾಗುವುದೇ ಇಲ್ಲ. ಅದು ನಿಮ್ಮ ಮೂಗಿನ ಹಾಗೆ ಮೊದಲಿಂದಲೂ ಇದ್ದಂತೆ ನಿಮಗೆ ಭಾಸವಾಗುತ್ತದೆ. ಯಾಕೆ ನೀವು "ಮತ್ತೆಮತ್ತೆ" ಮಂತ್ರ ಹೇಳುತ್ತೀರಿ ಎಂಬುದಕ್ಕೂ ನಿಮ್ಮಲ್ಲಿ ಉತ್ತರವಿಲ್ಲ. ನಿಮ್ಮ ಮೂಗಿನ ತುದಿ ತುಸು ಮೇಲಕ್ಕೆ ಏಕೆ ತಿರುಗಿದೆ? ಎಂದು ಕೇಳಿದ ಹಾಗೆಯೇ ಇದು.

ಪ್ರಪಂಚದಲ್ಲಿ ವಿಕಾರವಾಗಿರುವುದರಲ್ಲೆಲ್ಲ ಅಪರಿಮಿತ ಉತ್ಸಾಹ ನನಗೆ. ಆದ್ದರಿಂದ ನಾನು ಇಂಥ ಅನೇಕ " ಶಬ್ದಚ್ಛಟ "ಗಳನ್ನು ಸಂಗ್ರಹಿಸಿ ಒಂದು "ಸವನೀರು" ಮಾಡಿಟ್ಟಿದ್ದೇನೆ. ಉದಾ

ಹರಣಿಗೆ ನೀವೂ ನನ್ನಂತೆ ಆ "ಭಯಂಕರ" ರೋಗಿಗಳನ್ನು ಕಂಡಿರಲೇಬೇಕು. (ಹೆದರಬೇಡಿ. ಅದೊಂದು ಸ್ವಲ್ಪಮಟ್ಟಿಗೆ ಅಂಟುಜಾಡ್ಯ ನಿಜ, ಆದರೆ ಅದರಲ್ಲಿ ಅಪಾಯಕರವಾದದ್ದೇನೂ ಇಲ್ಲ.)

ಈ ರೋಗಿಗಳಿಗೆ ಎಲ್ಲವೂ ಭಯಂಕರವೇ ಆಗಿ ಕಾಣಿಸುತ್ತದೆ. ಆಫೀಸಿನ "ಸಾಹೇಬ" "ಭಯಂಕರ" ಮೂರ್ಖ ಇದ್ದಾನೆ ಎಂದು ಅವರು ನಿಮಗೆ ಹೇಳುವರು. ಇರಬಹುದು ಎಂದು ಕೊಳ್ಳುತ್ತೀರಿ ನೀವು. ನಿಜವಾಗಿ ಕೆಲ ಮನುಷ್ಯರು ಸರ್ಕಸ್ ಸಿಂಹದಂತೆ ಭಯಂಕರರಾಗಿರುವುದುಂಟೆಂದು ನಿಮಗೆ ಗೊತ್ತಿದೆ. ಆ ಮೇಲೆ ಅವರು "ನಿನ್ನೆ ನಾಗಪಂಚಮಿಯ ದಿನ ನನ್ನ ಹೆಂಡತಿ ಮಾಡಿದ ಕಡುಬು ಭಯಂಕರ ರುಚಿಯಾಗಿತ್ತು" ಅನ್ನುವರು. ನಿಮಗೀಗ ತುಸು ಸೋಜಿಗವಾಗತೊಡಗುತ್ತದೆ. ಭಯಂಕರ ರುಚಿ ಎಂದರೇನಿರಬಹುದು? ಇದ್ದೀತು, ಕಡುಬು ಎಷ್ಟು ರುಚಿಯಾಗಿತ್ತೆಂದರೆ, ಅದನ್ನು ಸಿಕ್ಕಾಬಟ್ಟೆ ತಿಂದು ಈ ಮನುಷ್ಯನಿಗೆ ಹೊಟ್ಟೆಕಡಿತ ಎದ್ದು ಔಡಲ ಎಣ್ಣೆಯ ಆಶ್ರಯ ಪಡೆಯುವ ಅವಸ್ಥೆ ಬಂದಿರಬೇಕು. ಅದರಿಂದಲೇ ಅದೀಗ ಅವನಿಗೆ ರುಚಿಯಾಗಿದೆ—ಆದರೆ ಪರಿಣಾಮದಲ್ಲಿ ಭಯಂಕರವೂ ಆಗಿದೆ ಎನಿಸಿರಬಹುದು ಎಂದು ನೀವು ತರ್ಕಶಕ್ತಿಯನ್ನುಪಯೋಗಿಸುತ್ತೀರಿ. ಮುಂದಿನ ವಾಕ್ಯದಲ್ಲೇ ಅವರು ನೆರೆಮನೆಯ ಹುಡುಗಿ ಭಯಂಕರ ಸುಂದರಿಯೆಂದೋ ತಮ್ಮ ಗೆಳೆಯ ಭಯಂಕರ ಒಳ್ಳೇ ಮನುಷ್ಯನೆಂದೋ ಹೇಳಿ ನಿಮ್ಮನ್ನು ಗಲಿಬಿಲಿಗೊಳಿಸುತ್ತಾರೆ. ಆದರೂ ಚೇತರಿಸಿಕೊಂಡು ನೀವು ಬರ್ನಾರ್ಡ್ ಶಾ ಹೇಳಿಲ್ಲವೇ, ಅತಿ ಒಳ್ಳೆಯವನಾಗಿರುವುದೂ ಅಪಾಯಕರ ಎಂದು? ಇದು ತುಂಬ ಯೋಗ್ಯ ಎಂದು ಸಮಾಧಾನಪಟ್ಟುಕೊಳ್ಳುವಷ್ಟರಲ್ಲಿ ಈ ಭಯಂಕರ ಪುರುಷರು "ನಿನ್ನೆ ರಾತ್ರಿ ನನಗೆ ಭಯಂಕರ ಚೆನ್ನಾಗಿ ನಿದ್ದೆ ಬಂತು" ಎಂತಲೋ, ಪರೀಕ್ಷೆಯ ಪ್ರಶ್ನೆಗಳು "ಭಯಂಕರ" ಸುಲಭವಾಗಿದ್ದವು, ಎಂದೋ, "ನಿಮ್ಮ ಕವಿತೆ ನನಗೆ ಭಯಂಕರ ಮೆಚ್ಚಿಕೆಯಾಯಿತು" ಎಂದೋ ಹೇಳಿ ನಿಮ್ಮನ್ನು ಪೂರ್ತಿ ನಿಶ್ಚೇಷ್ಟಿತರನ್ನಾಗಿ ಮಾಡುವರು.

ಕೆಲಕೆಲವು ರೋಗಗಳಂತೆ ಕೆಲಕೆಲವು "ಶಬ್ದಚಪಟ"ಗಳು ಕೆಲಕೆಲವು ಪ್ರದೇಶಗಳಲ್ಲೇ ವಿಶೇಷವಾಗಿ ಪ್ರಸಾರಹೊಂದುವಂತೆ ಕಾಣುತ್ತದೆ. ನೀವು ಗಟ್ಟಗಳನ್ನು ದಾಟಿ ಉತ್ತರ ಕನ್ನಡಕ್ಕೋ ದಕ್ಷಿಣ ಕನ್ನಡಕ್ಕೋ ಹೋಗುತ್ತಿದ್ದರೆ ಗಡಿ ದಾಟುವ ಮೊದಲೇ ಒಂದು ರೋಗದ ಲಕ್ಷಣಗಳು ಕಾಣಿಸತೊಡಗುವವು. ಬಸ್ಸಿನ ಕಂಡಕ್ಟರ ನಿಮಗೆ, "ಸ್ವಲ್ಪ ಸರಿದು ಕೂತುಕೊಳ್ಳಬೇಕು, ಗೊತ್ತಾಯ್ತಲ್ವೊ?" ಎಂದು ಕೇಳುತ್ತಾನೆ. ನೀವು ಇದರಿಂದ ಕೆರಳಬಾರದೆಂದು ಈ ಮೂಲಕ ಪ್ರಾರ್ಥಿಸಿಕೊಳ್ಳಲಾಗಿದೆ. ಸರಿದು ಕೂತುಕೊಳ್ಳಬೇಕು ಎಂಬ ಅತ್ಯಂತ ಸರಳವಾದ ವಿಚಾರ ಕೂಡ, ತಿಳಿಹೇಳಿದ ಮೇಲೂ, ಗೊತ್ತಾಗಲಾರದ ಮೂಢರು ನೀವೆಂದು ಕಂಡಕ್ಟರನ ಅಭಿಪ್ರಾಯವಲ್ಲ. ನಿಮ್ಮ ಮಿದುಳಿನ ಸಾಮರ್ಥ್ಯದ ಬಗ್ಗೆ ಯಾವುದೊಂದು ಅನುಕೂಲ ಅಥವಾ ಪ್ರತಿಕೂಲ ಟೀಕೆ ಮಾಡುವ ಉದ್ದೇಶ ಅವನ ಕನಸಿನಲ್ಲಿಯೂ ಇಲ್ಲ. "ಗೊತ್ತಾಯ್ತಲ್ವೊ?" ಎಂಬುದು ಅವನ ಮಟ್ಟಿಗೆ ಒಂದು ವಿರಾಮಚಿಹ್ನೆ ಮಾತ್ರ. ಅಲ್ಪ ವಿರಾಮ (,) ಮಧ್ಯವಿರಾಮ (;) ಮತ್ತು ಪೂರ್ಣವಿರಾಮ (.) ಇವಾವುದನ್ನೂ ಅದು ಪ್ರತಿನಿಧಿಸಬಹುದು. "ನಾನು ಹೇಳಿದೆ, ಗೊತ್ತಾಯ್ತಲ್ವೊ? ಅವನಿಗೆ" ಎಂದು ಆತ ಹೇಳಿದರೆ ಹೋಳಿಗೆಯ ಎರಡು ಪದರಗಳ ನಡುವೆ ಸಿಲುಕಿದ ಹೂರಣದಂತಿರುವ "ಗೊತ್ತಾಯ್ತಲ್ವೊ?" ಎಂಬುದು ಅಲ್ಪವಿರಾಮ ಚಿಹ್ನೆಯೆಂದು ತಿಳಿಯಬೇಕು. ಬದಲಿಗೆ ಅದು ತುದಿಯಲ್ಲಿ ಬಂದರೆ ಪೂರ್ಣವಿರಾಮವಾಗುತ್ತದೆ. ಇನ್ನು ಕೆಲವು ವೇಳೆ ಆತ "ಗೊತ್ತಾಯ್ತಲ್ವೊ? ಇಲ್ಲಿ ಹತ್ತು ನಿಮಿಷ ಮೋಟ್ರು ನಿಲ್ತದೆ, ಗೊತ್ತಾಯ್ತಲ್ವೊ?" ಎನ್ನುತ್ತಾನೆ. ಇದನ್ನು ನೀವು ಯಾವುದಾದರೂ ಮಂತ್ರದ ಪ್ರಾರಂಭದಲ್ಲೂ ಕೊನೆಯಲ್ಲೂ ಉಚ್ಚರಿಸುವ ಓಂಕಾರದ ಹಾಗೆ ಎಂದು ಬೇಕಾದರೆ ತಿಳಿದುಕೊಳ್ಳಬಹುದು.

ಒಮ್ಮೊಮ್ಮೆ ಈ "ಗೊತ್ತಾಯ್ತಲ್ವೊ" ದ ಫಲವಾಗಿ ತುಂಬಾ ಕಟು (ಅನುಭವಿಸಿದವರಿಗೆ)-ಮಧುರ (ಕೇಳುವವರಿಗೆ) ಪರಿಸ್ಥಿತಿಗಳುಂಟಾಗುವುದುಂಟು. ಒಂದು ಸಲ ದಕ್ಷಿಣ ಕನ್ನಡದ ಹಿರಿಯ ಸಾಹಿತಿಗಳೊಬ್ಬರು ಬೆಂಗಳೂರಿಗೆ ಹೋಗಿದ್ದರಂತೆ. ಸ್ವಾಭಾವಿಕವಾಗಿ ಅವರ ದರ್ಶನಕ್ಕಾಗಿ ಬೆಂಗಳೂರಿನ ಸಾಹಿತ್ಯಮಹಾರಥಿಗಳನೇಕರು ಬಂದರು. ದಕ್ಷಿಣ ಕನ್ನಡದ ಮಹಾಶಯರು "ಗೊತ್ತಾಯ್ತಲ್ವೊ?" ಗಳನ್ನು ಪ್ರತಿಯೊಂದು ವಾಕ್ಯದಲ್ಲಿ ಉಪಯೋಗಿಸುವುದನ್ನು ಕೇಳಿ, ಸೂಕ್ಷ್ಮಸ್ವಭಾವದ ಮೈಸೂರವರಿಗೆ ತಡೆಯಲಾರದಾಗಿ, "ಇಲ್ಲ, ಸ್ವಾಮಿ. ನಮಗೆ ಗೊತ್ತಾಗೋದಿಲ್ಲ. ನಾವು ಶತಮೂರ್ಖರು" ಎಂದು ಹೇಳಿ ಎದ್ದು ಹೋಗಿಬಿಟ್ಟರಂತೆ!

ನನ್ನ ಪರಿಚಿತರೊಬ್ಬರು ಅತ್ಯಂತ ಅಪೂರ್ವವಾದ ಶಬ್ದಚಪಲದಿಂದ ಪೀಡಿತರಾಗಿದ್ದರು. ಅವರ ಹತ್ತಿರ ಒಂದು ಜೋಡು ಪಲ್ಲವಿ ಇತ್ತು. "ಹೋಗ್ಲತ್ಲಾಗಿ!" "ಬರ್ಲಿತ್ಲಾಗಿ!" ನಿತ್ಯ ಬೆಳಗ್ಗೆ ಎದ್ದ ಕೂಡಲೆ ಉಚ್ಚರಿಸಿದ ಮೊದಲನೇ ವಾಕ್ಯ "ಹೋಗ್ಲತ್ಲಾಗಿ"ಯಿಂದ ಮುಕ್ತಾಯವಾಗುತ್ತಿತ್ತು. ಎರಡನೆಯದು "ಬರ್ಲಿತ್ಲಾಗಿ" ಯಿಂದ. ಇದೇ ವರ್ತನೆಯಿಂದ ಅವರಾಡಿದ ಎಲ್ಲ ವಾಕ್ಯಗಳೂ ಬೆಸ ವಾಕ್ಯವಾದರೆ "ಹೋಗ್ಲತ್ಲಾಗಿ" ಸರಿ ವಾಕ್ಯವಾದರೆ "ಬರ್ಲಿತ್ಲಾಗಿ" ಯಿಂದ ಸಮಾಪ್ತವಾಗುತ್ತಿದ್ದವು. "ಇಸ್ಪೇಟಾಟದಲ್ಲಿ ಹತ್ತು ರೂಪಾಯಿ ಕಳಕೊಂಡೆ, ಹೋಗ್ಲತ್ಲಾಗಿ! ನಿನ್ನೆ ನನ್ನ ಮಗ ಬೊಂಬಾಯಿಂದ ಬಂದ ಬರ್ಲಿತ್ಲಾಗಿ!" ಆಗಲಿ ಅಡ್ಡಿಯಿಲ್ಲ ಎಂದುಕೊಳ್ಳುತ್ತಿದ್ದೆ ನಾನು. ಆದರೆ ಯಾವಾಗಲೂ ಅರ್ಥಕ್ಕನುಸಾರವಾಗಿಯೇ ಈ ಪಲ್ಲವಿ ಬರುತ್ತಿತ್ತೆಂಬ ನಿಯಮವಿದ್ದಿಲ್ಲ. ಒಂದು ಸಲ ಅವರು, "ನಮ್ಮ ಮನೆ ಮುಂದೆ ಒಂದು ನಾಯಿಯ ಹೆಣ ಬಿದ್ದಿದೆ" ಎಂದು ಅದರ ತುದಿಗೆ "ಬರ್ಲಿತ್ಲಾಗಿ" ಎಂಬ ಪಲ್ಲವಿ ಹೇಳಿದರು. ಅನಂತರ ಅವರು "ನನ್ನ ಹೆಂಡತಿಗೆ ತುಂಬ ಕಾಯಿಲೆಯಾಗಿದೆ–ಹೋಗ್ಲತ್ಲಾಗಿ!" ಎಂದರು. ಅವರ ಹೆಂಡತಿ—ಪಾಪ, ಸಾಧ್ವಿ— ಆ ಕಾಯಿಲೆಯಲ್ಲಿ ಹೋಗಿಯೇ ಬಿಟ್ಟರು.

ಕೆಲವರಿಗೆ "ಇಟ್ಟುಕೊಳ್ಳು"ವ ಚಟ ಹತ್ತಿರುತ್ತದೆ. "...... ಅಂತ ಇಟ್ಟುಕೋ" ಎಂದು ಪ್ರತಿ ವಾಕ್ಯಕ್ಕೊಮ್ಮೆ ಹೇಳಲೇಬೇಕು. "ನಾ ಯಾಕೆ ಇಟ್ಟುಕೊಳ್ಳಲಿ, ನೀನೇ ಇಟ್ಟುಕೋ!" ಎಂದೊಮ್ಮೆ ನಾನು ತಡೆಯಲಾರದೆ ಇಂಥ ಒಬ್ಬರಿಗೆ ಹೇಳಬೇಕಾಯಿತು. "ಅಂತಿಳಕೊಂಡು" ಮತ್ತು "ಅಂತಿಳಕೊಂಡುಂತಂತಂದರೆ" ಎಂಬ ಅದರದೇ ದೀರ್ಘೀಭೂತ ಆವೃತ್ತಿಗಳನ್ನು ಮದುವೆ ಮಾಡಿಕೊಂಡವರಿದ್ದಾರೆ. ಒಬ್ಬ ಮಹಾಪುರುಷರು ಒಂದು ತಾಸಿನ ಭಾಷಣದಲ್ಲಿ "ಏನಪಾಂತಂದರೆ" ಎಂಬುದನ್ನು ೧೭೪೯ ಸಲ ಪುನರಾವರ್ತನೆ ಮಾಡಿದರೆಂದು ನಾನೊಮ್ಮೆ ಲೆಕ್ಕ ಮಾಡಿದ್ದೆ. ಈ ಅಂಕೆಸಂಖ್ಯೆ ಸಂಗ್ರಹವು ನನಗೆ ಎಷ್ಟು ಸ್ವಾರಸ್ಯವೆನಿಸಿತೆಂದರೆ ಅವರು ಪೂತ್ತಿನ ಭಾಷಣದಲ್ಲಿ ಏನು ಹೇಳಿದರೆಂಬ ಪ್ರಜ್ಞೆಯೇ ನನಗಿರಲಿಲ್ಲ. ೫೦ ವರ್ಷದ ಜೀವಮಾನದಲ್ಲಿ ಅವರು "ಏನಪಾಂತಂದರೆ"ಯನ್ನು ಕನಿಷ್ಠ ಒಂದು ಕೋಟಿ ಸಲ ಪುರಶ್ಚರಣೆ ಮಾಡಿರಬೇಕು. ಅದು ಯಾವುದಾದರೊಂದು ಮಂತ್ರವಾಗಿದ್ದಿದ್ದರೆ ಅವರಿಗೆ ಖಂಡಿತವಾಗಿ ಎಂದೋ ಸಿದ್ಧಿಯಾಗಿಬಿಡುತ್ತಿತ್ತು!

ಆದರೆ ಇವರನ್ನೆಲ್ಲ ನಿವಾಳಿಸಿ ಒಗೆಯುವವರು ಸರ್ವನಾಮಸಿದ್ಧರು. ಇವರ ಶಬ್ದ ಪ್ರಪಂಚವೆಲ್ಲ ಉಪನಿಷತ್ತಿನ ಶಾಂತಿ ಮಂತ್ರದಂತೆ "ಅದು ಇದು" ಇವುಗಳಿಂದ ಪೂರ್ಣವಾಗಿದೆ. ಒಬ್ಬ ಮನುಷ್ಯನಿಗೆ ತನ್ನ ಸಾಮಾನ್ಯ ವಿಚಾರಗಳನ್ನು ವ್ಯಕ್ತಗೊಳಿಸಬೇಕಾದರೆ ಕನಿಷ್ಠ ೬೦೦ ಶಬ್ದಗಳಾದರೂ ಬೇಕೆಂದು ಭಾಷಾ ಪಂಡಿತರ ಮತ. ಆದರೆ ಸರ್ವನಾಮಸಿದ್ಧರು ಇದನ್ನು ಸುಳ್ಳುಗಳೆದು ತೋರಿಸಿದ್ದಾರೆ. ಎರಡೇ ಶಬ್ದ ಬಾಣಗಳನ್ನು ಬತ್ತಳಿಕೆಯಲ್ಲಿಟ್ಟುಕೊಂಡು ಅವರು ಜಗತ್ತನ್ನು ಜಯಿಸಿ ಬರುತ್ತಾರೆ. ಅವರ ಪಾಲಿಗೆ ಕೋಶಗಳು ನಿರರ್ಥಕ ಪದಾರ್ಥಗಳು. "ನಾನು ಇದು ಮಾಡುವಾಗ... ಇದು ಆಗಿದ್ದರಿಂದ...

# ಶಾನುಭೋಗರ ಸೊಸೆ

ಶಾನುಭೋಗರ ದೊಡ್ಡ ಮಗ ಕಿಟ್ಸ್ವಾಮಿ ಮೆಡಿಕಲ್ ಕೊನೆಯ ವರ್ಷ ಓದುತ್ತಿದ್ದ. ಓದು ಮುಗಿದೊಡನೆ ಡಾ|| ಕಿಟ್ಸ್ವಾಮಿಗೆ ಮಗಳು ವಿಶಾಲನ್ನ ಕೊಟ್ಟು ಮದುವೆ ಮಾಡ್ಬೇಕು ಎಂತ ರಂಗರಾಯರ ಆಸೆ. ಮನೆಯವರೆಲ್ಲರ ಆಸೆಯೂ ಅದೇನೇ. ಕಿಟ್ಸ್ವಾಮಿಯೂ ಈ ಸಂಬಂಧಕ್ಕೆ ಅನುಕೂಲನಾಗಿದ್ದ. ಶಾನುಭೋಗರು ಮಾತ್ರ ಈ ಪ್ರಸ್ತಾಪ ಬಂದಾಗೆಲ್ಲ "ಎಲ್ಲ ದೇವರಿಚ್ಛೆ" ಅಂತಿದ್ರು.

ಇದಕ್ಕೆ ಕಾರಣವೂ ಇತ್ತು. ಕಿಟ್ಸ್ವಾಮಿಗೆ ತಮ್ಮ ಮಗಳನ್ನ ಕೊಡಬೇಕೂಂತ ಹಲವಾರು ಜನ ಹೊಂಚು ಹಾಕಿಕೊಂಡಿದ್ರು. ಇವರಲ್ಲಿ ರಿಟಾಯರ್ಡ್ ಫಾರೆಸ್ಟ್ ಆಫೀಸರ್ ನರಸಿಂಹಯ್ಯ ಪ್ರಮುಖರು. ಅವರ ಕೈಯ್ಯಲ್ಲಿ ದುಡ್ಡು ಧಾರಾಳ . . . ಶಾನುಭೋಗರ ಕಿವಿಗೆ ಚೆನ್ನಾಗಿ ಗಾಳಿಯೂದಿ . . . ಕಾಶಿ, ತಿರುಪತಿ, ಪೀತಾಂಬರ, ಕಿಟ್ಸ್ವಾಮಿಗೆ ಕಾರು, . . . ಶಾನುಭೋಗರಿಗೆ ಹಿಂದಿನ ಸೀಟು ಅಂತ ಮಾತನಾಡಿದಾಗಲೆಲ್ಲ ಶಾನುಭೋಗರ ತಲೆ ತಿರುಗುತ್ತಿತ್ತು. ಬೇಗ ಮದುವೆಯ ನಿಶ್ಚಯವಾಗಬೇಕೆಂದು ನರಸಿಂಹಯ್ಯ ಒತ್ತಾಯಿಸುತ್ತಿದ್ದರು.

ಒಂದು ದಿನ ಅಕಸ್ಮಾತ್ತಾಗಿ ಶಾನುಭೋಗರು ರಂಗರಾಯರ ಮನೆಗೆ ಬಂದರು. ಆ ಸಂಜೆ ನರಸಿಂಹಯ್ಯನಲ್ಲಿಗೆ ಹೋಗಿ ಮದುವೆ ವಿಚಾರ ಮಾತುಕೊಡೋದು ಅವರ ಉದ್ದೇಶವಾಗಿತ್ತು. ಶಾನುಭೋಗರು ಬಂದಾಗ ರಂಗರಾಯರ ಮಗ ಸುಬ್ಬು — ಕಿಟ್ಸ್ವಾಮಿ ಬಾಲ್ಯಸ್ನೇಹಿತ — ಮನೇಲಿರಲಿಲ್ಲ. ಆತ ಪೇಟೆಗೆ ಹೋಗಿದ್ದವನಿಗೆ ಗೆಳೆಯರ ಮೂಲಕ ಶಾನುಭೋಗರ ಅನಿರೀಕ್ಷಿತ ಆಗಮನದ ಕಾರಣ ತಿಳಿಯಿತು. ಸುಬ್ಬೂಗೆ ಕಿಟ್ಸ್ವಾಮಿಯ ಮನಸ್ಸು ತಿಳಿದಿತ್ತು. ಆದರೂ ನರಸಿಂಹಯ್ಯ, ಹೇರಳ ಹಣ, ಇವುಗಳ ಸಾನ್ನಿಧ್ಯದಲ್ಲಿ ಜಾಗ್ರತೆ ಅಗತ್ಯವಿತ್ತು. ಶಾನುಭೋಗರು ಆ ದಿನ ತಮ್ಮ ಮನೆಬಿಡದಂತೆ ಸುಬ್ಬು ಒಂದು ಯೋಜನೆ ಹಾಕಿದ.

ಸುಬ್ಬು ಮನೆಗೆ ಬಂದವನು, ಊಟ ತೀರಿಸಿ ಒರಗಿದ್ದ ಶಾನುಭೋಗರನ್ನು ನೋಡಿ "ಒಳ್ಳೇ ದಿನ ನೋಡಿ ಬಂದ್ರಿ ಶಾನುಭೋಗರೆ . . . ನನ್ನ ಹುಟ್ಟುಹಬ್ಬಕ್ಕೆ ನೀವೇ ಬರಬೇಕೂಂತ ಅಪೇಕ್ಷಿಸಿದ್ದೆ . . . ಅಮ್ಮಾ . . . ತೆಗೋ . . . ಸಾಮಾನೆಲ್ಲ ತಂದಿದ್ದೇನೆ . . . ಸಂಜೆಗೆ ಮೈಸೂರ್‌ಪಾಕ್ . . . ಬೇಸನ್‌ಲಾಡು, ಬೋಂಡಾ ಎಲ್ಲ ಆಗ್ಬೇಕು "ಎಂದ.

ಪಾರ್ವತಮ್ಮನಿಗೆ ಮಗನ ನಡತೆ ಅರ್ಥವಾಗಲಿಲ್ಲ. ಹುಟ್ಟುಹಬ್ಬವೇ? ಯಾರದ್ದು? ರಂಗರಾಯರೂ ಮಿಕಿಮಿಕಿ ನೋಡಿದರು. ಸುಬ್ಬು ಇಬ್ಬರನ್ನೂ ಒಳಗೆ ಕರೆದು "ವಿಶಾಲನ ಮದುವೆ ಯಾಗ್ಬೇಕಿದ್ರೆ ಈ ಹೊತ್ತು ನಾನು ಹೇಳಿದ ಹಾಗೆ ಕೇಳಿ" ಎಂದ.



ಸುಬ್ಬು ತಿಂಡೀ ಹೆಸರು ಹೇಳಿದಾಗ ಶಾನುಭೋಗರಿಗೆ ಬಾಯಲ್ಲಿ ನೀರು ಬಂದಿತ್ತು. ಆದರೆ ನರಸಿಂಹಯ್ಯನನ್ನು ಆ ಸಂಜೆ ಕಾಣಲೇ ಬೇಕಿತ್ತು.

"ಒಳ್ಳೇದು . . . ಹಾಗಿದ್ದರೆ ನಾನು ಸ್ವಲ್ಪ ಅಡ್ಡಾಡಿಕೊಂಡು ಬರುತ್ತೇನೆ. ರಾತ್ರೆ ಊಟಕ್ಕೆ ಬಂದರೆ ಸಾಕಲ್ಲ" ಎಂದರು.

"ಛೆ! ಇಲ್ಲಿ ಸುಬ್ಬು ಹುಟ್ಟಿದ ಹಬ್ಬದ ಪಾರ್ಟಿ ಮುಗೀದೆ ನೀವು ಎಲ್ಲಿಗೂ ಹೋಗೋ ಹಾಗೇನೇ ಇಲ್ಲ" ಎಂದರು ಪಾರ್ವತಮ್ಮ.

ಆ ಮೇಲೆ ಮಾತಿಲ್ಲ. ಪಾರ್ಟಿ ಮುಗಿದ ಮೇಲೆ ನರಸಿಂಹಯ್ಯನವರನ್ನು ಕಂಡರಾಯಿತು ಎಂದು ಶಾನುಭೋಗರು ಪಾರ್ಟಿಯ ತಿಂಡಿಗಾಗಿ ಕಾದು ಕುಳಿತರು.

DL. 447A-X29 KN

ಇದು ಮಾಡುವ . . . ಇದು ಬಂತು." ಇವುಗಳಲ್ಲಿ ಪ್ರತಿಯೊಂದು "ಇದ"ಕ್ಕೂ ಪ್ರತ್ಯೇಕ ಪ್ರತ್ಯೇಕ ಅರ್ಥವಿದೆ. ನಿಮ್ಮ ಊಹಾಶಕ್ತಿ ಅತಿ ಪ್ರಬಲವಾಗಿದ್ದರೆ ಮಾತ್ರ ಇವರ ವಾಕ್‌ಸಮಸ್ಯೆಗಳನ್ನು ನೀವು ತಕ್ಕಮಟ್ಟಿಗೆ ಯಶಸ್ವಿಯಾಗಿ ಬಿಡಿಸಬಲ್ಲಿರಿ.

ಮಂಗಳೂರಿನಲ್ಲಿ ಪ್ರಸಿದ್ಧ ಪುರುಷರೊಬ್ಬರು ಮಾಡಿದ "ಕುಮಾರಿ ಭಾಷಣ" (maiden speech) ವೊಂದನ್ನು ನಾನು ಸತ್ತರೂ ಮರೆಯಲಾರೆ. ಅವರು ಕಾಂಗ್ರೆಸ್ಸಿಗೆ ಹೊಸಬರಾಗಿದ್ದರು. ಅವರು ಎಂದೂ ಭಾಷಣವೇದಿಕೆ ಹತ್ತಿದವರಲ್ಲ. ಅವರನ್ನು ಅಧ್ಯಕ್ಷರು ಭಾಷಣಕ್ಕೆ ಕರೆದೊಡನೆ ಅವರು ಸ್ವಲ್ಪ ನಡುಗುತ್ತಲೇ ಬಂದು ಮೇಜಿನ ಅಂಚು ಹಿಡಿದುಕೊಂಡು ನಿಂತರು. ಒಣ ತುಟಿಗಳಿಗೆ ಒಣ ನಾಲಗೆಯ ಅಮೃತವನ್ನು ಹಚ್ಚುತ್ತ ಅವರು ಪ್ರಾರಂಭಿಸಿದರು: "....ಇವರೇ ಮತ್ತು ...ಇವರೇ, ನಾನು....ನನಗೆ...ಇದು ಮಾಡಿ... ಇದು ಇಲ್ಲ. ಆದರೆ....ಇವರು...ಇದು ಮಾಡಿದ್ದರಿಂದ...ಇದು ಮಾಡಲು...." ಆದರೆ ಈ ಬಡಪಾಯಿಗೆ ಬಹಳ ಹೊತ್ತು "ಇದು" ಮಾಡುವ ಪ್ರಸಂಗ ಬರಲಿಲ್ಲ. ಹಿಂದಿನ ಸಾಲಿನಲ್ಲಿ ನಿಂತಿದ್ದ ಯಾರೋ ಒಬ್ಬ ಕುಚೋದ್ಯಗಾರ "ಸ್ವಾಮಿ, ನಿಮಗೆ ಇದು ಮಾಡಲು ಇದು ಇಲ್ಲದಿದ್ದರೆ ದಯವಿಟ್ಟು ಇದು ಮುಚ್ಚಿಕೊಂಡು ಇದು ಮಾಡಿಬಿಡಿ!" ಎಂದು ಕೂಗಿದ. ಇಂದು ಈ ಮಹನೀಯರು ರಾಜಕಾರಣದಲ್ಲಿ ಪ್ರವೀಣರಾಗಿದ್ದರೂ ಆ ಅವರ ಪ್ರಥಮ ಭಾಷಣವೇ ಕೊನೆಯ ಭಾಷಣವೂ ಆಯಿತು.

ಜನರಿಗೆ ಒಂದೊಂದು ಶಬ್ದದರೋಗ ಹೀಗೇಕೆ ಅಂಟಿಕೊಳ್ಳುತ್ತದೆ? ಹೇಗೋ ಮಾಡಿ ಈ ಶಬ್ದಗಳು ಅವರ ಮಿದುಳಿನ ಕತ್ತರಿ ರಸ್ತೆಗಳ ಕೂಟದಲ್ಲಿ ಸೇರಿಕೊಂಡು ಬಿಡುತ್ತವೆಯೋ? ಹಾಗಾಗಿ ಪ್ರತಿಯೊಂದು ವಾಕ್ಯದ ವಾಹನ ಆ ದಾರಿಯಲ್ಲಿ ಬರುವಾಗ ಅದರ ಮೇಲೆ ಏರಿ ಬಿಡುತ್ತವೋ ಹೇಗೆ? ಪ್ರತಿಯೊಂದು ಮಂತ್ರಿ ಮಂಡಲದಲ್ಲಿಯೂ ತಪ್ಪದೆ ಕಾಣಿಸಿಕೊಳ್ಳುವ ಕೆಲ ರಾಜಕಾರಣಿಗಳಂತೆ ಈ ಶಬ್ದಗಳ ಹತ್ತಿರವೂ ಏನಾದರೊಂದು ಯುಕ್ತಿ ಇರುವುದೇ? ಅಥವಾ ಇವು ವಿಚಾರ ದಾರಿದ್ರ್ಯದ ದ್ಯೋತಕವೇ? ಮುಂದೇನು ಹೇಳಬೇಕೆಂದು ಮನ ಚಡಪಡಿಸುತ್ತಿರುವಾಗ ಈ ಶಬ್ದಗಳು ಮಲಬದ್ಧತೆಯುಳ್ಳವನ ತಿಣುಕಾಟದಂತೆ ಹುಟ್ಟಿಕೊಳ್ಳುವವೇ? ನನಗೆ ಗೊತ್ತಿಲ್ಲ. ಕಾರಣವೇನೇ ಇರಲಿ, ಇವು ಸ್ವಲ್ಪ ಹೊತ್ತಿನವರೆಗೆ ಕೇಳುವವರಿಗೆ ಮೋಜೆನಿಸಿ, ಮುಂದೆ ಆಕಳಿಕೆ ತರಲು ಸಮರ್ಥವಾಗುತ್ತವೆಂಬುದಂತೂ ನಿಜ.

ಈ ಚಟವನ್ನು ಬಿಡಿಸುವುದು ಸುಲಭವಲ್ಲ. ನನ್ನ ನಿಕಟ ಮಿತ್ರರೊಬ್ಬರಿಗೆ ಪ್ರತಿ ವಾಕ್ಯಕ್ಕೊಮ್ಮೆ "ಆದರೆ" ಎನ್ನುವ ಅಭ್ಯಾಸವಿತ್ತು. ನಾನು ಅವರಿಗೆ "ಆದರೆ ಹೋದರೆ ಹತ್ತಿ ಬೆಳೆದರೆ ಅಜ್ಜೀಗೊಂದು ಪಟ್ಟೇ ಸೀರೇ...." ಎಂದು ಛೇಡಿಸುತ್ತಿದ್ದೆ. ಕೊನೆಗೊಂದು ದಿನ ಅವರು "ಆದರೆ"ಯನ್ನು ಡೈವೋರ್ಸು ಮಾಡುವ ದೃಢ ಪ್ರತಿಜ್ಞೆ ತೊಟ್ಟರು. ಮರುದಿನ ಅವರ ಮಾತಿನಲ್ಲಿ ಆದರೆ ಔಷಧಕ್ಕೂ ಸಿಗಲಿಲ್ಲ. ಆದರೆ ಮೆಲ್ಲ ಮೆಲ್ಲಗೆ ನನಗೆ ಅವರನ್ನು ಬೇರೊಂದು ರೋಗ ಆಕ್ರಮಿಸಿದ್ದು ಲಕ್ಷ್ಯಕ್ಕೆ ಬಂತು. ಅವರೀಗ ಮತ್ತು....ಮತ್ತು...ಮತ್ತು... ಎಂದು ಆದರೆಯ ಬದಲಿಗೆ ಹೇಳುತ್ತಿದ್ದರು. ಹೀಗಿದೆ ನೋಡಿ. ಈ ಚಟವೂ ತಂಬಾಕಿನ ಚಟದ ಹಾಗೆಯೆ. ಸಿಗರೇಟಿನ ಚಟ ಬಿಡಬೇಕಾದರೆ ನೀವು ನಶ್ಯದ ಚಟ ಹಿಡಿಯಬೇಕಾಗುತ್ತದೆ. ಕೊನೆಗೆ ಎರಡೂ ಚಟಗಳು ನಿಮ್ಮನ್ನು ವರಿಸಿರುತ್ತವೆ. ಬಾಯಿಯೂ ನಾತ, ಕರವಸ್ತ್ರವೂ ಕೊಳಕು!



# ಇರಾಣದಲ್ಲಿ ಮದುವೆ



ಇಂದುಶೇಖರ

**ಇಸ್ಲಾಮಿ ದೇಶವಾದರೂ ಇಲ್ಲಿ ಮದುವೆಗಳಲ್ಲಿ ಸ್ವಾರಸ್ಯ ಸಂಪ್ರದಾಯಗಳಿವೆ**

ಇರಾಣ ಮುಸ್ಲಿಂ ದೇಶ. ಆದರೂ ಅಲ್ಲಿಯ ವಿವಾಹಪದ್ಧತಿ ಭಾರತೀಯ ಮುಸ್ಲಿಮರ ವಿವಾಹ ಪದ್ಧತಿಗಿಂತ ಭಿನ್ನವಾಗಿದೆ. ವಿವಾಹದ ಧಾರ್ಮಿಕ ಅಂಶವು ಇರಾಣದಲ್ಲೂ 'ಆಖುಂದ' ಅರ್ಥಾತ್ ಮುಲ್ಲಾಗಳ ಮುಖಾಂತರವೇ ನಡೆಯುವದಾದರೂ ವಿವಾಹದ ಸಂಪ್ರದಾಯಗಳು ಉಳಿದ ಅರಬ ದೇಶಗಳಿಗಿಂತ ತುಂಬ ಭಿನ್ನವಾಗಿವೆ.

ಇಸ್ಲಾಮ ಧರ್ಮದಲ್ಲಿ ನಾಲ್ಕು ಹೆಂಡಂದಿರನ್ನು ಮಾಡಿಕೊಳ್ಳಲು ಅನುಮತಿಯಿರುವದರಿಂದ ಇರಾಣದಲ್ಲಿ ಈಗ್ಗೈವತ್ತು ವರ್ಷಗಳ ಹಿಂದಿನವರೆಗೂ ಅನೇಕ ಧನಿಕರೇ ಮೊದಲಾದ ಸಂಪನ್ನ ವ್ಯಕ್ತಿಗಳು ಬಹುಪತ್ನೀಕರಾಗಿರುತ್ತಿದ್ದರು. ಆದರೆ ಈಗ ಶಿಕ್ಷಣಪ್ರಸಾರ ಮತ್ತು ಸ್ತ್ರೀಸ್ವಾತಂತ್ರ್ಯ ಪ್ರಸಾರಗಳ ಮೂಲಕ ಈ ಪದ್ಧತಿ ಬಹಳಷ್ಟು ಕಡಿಮೆಯಾಗಿದೆ. ಪೈಗಂಬರವಾಸಿ ರಜಾಶಾಹ ಪಹಲವಿ ಲಗ್ನದ ಕಾಯದೆಗಳಲ್ಲಿ ಸುಧಾರಣೆಯನ್ನು ಮಾಡಿದನು. ಈ ಸುಧಾರಿತ ಕಾಯದೆಯಂತೆ ಯಾವಳಾದರೂ ಬಯಸಿದಲ್ಲಿ ವಿವಾಹ ಒಪ್ಪಂದ ಕಾಗದದಲ್ಲಿ ತನ್ನ ಪತಿ ತನ್ನ ಅನುಮತಿಯಿಲ್ಲದೆ ಮತ್ತೊಬ್ಬಳನ್ನು ಲಗ್ನವಾಗಲಾರನು ಎಂದು ಕರಾರು ಬರೆಯಬಹುದಾಗಿದೆ. ಪುರುಷರಿಗಿರುವಂತೆಯೇ 'ತಲಾಕ' (ವಿವಾಹ ವಿಚ್ಛೇದ) ದ ಅಧಿಕಾರವು ಅವಳಿಗೂ ಇದೆ. ಹೀಗಿದ್ದರೂ ಪುರುಷರು ತಮ್ಮ ಅನುಕೂಲತೆಗಾಗಿ ಅನೇಕ ಉಪಾಯಗಳನ್ನು ಕಂಡುಕೊಂಡಿದ್ದಾರೆ.

ಸಾಮಾನ್ಯವಾಗಿ ಇರಾಣದಲ್ಲೀಗ ಸ್ತ್ರೀಯರ ಸ್ಥಿತಿ ಕೆಲಮಟ್ಟಿಗೆ ಸುಧಾರಿಸಿದೆ. ತಲಾಕ ಕಾನೂನಿನ ಲಾಭವನ್ನು ಹೆಚ್ಚಾಗಿ ಪುರುಷರೇ ಪಡೆಯುತ್ತಾರೆ. ಸಂಕೋಚದಿಂದಲೂ ಮರ್ಯಾದೆಗಂಜಿಯೂ ಸ್ತ್ರೀಯರು ಸಹಸಾ ಈ ಕಾನೂನಿಗೆ ಶರಣು ಹೋಗುವದಿಲ್ಲ.

ಇರಾಣದ ವಿವಾಹಪದ್ಧತಿ ಸ್ಥೂಲವಾಗಿ ಎರಡು ಬಗೆಯದಿದೆ. ಶಹರವಾಸಿಗಳದು ಒಂದು ಬಗೆ ಮತ್ತು ಹಳ್ಳಿಗಾಡಿನವರದು ಇನ್ನೊಂದು ಬಗೆ. ಭಾರತದಲ್ಲಿಯ ಪರಂಪರೆಯಂತೆಯೇ ಇಲ್ಲಿಯೂ ವಿವಾಹಗಳು ತಂದೆ-ತಾಯಿಗಳ ಮತ್ತು ಪಾಲಕರ ಇಚ್ಛೆಗನುಗುಣವಾಗಿಯೇ ನಡೆಯು

'ಆಜಕಲ್' ನಿಂದ

ತ್ತವೆ. ಉಚ್ಚ ಮತ್ತು ಸುಶಿಕ್ಷಿತ ವರ್ಗದವರಲ್ಲಿ ಘೋಷಾಪದ್ಧತಿ ಇಲ್ಲವಾದ್ದರಿಂದ ಅವರಲ್ಲಿ ತರುಣ ತರುಣಿಯರು ಪರಸ್ಪರ ಭೆಟ್ಟಿಯಾಗಲು ಅವಕಾಶವಿದೆ. ವಿಶ್ವವಿದ್ಯಾಲಯದಲ್ಲಿ ಸಹಶಿಕ್ಷಣ ವಿದೆ. ಅನೇಕ ಇರಾಣಿ ಮಹಿಳೆಯರು ಶಾಲೆ, ಆಸ್ಪತ್ರೆ, ಕಚೇರಿಗಳಲ್ಲಿ ನೌಕರಿ ಮಾಡುತ್ತಾರೆ. ಇದರಿಂದ ಪುರುಷರ ಸಂಪರ್ಕ ಅವರಿಗೆ ಬಂದು ಪ್ರೇಮಸಂಬಂಧ ಬೆಳೆಯಲು ಅವಕಾಶವಿದೆ. ಹಾಗಿದ್ದರೂ ಇಂದಿನ ವರೆಗೂ ವಿವಾಹದ ಕೊನೆಯ ನಿರ್ಣಯಾಧಿಕಾರ ತಂದೆತಾಯಿಗಳ ಕೈಯಲ್ಲೇ ಇದೆ. ಹುಡುಗ ಮತ್ತು ಹುಡುಗಿಯ ಇಚ್ಛೆಯನ್ನು ತಿಳಿದುಕೊಂಡ ಬಳಿಕ ಉಳಿದೆಲ್ಲ ವ್ಯವಸ್ಥೆಯನ್ನು ತಂದೆತಾಯಿಗಳೇ ಮಾಡುತ್ತಾರೆ.

ಮಗ ಒಪ್ಪಿದ ಬಳಿಕ ತಂದೆ ತಾಯಿ ಅಥವಾ ಪಾಲಕರು ಹುಡುಗಿಯ ತಂದೆ ತಾಯಿಗಳ ಬಳಿ ಲಗ್ನದ ಪ್ರಸ್ತಾಪವೆತ್ತುತ್ತಾರೆ. ಈ ವಿಧಿಗೆ ಇರಾಣಿ ಭಾಷೆಯಲ್ಲಿ 'ಖಾಸ್ತಗಿರಿ' ಎನ್ನುತ್ತಾರೆ. ಸಂಬಂಧ ಸ್ವೀಕೃತವಾದ ಬಳಿಕ ಎರಡೂ ಕಡೆಯವರು ತಮ್ಮ ತಮ್ಮ ದೃಷ್ಟಿಕೋನಗಳಿಂದ ಪರಸ್ಪರರ ಗುಣಾವಗುಣಗಳನ್ನು ಪರೀಕ್ಷಿಸಿ ನೋಡುತ್ತಾರೆ. ಪರಸ್ಪರರಲ್ಲಿ ಹೋಗಿ ಬರುವದು ನಡೆಯುತ್ತದೆ.

ಕೆಲ ದಿನಗಳ ನಂತರ ಹುಡುಗನ ಕಡೆಯುವರೆಲ್ಲ ನೆಂಟಸ್ತನ ನಿಶ್ಚಯಿಸಲೆಂದು ಹುಡುಗಿಯ ಮನೆಗೆ ಬರುತ್ತಾರೆ. ಮಿಠಾಯಿ ಮತ್ತು ಹಣ್ಣು ಹಂಪಲುಗಳಲ್ಲದೆ ಹುಡುಗಿಗೆಂದು ಉಂಗುರ, ಒಂದು ದೊಡ್ಡ ಕನ್ನಡಿ, ಬೆಲೆಯುಳ್ಳ ವಸ್ತ್ರಗಳು ಮತ್ತು ಸಮ ಮುಂತಾದ ಅನೇಕ ವಸ್ತುಗಳನ್ನು ಇವರು ತಂದಿರುತ್ತಾರೆ. ವಾಙ್ನಿಶ್ಚಯದ ಈ ವಿಧಿಗೆ ಇಲ್ಲಿ 'ನಾಮಜದಿ' ಎನ್ನುವರು.

'ನಾಮಜದಿ'ಯ ನಂತರ ಲಗ್ನಮುಹೂರ್ತ ನಿಶ್ಚಯಿಸಲ್ಪಡುತ್ತದೆ. ವಿವಾಹದ ದಿನ ವರನ ದಿಬ್ಬಣವು ವಸ್ತ್ರ, ಒಡವೆ, ಖಾದ್ಯವಸ್ತುಗಳೇ ಮೊದಲಾದ ಸಕಲ ಸಾಮಾನುಗಳನ್ನು ತೆಗೆದುಕೊಂಡು ವಧೂಗೃಹಕ್ಕೆ ಬರುವದು. ಇವೆಲ್ಲ ಸಾಮಾನುಗಳನ್ನು ಒಂದು ಕೋಣೆಯಲ್ಲಿರಿಸುತ್ತಾರೆ. ವರನ ಕಡೆಯವರು ಕೊಟ್ಟಿರುವ ದೊಡ್ಡ ಕನ್ನಡಿಗೆ ಮುಖ ಮಾಡಿ ಶುಭ್ರವಸ್ತ್ರಧಾರಿಯಾದ ವಧುವನ್ನು ಕೂಡ್ರಿಸುತ್ತಾರೆ. ವರ ಬೇರೊಂದು ಕಡೆಯಲ್ಲಿ ವಧೂದರ್ಶನದ ಕುತೂಹಲದಿಂದ ಕುಳಿತಿರುತ್ತಾನೆ.

ವಿವಾಹದ ದಿನ ಬೆಳಿಗ್ಗೆ ವಧುವಿಗೆ ಅಭ್ಯಂಗ ಸ್ನಾನ ಮಾಡಿಸಿ ಬಳಿಕ ಅವಳನ್ನು ಶೃಂಗರಿಸುವರು. ಬಳಿಕ ಆಪಾದಮಸ್ತಕ ಬಿಳಿಯ ಬಟ್ಟೆಯನ್ನು ಧರಿಸಿದ ಅವಳು ಮೇಲೆ ಹೇಳಿದಂತೆ ವರನಿತ್ತ ಕಾಣಿಕೆಗಳನ್ನಿಟ್ಟ ಕೋಣೆಯಲ್ಲಿ ಕೂಡ್ರುತ್ತಾಳೆ. ಈ ಕೋಣೆಯಲ್ಲಿಯೇ ಮೌಲ್ವಿ ಕುರಾಣ ಪಠನಮಾಡಿ ವಿವಾಹದ ಧಾರ್ಮಿಕ ವಿಧಿಯನ್ನು ಪೂರೈಸುತ್ತಾನೆ.

ಈ ಸಮಯದಲ್ಲಿ ನಡೆಯುವ ಕೆಲವು ವಿಧಿಗಳು ತುಂಬ ಮನೋರಂಜಕವಾಗಿವೆ. ವಧು ಕನ್ನಡಿಯ ಎದುರಿಗೆ ಕುಳಿತಾಗ ಅನೇಕ ಸ್ತ್ರೀಯರು ಅವಳ ತಲೆಯ ಮೇಲೆ ಒಂದು ಬಿಳಿಯ ಚದ್ದರವನ್ನು ಹೊದಿಸುವರು. ಒಬ್ಬಳು ಬೆಲ್ಲದ ಎರಡು ತುಣುಕುಗಳನ್ನು ನಿವಾಳಿಸಿ ತೆಗೆಯುತ್ತಾಳೆ. ಇದು ದಂಪತಿಗಳ ಭಾವೀ ಮಧುರ ಜೀವನದ ಸಂಕೇತವೆಂದು ಭಾವಿಸಲಾಗಿದೆ. ಇದಾದ ನಂತರ ಉಳಿದ ಸ್ತ್ರೀಯರು ಬೇಗ ಬೇಗ ಸೂಜಿದಾರ ತೆಗೆದುಕೊಂಡು ಎರಡೂ ಮಗ್ಗಲುಗಳಿಗೆ ಟಾಕಿ ಹಾಕತೊಡಗುತ್ತಾರೆ. ಅತ್ತೆ ಮತ್ತು ನಾದಿನಿಯರ ನಾಲಗೆಯನ್ನು ಹೊಲಿದು ಹಾಕಿದರೆಂದೇ ಇದರ ಅರ್ಥ! ಅತ್ತೆ-ನಾದಿನಿಯರ ಕಾರಣದಿಂದಲೇ ವಿವಾಹ ಸಂಬಂಧದಲ್ಲಿ ಕಹಿ ಉತ್ಪನ್ನವಾಗುವದರಿಂದ ಈ ರೂಢಿ ಬಂದಿದೆ.

ಇವೆಲ್ಲ ಮುಗಿದ ಬಳಿಕ ವರ ಅಲ್ಲಿಗೆ ಬರುತ್ತಾನೆ. ಅವನ ಪ್ರಥಮ ದರ್ಶನ ಕನ್ನಡಿಯ ಮೂಲಕ ವಧುವಿಗಾಗುತ್ತದೆ. ಪ್ರಥಮ ದರ್ಶನದ ನಂತರ ವಧೂವರರು ಪರಸ್ಪರರಿಗೆ ಚಿನ್ನದ ಉಂಗುರಗಳನ್ನು ತೊಡಿಸುತ್ತಾರೆ. ಇದು ಪ್ರೇಮದ ದೃಢ ಬಂಧನದ ದ್ಯೋತಕ. ಈ ಉಂಗುರವನ್ನು ಬಳಿಕ ಅವರು ಎಂದೂ ಬೆರಳಿನಿಂದ ತೆಗೆಯುವದಿಲ್ಲ. ಉಂಗುರಧಾರಣ ವಿಧಿಗೆ

ಇರಾಣೀಯರು 'ಅಗ್ದ'ವೆನ್ನುತ್ತಾರೆ. 'ಅಗ್ದ'ದ ನಂತರ ಮೌಲ್ವಿಯ ಎದುರಿನಲ್ಲಿ ವಧುವು ವಿವಾಹ ಪ್ರತಿಜ್ಞಾಪತ್ರದ ಮೇಲೆ ಸಹಿ ಹಾಕುವಳು. ಬಳಿಕ ಭೋಜನ, ನೃತ್ಯಾದಿಗಳ ಕಾರ್ಯಕ್ರಮಗಳು ನಡೆಯುವವು.

'ಅಗ್ದ' ಸಂಸ್ಕಾರದ ನಂತರ ಸಮಾಜ ಮತ್ತು ಕಾಯದೆಯ ದೃಷ್ಟಿಯಲ್ಲಿ ಹುಡುಗ ಮತ್ತು ಹುಡುಗಿ ಪತಿ-ಪತ್ನಿಯರಾಗುತ್ತಾರೆ 'ಅಗ್ದ'ದ ನಂತರ ಗಂಡಹೆಂಡರು ಪರಸ್ಪರರನ್ನು ಭೆಟ್ಟಿಯಾಗಲು, ಕೂಡಿ ಅಡ್ಡಾಡಲು ಯಾವ ಆತಂಕವಿರದಿದ್ದರೂ ದೇಹಸಂಬಂಧ ಮಾಡಲು ಅವರಿಗೆ ಅನುಮತಿ ಇಲ್ಲ. ಔತಣವೊಂದನ್ನೇರ್ಪಡಿಸಿ ವಿವಾಹಸಂಬಂಧವನ್ನು ಸಾರಿದ ಮೇಲೆಯೇ ದೇಹಸಂಬಂಧದ ಅಧಿಕಾರ ಅವರಿಗೆ ಬರುತ್ತದೆ. ಈ ಔತಣ ಮತ್ತು ವಿವಾಹ ಸಂಬಂಧ ಸಾರುವ ವಿಧಿಗೆ 'ಆರೂಸಿ' ಎನ್ನುತ್ತಾರೆ. 'ಆರೂಸಿ'ಯ ನಂತರ ಗಂಡ ಹೆಂಡತಿಯನ್ನು ಮೋಟರಿನಲ್ಲಿ ಕೂಡ್ರಿಸಿಕೊಂಡು ತನ್ನ ಮನೆಗೆ ಕರೆದೊಯ್ಯುತ್ತಾನೆ. ಇರಾಣದಲ್ಲಿ ಮೋಟರುಗಳ ಹಾರ್ನ್ ಬಾರಿಸುವ ರೂಢಿ ಬಹು ಕಡಿಮೆ ಇದ್ದರೂ ವಧೂವರರ ಮೆರವಣಿಗೆಯ ಕಾಲದಲ್ಲಿ ಮೋಟರಿನ ಹಾರ್ನನ್ನು ಬಾರಿಸುತ್ತಲೇ ಹೋಗುತ್ತಾರೆ; ಇದರಿಂದ ಮೆರವಣಿಗೆಗೆ ರಸ್ತೆಯಲ್ಲಿ ದಾರಿ ಸಿಗುವದಲ್ಲದೆ ಮೋಟರಿನಲ್ಲಿ ಕುಳಿತ ವಧೂವರರ ದರ್ಶನ ಜನರಿಗಾಗುತ್ತದೆ.

'ಆರೂಸಿ'ಯ ದಿನ ನೃತ್ಯಗಾಯನಗಳ ವಿಶೇಷ ಕಾರ್ಯಕ್ರಮವಿರುತ್ತದೆ. ಪರಂಪರೆಯಂತೆ ಶುಭ್ರವಸ್ತ್ರಗಳನ್ನು ಧರಿಸಿದ ಚಿಕ್ಕ ಬಾಲಿಕೆಯರ ನೃತ್ಯವಲ್ಲದೆ ಪಾಶ್ಚಾತ್ಯ ಪದ್ಧತಿಯ ಸಾಮೂಹಿಕ ನೃತ್ಯಗಳೂ ನಡೆಯುತ್ತವೆ. ಅನುಕೂಲವಿರುವವರು ಪ್ರಸಿದ್ಧ ಗಾಯಕಿಯೊಬ್ಬಳ ಸಂಗೀತದ ಏರ್ಪಾಡನ್ನೂ ಮಾಡಿರುತ್ತಾರೆ. ಇರಾಣದಲ್ಲಿ ಗಾಯಕಿಯರಿಗೆ ಸಮಾಜದಲ್ಲಿ ಗೌರವದ ಸ್ಥಾನವಿದೆ. ವಿಶ್ವವಿದ್ಯಾಲಯದ ಭೋಜನ ಸಮಾರಂಭಗಳಲ್ಲೆಲ್ಲ ಪ್ರಸಿದ್ಧ ಗಾಯಕಿಯೊಬ್ಬಳ ಕಾರ್ಯಕ್ರಮವಿದ್ದೇ ಇರುತ್ತದೆ. ಗಾಯಕಿಯರನೇಕರು ಮಾನವಂತ ಕುಟುಂಬದವರಿರುವರು. ಮೂರು ನಾಲ್ಕು ತಾಸು ಸಂಗೀತ ನೃತ್ಯಗಳ ಕಾರ್ಯಕ್ರಮ ನಡೆದ ನಂತರ ಶುಭೇಚ್ಛೆಗಳ ಸಂಗೀತದೊಂದಿಗೆ ಹೆಂಡತಿ ಗಂಡನೊಡನೆ ತೆರಳುವಳು. ಹೋಗುವಾಗ ನೆರೆದ ಸ್ತ್ರೀಯರೆಲ್ಲರ ಮುಖವನ್ನು ಚುಂಬಿಸಿ ಅವಳು ಅವರನ್ನು ಬೀಳ್ಕೊಳ್ಳಬೇಕು.

ಮೊನ್ನೆ ಮೊನ್ನೆಯ ವರೆಗೆ ವಿವಾಹ ಸಮಯದಲ್ಲಿ ಒಂದು ಅಪಮಾನಕಾರಕ ರೂಢಿ ಇತ್ತು. ಅದೆಂದರೆ ಪ್ರಥಮ ರಾತ್ರಿಯಲ್ಲಿ ವಧುವಿನ ಕೌಮಾರ್ಯಪರೀಕ್ಷೆ. ವರನ ತಂದೆತಾಯಿಗಳು ಕಳಿಸಿದ ಮುದುಕಿಯೊಬ್ಬಳು ಹುಡುಗಿಯ ಅರಿವೆಗಳನ್ನೆಲ್ಲ ಕಳಚಿ ಅವಳ ಅಂಗಪ್ರತ್ಯಂಗಗಳನ್ನು ಪರೀಕ್ಷಿಸಿ ಅವಳು ನಿಜವಾಗಿಯೂ ಕುಮಾರಿಯೇ ಅಲ್ಲವೇ ಎಂದು ತೀರ್ಮಾನಿಸುತ್ತಿದ್ದಳು. ಎಷ್ಟೋ ಸಲ ಪ್ರಥಮ ರಾತ್ರಿಯಲ್ಲೆ ವಧು "ಹಳೆಯ ಸರಕು" ಎಂದಾಗಿ ತಿರುಗಿ ತವರ್ಮನೆಗೆ ತೆರಳಬೇಕಾಗುತ್ತಿತ್ತು.

ಇಂದು ಈ ಪದ್ಧತಿ ಅಳಿದಿದ್ದರೂ ವಿವಾಹಪೂರ್ವದಲ್ಲಿ ಇರಾಣಿ ಹುಡುಗಿಯರು ತುಂಬ ಸಾವಧರಾಗಿರಬೇಕಾಗುತ್ತದೆ. 'ನಾಮುಜದಿ'ಯ ನಂತರ ಇರಾಣಿ ಹುಡುಗಿ ಸಹಸಾ ವಾಗ್ದತ್ತ ವರನನ್ನು ಬಿಟ್ಟು ಬೇರಾವ ಪುರುಷನೊಡನೆ ಏಕಾಂಗಿಯಾಗಿ ಅಡ್ಡಾಡುವದಿಲ್ಲ. ಪರಪುರುಷರೊಂದಿಗೆ ನರ್ತಿಸುವದಿಲ್ಲ. ವಿವಾಹವಾದ ಬಳಿಕ ಅವಳಿಗೆ ಈ ಸ್ವಾತಂತ್ರ್ಯ ಲಭಿಸುತ್ತದೆ. ವಿವಾಹಕ್ಕೆ ಮೊದಲು ಹುಡುಗಿಯರು ಪಾಡರ್, ತುಟಿ ಮತ್ತು ಉಗುರುಗಳ ಬಣ್ಣ, ಅತ್ತರಾದಿ ಸುಗಂಧ ದ್ರವ್ಯಗಳನ್ನೂ ಉಪಯೋಗಿಸಲಾರರು.

ಇರಾಣದ ಹಳ್ಳಿಗಳಲ್ಲಿ ಲಗ್ನಪದ್ಧತಿ ಇಂದಿಗೂ ಹಳೆಯ ಕಾಲದಂತೆ ಕನ್ಯಾಪಹರಣದ ಮಾದರಿಯಲ್ಲೇ ಇದೆ. ಇಂದು ಇದಕ್ಕಾಗಿ ಹೊಡೆದಾಟ ಬಡಿದಾಟಗಳು ನಡೆಯುವದಿಲ್ಲವಾದರೂ ಹುಡುಗ ಹುಡುಗಿಯನ್ನು ಹೆಸರಿಗಾದರೂ 'ಓಡಿಸಿಕೊಂಡು' ಬರುವದರಲ್ಲೇ ಪುರುಷಾರ್ಥವನ್ನು

ಕಾಣುತ್ತಾನೆ.

ಹಳ್ಳಿಗಳಲ್ಲಿ ಹುಡಗ ಮತ್ತು ಹುಡುಗಿ ಪರಸ್ಪರರಲ್ಲಿ ಅನುರಕ್ತರಾದಾಗ ಆಗಾಗ ಜರಗುವ "ಹೂ ಸಭೆ" ಗಳಲ್ಲಿ ಭೆಟ್ಟಿಯಾಗುತ್ತಾರೆ. ಈ ಸಭೆಗಳಲ್ಲಿ ಇತರ ಯುವಕರ ಎದುರಿನಲ್ಲಿ ಹುಡುಗನು ತಾನು ಬಯಸಿದ ಹುಡುಗಿಯ ಮೇಲೆ ಹೂಗಳನ್ನಾಗಲಿ ಫಲಗಳನ್ನಾಗಲಿ ಎರಚುತ್ತಾನೆ. ಹುಡುಗಿಗೆ ಹುಡುಗ ಒಪ್ಪಿಗೆಯಿದ್ದರೆ ಅವಳು ಅವನ್ನು ಮನೆಗೊಯ್ದು ತನ್ನ ಪಾಲಕರಿಗೆ ಈ ವಿಚಾರದಲ್ಲಿ ಸೂಚನೆ ಕೊಡುತ್ತಾಳೆ. ಹುಡುಗ ಮನಸ್ಸಿಗೆ ಬಾರದಿದ್ದರೆ ಅವನು ಎರಚಿದ ಫಲ ಪುಷ್ಪಗಳನ್ನು ಅಲ್ಲಿಯೇ ಬಿಟ್ಟು ಹೋಗಿಬಿಡುತ್ತಾಳೆ.

ಫಲಪುಷ್ಪ ಪ್ರಹಾರದ ನಂತರ ಎರಡೂ ಪಕ್ಷದವರು ಭೆಟ್ಟಿಯಾಗಿ ವಿವಾಹದ ಇತರ ವಿಷಯಗಳನ್ನೆಲ್ಲ ನಿಶ್ಚಯಿಸುತ್ತಾರೆ. ನಿಶ್ಚಿತ ದಿನ ಹುಡುಗ ತನ್ನ ಮಿತ್ರರೊಂದಿಗೆ ಕುದುರೆಯ ಮೇಲೇರಿ ಹುಡುಗಿಯ ಮನೆಗೆ ಬರುತ್ತಾನೆ. ಇದಕ್ಕೆ ಕೆಲ ನಟನೆಯ ವಿಘ್ನಗಳನ್ನು ಒಡ್ಡಲಾಗುತ್ತದೆ. ಅದನ್ನಾತ ನಿವಾರಿಸಿಕೊಳ್ಳುತ್ತ ಬಲಾತ್ಕಾರದಿಂದ ಹುಡುಗಿಯನ್ನೆತ್ತಿ ಕುದುರೆಯ ಮೇಲೆ ಕೂಡ್ರಿಸಿಕೊಂಡು ಹೋಗುತ್ತಾನೆ. ಈ ನಾಟಕದಿಂದ ಆತನಿಗೆ ತನ್ನ ಬಾಹುಬಲದಿಂದ ತಾನು ಹೆಂಡತಿಯನ್ನು ಸಂಪಾದಿಸಿದೆನೆಂದು ಸಂತೋಷವೂ ಗರ್ವವೂ ಉಂಟಾಗುತ್ತದೆ.

ಈ ಕನ್ಯಾಪಹರಣದ ನಂತರ ಮೌಲ್ವಿ ಕುರಾಣ ಪಠಣ ಮಾಡುತ್ತಾನೆ. ಹುಡುಗನ ತಂದೆ ಹಿಡಿದಿರುವ ಹರಿವಾಣದಲ್ಲಿ ವಧೂವರರಿಗೆಂದು ನೆರೆದವರೆಲ್ಲ ತಮ್ಮ ತಮ್ಮ ಯೋಗ್ಯತಾನುಸಾರ ಉಡುಗರೆಯ ಹಣ ಹಾಕುತ್ತಾರೆ. ಆ ನಂತರ ಮದ್ಯಪಾನ, ನೃತ್ಯಾದಿಗಳು ನಡೆಯುತ್ತವೆ. ಈ ಕಾರ್ಯಕ್ರಮದ ಕಾಲಕ್ಕೆ ವಿಪರೀತ ಮದ್ಯಪಾನ ಮಾಡುವ ಮೂಲಕ ಪ್ರಸಂಗ ದುಃಖಾಂತವಾಗುವದೂ ಉಂಟು.

ಮಧ್ಯ ಏಶಿಯದ ಎಲ್ಲ ಮುಸ್ಲಿಂ ದೇಶಗಳಲ್ಲಿ ಪ್ರಚಲಿತವಿರುವ ಇನ್ನೊಂದು ವಿವಾಹ ಪದ್ಧತಿ ಇರಾಣದಲ್ಲಿಯೂ ಇದೆ. ಈ ಪದ್ಧತಿಯಿಂದ ವಿವಾಹದ ಬಂಧನವಿಲ್ಲದೆ ಸ್ತ್ರೀಪುರುಷರ ಸಹ ಜೀವನ ಸಾಧ್ಯವಾಗುವದು. ಅರಬ ದೇಶಗಳಲ್ಲಿ ಇದಕ್ಕೆ 'ಮುತಾರ' ಎಂದೂ ಇರಾಣದಲ್ಲಿ 'ಸೀಗಾ' ಎಂದೂ ಎನ್ನುತ್ತಾರೆ. ಈ ಪದ್ಧತಿಯಂತೆ ಪುರುಷನು ಸ್ತ್ರೀಯನ್ನು ಒಂದು ದಿನದಿಂದ ಹಿಡಿದು ೯೯ ವರ್ಷಗಳ ವರೆಗೆ ಇಟ್ಟುಕೊಳ್ಳಬಹುದು. ಈ ಪದ್ಧತಿಯ ಉಪಯೋಗವನ್ನು ನಿಮ್ನ ವರ್ಗದ ಸ್ತ್ರೀಯರಿಗಾಗಿಯೇ ಮಾಡುತ್ತಾರೆ. ಈ ಪದ್ಧತಿಯಲ್ಲಿ ಕಾಮುಕತೆ ಕಂಡುಬಂದರೂ ನಿಮ್ನ ವರ್ಗದ ಸ್ತ್ರೀಯರಿಗೆ ಇದರಿಂದ ಲಾಭವೂ ಇದೆ. ಈ ಒಪ್ಪಂದದ ಪ್ರಕಾರ ಅವರಿಗೆ ಒಂದಿಷ್ಟು ಹಣ ಮತ್ತು ಒಡವೆಗಳು ಸಿಗುವವು. ಅವರಿಗೆ ಆಸ್ತಿಯನ್ನು ಕೊಡುವವರೂ ಇದ್ದಾರೆ. ಎರಡನೆಯದಾಗಿ ಬಡವರಾದರೂ ಸುಂದರಿಯರಾದ ತರುಣಿಯರಿಗೆ ಉಚ್ಚ ವರ್ಗದವರೊಡನೆ ಜೀವಿಸುವ ಅವಕಾಶ ದೊರೆತು ಅವರು ಆ ಕಾಲದಲ್ಲಿ ಶಿಕ್ಷಣ ಪಡೆದು ಒಳ್ಳೆಯ ನೌಕರಿಗಳನ್ನು ಸಂಪಾದಿಸಿಕೊಳ್ಳಲು ಸಾಧ್ಯವಾಗುತ್ತದೆ. ಸ್ತ್ರೀ ಒಪ್ಪಂದದ ಅವಧಿಯಲ್ಲಿ ಮಕ್ಕಳನ್ನು ಹೆತ್ತರೆ ಅವರ ಪೋಷಣೆಯ ವೆಚ್ಚವನ್ನು ತಂದೆಯೆ ವಹಿಸಬೇಕಾಗುವದು. ಅವನ ಆಸ್ತಿಯಲ್ಲಿಯೂ ಈ ಮಕ್ಕಳಿಗೆ ಅಧಿಕಾರ ಪ್ರಾಪ್ತವಾಗುವದು.

ಇಂದಿಗೂ ಇರಾಣದ ವೈವಾಹಿಕ ಕಾನೂನುಗಳು ಪುರುಷನಿಗೆ ಅನುಕೂಲವಾಗಿದ್ದು ಅವನು ಮನಬಂದಂತೆ ನಡೆಯಬಲ್ಲವನಾಗಿದ್ದಾನೆ. ಆದರೆ ಶಿಕ್ಷಣಪ್ರಸಾರ ಮತ್ತು ಸಮಾಜಜಾಗೃತಿಗಳ ಮೂಲಕ ಸ್ತ್ರೀಯರು ತಮ್ಮ ಅಧಿಕಾರದ ಅರಿವನ್ನು ಹೊಂದುತ್ತಿದ್ದಾರೆ. ವಿದೇಶೀಯರನ್ನು ಲಗ್ನವಾಗುವ ಸ್ತ್ರೀ-ಪುರುಷರು ಕಾಣಿಸುತಿದ್ದರೂ ಅವರ ಸಂಖ್ಯೆ ಈಗ ಎದ್ದು ಕಾಣದಷ್ಟು ಕಡಿಮೆಯಿದೆ.

# ಮುಮೂ

ಐವಾನ್ ಸರ್ವೇವೀಚ್ ತುರ್ಗೆನೇವನು ರಶಿಯುದ ಪ್ರಮುಖ ಕಥೆಗಾರ-ಕಾದಂಬರಿಗಾರರಲ್ಲಿ ಒಬ್ಬನು. ೧೮೧೮ರಲ್ಲಿ ಹುಟ್ಟಿ ೧೮೮೩ ರಲ್ಲಿ ಮರಣ ಹೊಂದಿದ ಆತನು ಜಾಗತಿಕ ಪ್ರಸಿದ್ಧಿ ಪಡೆದ ಪ್ರಥಮ ರಶಿಯನ್ ಸಾಹಿತಿಯಾಗಿದ್ದನು. ಟಾಲ್‌ಸ್ಟಾಯುನ ಮಿತ್ರನಾದ ಅವನು ರೈತರ ಮೇಲೆ ಜಮೀನುದಾರರು ಮಾಡುತ್ತಿದ್ದ ಅತ್ಯಾಚಾರಗಳಿಂದ ಉರಿದೆದ್ದು ತನ್ನ ಕಟುವಾದ ವ್ಯಂಗದಿಂದ ಅದನ್ನು ಟೀಕಿಸುತ್ತಿದ್ದನು. "ಮುಮೂ" ಅವನ ಒಂದು ಹೃದಯಸ್ಪರ್ಶಿ ನೀಳ್ಗತೆಯಾಗಿದೆ.

ಮಾಸ್ಕೊ ನಗರದ ಹೊರಬದಿಯ ಒಂದು ರಸ್ತೆಯಲ್ಲಿರುವ ಒಂದು ದೊಡ್ಡ ಬಂಗಲೆಯಲ್ಲಿ ಸೇವಕ-ದಾಸಿಯರಿಂದೊಡಗೂಡಿ ಓರ್ವ ಸಿರಿವಂತ ವಿಧವೆಯು ವಾಸಿಸುತ್ತಿದ್ದಳು. ಅವಳ ಮಕ್ಕಳು ಪೀಟರ್ಸಬರ್ಗಿನಲ್ಲಿ ಉಚ್ಚ ಸರಕಾರೀ ಹುದ್ದೆಗಳಲ್ಲಿದ್ದರು. ಹೆಣ್ಣುಮಕ್ಕಳು ಮದುವೆಯಾಗಿ ಗಂಡನ ಮನೆಯನ್ನು ಸೇರಿದ್ದರು. ಈ ಮುದುಕಿಯು ಬೇರೆಡೆ ಇರಲು ಒಲ್ಲದೆ, ಒಬ್ಬಳೇ ಆ ದೊಡ್ಡ ಮನೆಯಲ್ಲಿ ತನ್ನ ಇಳಿಗಾಲದ ದಿನಗಳನ್ನು ಕಳೆಯುತ್ತಿದಳು.

ಮುದುಕಿಯು ಆಗಿನ ಕಾಲದ ಸಿರಿವಂತರ ಪದ್ಧತಿಯ ಪ್ರಕಾರ, ತನ್ನ ಸ್ವಂತದ ಚಾಕರಿಗೆ ದಾಸಿಯರನ್ನಲ್ಲದೆ ದ್ವಾರಪಾಲಕ, ಕಾವಲುಗಾರ, ತೋಟಿಗ, ಸಿಂಪಿಗ, ಬಡಿಗ, ಅಗಸಗಿತ್ತಿಯರು, ಅಡಿಗೆಯವರು ಮುಂತಾದ ಅನೇಕ ಜನ ಊಳಿಗದವರನ್ನು ಇಟ್ಟುಕೊಂಡಿದ್ದಳು.

ಅವರಲ್ಲೆಲ್ಲ 'ಅಂಗಳದಾಳು' ಗೆರಸಿಮ್ ಎದ್ದು ಕಾಣುವಂತಿದ್ದನು. ಆರು ಫೂಟಿಗಿಂತಲೂ ಎತ್ತರವಿರುವ, ಸಶಕ್ತ ಮೈಕಟ್ಟಿನ ಆತನು ಹುಟ್ಟಾ ಕಿವುಡ ಹಾಗೂ ಮೂಕನಿದ್ದನು. ಮಾಸ್ಕೊ ನಗರಕ್ಕೆ ಬರುವ ಮುಂಚೆ, ಹಳ್ಳಿಯೊಂದರಲ್ಲಿ ತನ್ನ ಅಣ್ಣ ತಮ್ಮಂದಿರನ್ನು ಬಿಟ್ಟು, ಬೇರೆ ಒಂದು ಗುಡಿಸಲಿನಲ್ಲಿ ವಾಸವಾಗಿದ್ದು ಹೊಲಗಳಲ್ಲಿ ಕೆಲಸ ಮಾಡುತ್ತಿದ್ದನು. ಅಖಂಡ ದೇಹದಾರ್ಢ್ಯವನ್ನು ಹೊಂದಿದವನಾಗಿ, ನಾಲ್ಕು ಆಳುಗಳ ಕೆಲಸವನ್ನು ಒಬ್ಬನೇ ಮಾಡಿ ಮುಗಿಸುತ್ತಿದ್ದನು. ಅತ್ಯಂತ ನಿರಾಯಾಸದಿಂದ ಅವನು ಹೊಲದಲ್ಲಿ ರಂಟೆ ಹೊಡೆಯುವುದನ್ನು ಇತರರು ನೋಡುತ್ತ ನಿಲ್ಲುವ ಹಾಗಿರುತ್ತಿತ್ತು. ಅದರಲ್ಲಿಯೂ ಮೌನದಿಂದ ಅವನು ಮಾಡುತ್ತಿದ್ದುದರಿಂದ, ಅದಕ್ಕೊಂದು ಬಗೆಯ ಗಾಂಭೀರ್ಯವು ಬರುತ್ತಿದ್ದಿತು. ಅವನಿಗೆ ಕಿವುಡು-ಮೂಕತನಗಳೊಂದಿರದಿದ್ದರೆ ಯಾವ ಹೆಣ್ಣೂ 'ಉಮೇದಿ'ಯಿಂದ ಅವನ ಕೈ ಹಿಡಿಯಬಯಸಬಹುದಿತ್ತು.

ಏನಿದ್ದರೂ ಸದ್ಯದ ಯಜಮಾನಿಯು ಅವನನ್ನು ಹಳ್ಳಿಯಿಂದ ಹೊರಡಿಸಿ ಮಾಸ್ಕೊಕ್ಕೆ ಕರತಂದಳು. ಅಲ್ಲಿ ಅವನಿಗೆ ಬಟ್ಟೆ ಬೂಟುಗಳನ್ನು ಕೊಡಿಸಿದರು. ಕೈಯಲ್ಲಿ ಕಸಬರಿಗೆ, ಬುಟ್ಟಿ-ಸಲಿಕೆಗಳನ್ನು ಕೊಟ್ಟು ಅವನನ್ನು ಅಂಗಳದಾಳನ್ನಾಗಿ ಮಾಡಿದರು.

ಸುರುವಿಗೆ ಅವನಿಗೆ ಈ ಕೆಲಸ ಎಳ್ಳಷ್ಟೂ ಒಗ್ಗಲಿಲ್ಲ. ಹಳ್ಳಿಯ ಸ್ವಚ್ಛಂದ ವಾತಾವರಣದಲ್ಲಿ ಹೊಲಗಳ ಬಯಲು ಹವೆಯಲ್ಲಿ ಆತ ಬೆಳೆದವನಾಗಿದ್ದನು. ಜನ್ಮದಾರಭ್ಯದ ತನ್ನ

ಇಂದ್ರಿಯವಿಕಲತೆಯ ಮೂಲಕ ಸಮಾಜದಿಂದ ದೂರವಿರಿಸಲ್ಪಟ್ಟವನಾಗಿ ಇದ್ದರೂ ಫಲವತ್ತಾದ ಪ್ರದೇಶದಲ್ಲಿರುವ ದೊಡ್ಡ ಮರದಂತೆ ಆತ ಬೆಳೆದಿದ್ದನು. ಬಲಿಷ್ಠವಾದ ಹೋರಿಯನ್ನು ಹೊಲದಿಂದ ಬಿಡಿಸಿ, ಗಾಡಿಯಲ್ಲಿ ಹಾಕಿ ನಗರ ಮಧ್ಯದಲ್ಲಿ ತಂದು ಬಿಟ್ಟಂತೆ ಅವನ ಮನಃಸ್ಥಿತಿಯಾಗಿದ್ದಿತು.

ಹಳ್ಳಿಯಲ್ಲಿಯ ಅವನ ದುಡಿಮೆಗೆ ಹೋಲಿಸಿದರೆ ಇಲ್ಲಿಯ ಕೆಲಸ ಏನೂ ಅಲ್ಲ. ಒಂದೇ ತಾಸಿನಲ್ಲಿ ಎಲ್ಲವನ್ನೂ ಮುಗಿಸಿ, ಬರಹೋಗುವವರನ್ನು ನಿಡುನೋಟದಿಂದ ನೋಡುತ್ತ, ಅಂಗಳ ಮಧ್ಯದಲ್ಲಿ ನಿಲ್ಲುತ್ತಿದ್ದನು. ಇಲ್ಲವಾದರೆ ಕೈಯಲ್ಲಿಯ ಅಂಗಳ ಕಸಬರಿಗೆಯನ್ನು ಚೆಲ್ಲಿ, ಅವನತ ಮುಖನಾಗಿ, ಒಂದು ಮೂಲೆಯಲ್ಲಿ, ಬಂಧಿತವಾದ ವನ್ಯಮೃಗದಂತೆ ಕುಳ್ಳಿರುತ್ತಿದ್ದನು.

ಆದರೆ ಯಾವುದೇ ವಿಷಯದಲ್ಲಿ, ಅದೆಷ್ಟು ಬೇಡವಾಗಿದ್ದರೂ ರೂಢಿಯಾಗೇ ಆಗುತ್ತದೆ. ಗೆರಸಿಮ್ ನಗರ ಜೀವನಕ್ಕೆ ಒಗ್ಗಿಕೊಂಡನು. ಅವನ ಕೆಲಸವೆಂದರೆ ಬಂಗಲೆಯ ಹಿಂದು ಮುಂದಿನ ಅಂಗಳವನ್ನು ಸ್ವಚ್ಛವಾಗಿಡುವುದು. ನೀರಿನ ಗಾಡಿಗೆ ಕುದುರೆಯನ್ನು ಹೂಡಿಕೊಂಡು ನದಿಯಿಂದ ಎರಡು ಬಾರಿ ನೀರನ್ನು ತರುವುದು, ಕಟ್ಟಿಗೆಯನ್ನು ಒಡೆಯುವುದು ಮತ್ತು ರಾತ್ರಿಗೆ ಅಂಗಳವನ್ನು ಕಾಯುವುದು—ಇಷ್ಟೇ ಅವನ ಕೆಲಸವಾಗಿದ್ದಿತು.

ತನ್ನ ಕೆಲಸವನ್ನು ನಿಷ್ಠೆಯಿಂದಲೂ ಚೊಕ್ಕಟವಾಗಿಯೂ ಆತ ಪೂರೈಸುತ್ತಿದ್ದನು. ಅಂಗಳವು, ಒಂದು ಹುಲ್ಲುಕಡ್ಡಿಯು ಸಹಿತ ಕಾಣಸಿಗದಷ್ಟು ಸ್ವಚ್ಛವಾಗಿರುತ್ತಿತ್ತು. ಅಪರಿಚಿತರು ಅವೇಳೆಗೆ ಅಲ್ಲಿಗೆ ಬರುವ ಪ್ರಮೇಯವೇ ಇರಲಿಲ್ಲ. ಒಂದು ದಿನ ಅವನು ಆ ಕಂಪೌಂಡಿನಲ್ಲಿ ಬಂದ ಇಬ್ಬರು ಕಳ್ಳರನ್ನು ಹಿಡಿದು ಅವರ ತಲೆ ತಲೆ ಘಟ್ಟಿಸಿದಾಗ, ತಿರುಗಿ ಅವರನ್ನು ಪೋಲೀಸರ ಕಡೆಗೆ ಒಪ್ಪಿಸುವ ಅಗತ್ಯವೇ ಬೀಳಲಿಲ್ಲ.

ಗೆರಸಿಮ್ ಬಂಗಲೆಯಲ್ಲಿಯ ಇತರರಿಗೆಲ್ಲ ಒಳ್ಳೆಯವನಾಗಿದ್ದನು. ಆದರೆ ಯಾರೊಡನೆಯೂ ವಿಶೇಷ ಗೆಳೆತನವಿತ್ತೆಂದು ಹೇಳಲು ಬಾರದು. ಅವರು ಅವನ ವಿಷಯದಲ್ಲಿ ಭಯಾದರವುಳ್ಳವರಾಗಿದ್ದರು. ಸನ್ನೆಗಳ ಮೂಲಕ ಅವರು ಅವನಿಗೆ ಕೆಲಸ ಹೇಳುತ್ತಿದ್ದರು. ಅದರಂತೆ ಕೂಡಲೆ ಮಾಡಿಕೊಡುತ್ತಿದ್ದನು. ಅವನು ಸರಳ ವ್ಯವಹಾರದವನೂ ಕಟ್ಟುನಿಟ್ಟಿನವನೂ ಆಗಿದ್ದುದರಿಂದ ಹಾದಿ ಬಿಟ್ಟು ಯಾರೂ ಅವನೊಡನೆ ಹುಡುಗಾಟಿಕೆ ಮಾಡುತ್ತಿರಲಿಲ್ಲ. ಹುಂಜಗಳು ಕೂಡ ಅಂಗಳದಲ್ಲಿ ಅವನ ಎದುರಿಗೆ ಕಾದಾಡುತ್ತಿರಲಿಲ್ಲ. ಹಾಗೇನಾದರೂ ಕಂಡುಬಂದರೆ ಅವುಗಳ ಕಾಲುಗಳನ್ನು ಹಿಡಿದು ಮೇಲೆತ್ತಿ ಗರಗರನೆ ತಿರುಗಿಸಿ ಬೀಸಿ ಒಗೆದುಬಿಡುತ್ತಿದ್ದನು.

ಅಡುಗೆಯ ಮನೆಯ ನಿಟ್ಟಿನಲ್ಲಿ ಹಿಂಬದಿಗೆ ಇರುವ ಒಂದು ಚಿಕ್ಕ ಕೋಣೆಯನ್ನು ಅವನಿಗೆ ಬಿಟ್ಟುಕೊಡಲಾಗಿದ್ದಿತು. ಅದರಲ್ಲಿ ಅವನು ಹಲಿಗೆಗಳ ಒಂದು ದೊಡ್ಡ ಮಂಚವನ್ನು ಕೂಡ್ರಿಸಿಕೊಂಡಿದ್ದನು. ಅದರ ಬುಡದಲ್ಲಿ ಒಂದು ಪೆಟ್ಟಿಗೆ ಇದ್ದಿತು. ಕೋಣೆಯ ಬಾಗಿಲಿಗೆ ಹಾಕುವುದಕ್ಕೆ ಒಂದು ದೊಡ್ಡ ಕೀಲಿ ಇದ್ದಿತು. ತಾನಿಲ್ಲದಾಗ ತನ್ನ ಕೋಣೆಯಲ್ಲಿ ಇತರರು ಪ್ರವೇಶ ಮಾಡುವುದು ಗೆರಸಿಮನಿಗೆ ಸೇರುತ್ತಿರಲಿಲ್ಲ.

ಗೆರಸಿಮ್ ನಗರಕ್ಕೆ ಬಂದು ಒಂದೆರಡು ವರ್ಷಗಳಾದಮೇಲೆ ಒಂದು ಘಟನೆ ನಡೆಯಿತು. ಇವನ ಯಜಮಾನಿಯ ಊಳಿಗದಲ್ಲಿ ಕೆಪಿಟನ್ ಎಂಬ ಹೆಸರಿನ ಸಮುಗಾರನೂ ಇದ್ದನು. ಆತನೋ ಮಹಾ ಕುಡುಕ. ತನ್ನ ಸದ್ಯದ ಕೆಟ್ಟ ಪರಿಸ್ಥಿತಿಯ ಮೂಲಕ ಮತ್ತು ತನ್ನ ದುಃಖದುಮ್ಮಾಳವನ್ನು ಮರೆಯಲು ಕುಡಿಯಬೇಕಾಗಿ ಬಂದಿದೆ ಎಂದು ಹೇಳುತ್ತಿದ್ದನು.

ಒಂದು ದಿನ ಕೆಪಿಟನ್ನನು ಕುಡಿದ ಅಮಲಿನಲ್ಲಿ ರಸ್ತೆಯ ಧೂಳು ತಿನ್ನುತ್ತ ಬಿದ್ದುದನ್ನು

ಕೇಳಿ ಮನೆಯೊಡತಿಯು, ಗೆವ್ರಿಲೋ—ಮನೆಯ ಕಾರುಭಾರಿಯನ್ನು ಕರೆದು ಹೇಳಿದಳು:

"ಕೆಪಿಟನ್ನನಿಗೆ ಒಂದು ಹೆಣ್ಣನ್ನು ಗಂಟು ಹಾಕಿದರೆ ಹೇಗಾದೀತು, ಗೆವ್ರಿಲೊ? ಆಮೇಲಾದರೂ ಅವನು ಸುಧಾರಿಸಬಹುದಲ್ಲ!"

"ಹೌದು, ಹೌದು! ಬಾಯೀ ಸಾಹೇಬ! ಒಳ್ಳೇ ಉಪಾಯ" ಎಂದನಾತ.

"ಆದರೆ ಅವನನ್ನು ಮದುವೆಯಾಗುವರಾರು?"

"ಅಂ. ಅಂದರೆ ಹs, ಹs, ಅದನ್ನು ತಾವೇ ಹೇಳಬೇಕು. ಅವನು ತೀರ ನಿರುಪಯೋಗಿಯೇನೂ ಅಲ್ಲ."

"ನಮ್ಮ ಟಟಿಯಾನಾಳ ಮೇಲೆ ಅವನಿಗೆ ಮೋಹ! ನನಗೆಲ್ಲ ಗೊತ್ತಾಗಿದೆ" ಎಂದಳು ಒಡತಿ.

ಟಟಿಯಾನಾಳ ಹೆಸರನ್ನು ಕೇಳಿದ ಕೂಡಲೇ, ತನ್ನ ಸಂದೇಹವನ್ನು ಹೇಳಬೇಕೆಂದ ಗೆವ್ರಿಲೋ ತುಟಿಕಚ್ಚಿ ಸುಮ್ಮನುಳಿದನು.

"ಹೌದು. ಟಟಿಯಾನಾಳ ಸಂಗಡ ಅವನ ಮದುವೆಯನ್ನು ಮಾಡಿಬಿಡೋಣ" ಯಜಮಾನಿಯು ನಸ್ಯವನ್ನು ಮೂಗಿನೊಳಗೇರಿಸುತ್ತ ತನ್ನ ನಿರ್ಧಾರವನ್ನು ಸಾರಿ ಅದನ್ನು ಕೃತಿಗಿಳಿಸಬೇಕೆಂದು ಹೇಳಿದಳು.

ಗೆವ್ರಿಲೋ ತನ್ನ ಕೋಣೆಗೆ ಬಂದವನೇ ಅಲ್ಲಿ ಇದ್ದ ಹೆಂಡತಿಯನ್ನು ಹೊರಗೆ ಕಳಿಸಿ, ಕುರ್ಚಿಯ ಮೇಲೆ ಕುಳಿತು ವಿಚಾರಮಗ್ನನಾದನು. ಒಡತಿಯ ಈ ಅನಿರೀಕ್ಷಿತ ಆದೇಶವು ಅವನನ್ನು ಗೊಂದಲದಲ್ಲಿ ಕೆಡವಿದ್ದಿತು. ತುಸು ಹೊತ್ತಿನ ಮೇಲೆ ಕೆಪಿಟನ್ನನನ್ನು ಕರೆಕಳುಹಿದನು.

ಅವರಿಬ್ಬರ ಮಾತುಕತೆಯ ವಿವರಗಳನ್ನು ಹೇಳುವುದಕ್ಕೆ ಮುಂಚೆ, ಗೆವ್ರಿಲೋನ ವಿವಂಚನೆಯ ಕಾರಣವನ್ನು ವಿವರಿಸುವುದು ಅಸಂಗತವಾಗಲಾರದು.

ಟಟಿಯಾನಾಳಿಗೆ, ಯಜಮಾನಿಯ ಬೆಲೆಯುಳ್ಳ ಹಾಗೂ ನಯವಾದ ಬಟ್ಟೆಗಳನ್ನು ಒಗೆಯುವ 'ಸ್ಪೆಶಲ್' ಕೆಲಸವನ್ನು ಕೊಡಲಾಗಿದ್ದಿತು. ೨೮ ವರ್ಷದ ಆಕೆಯು ತೆಳ್ಳನೆಯ ಮೈಕಟ್ಟಿನವಳಾಗಿದ್ದಳು. ಆಕೆಯ ಎಡಗಲ್ಲದ ಮೇಲೆ ಒಂದು ಕಲೆ ಇದ್ದಿತು. ಎಡಗಲ್ಲದ ಮೇಲೆ ಕಲೆಗಳಿದ್ದವರು ದುರ್ದೈವಿಗಳಿರುವರೆಂದು ರಶಿಯದಲ್ಲಿ ಸಾಮಾನ್ಯ ನಂಬಿಗೆ ಇದ್ದಿತು. ಅವಳ ಸಪ್ಪೆಯಾದ ಜೀವನದ ವಿಷಯವಾಗಿ ವಿಶೇಷ ಹೇಳಬೇಕಾದುದ್ದೇನಿಲ್ಲ. ತುಂಬಾ ದುಡಿಯುತ್ತಿದರೂ ಅಂತಃಕರಣದಿಂದ, ಆತ್ಮೀಯತೆಯಿಂದ ಕಾಣುವವರು ಅವಳಿಗಿರಲಿಲ್ಲ. ತನ್ನ ಸುಕುಮಾರ ಯೌವನ ಕಾಲದಲ್ಲಿ ಆಕೆಯು ಆಕರ್ಷಣೀಯಳಾಗಿ ಇದ್ದಿದ್ದಳೇನೊ! ಈಗ ಅದು ಮಸುಕಾಗಿದ್ದಿತು. ಯಾರು ಏನು ಹೇಳಿದರೂ ಅದರಂತೆ ನಡೆಯುವಷ್ಟು ಸೌಮ್ಯಳಿದ್ದಳು. ತನ್ನ ಜೀವನದ ಬಗ್ಗೆ ಸ್ವಲ್ಪವೂ ಯೋಚಿಸಿರಲಿಲ್ಲ. ತಾನಾಯಿತು, ತನ್ನ ಕೆಲಸವಾಯಿತು; ಅದನ್ನು ಮುಗಿಸುವುದೊಂದರ ಕಡೆಗೆಯೇ ಅವಳ ಗಮನವಿರುತ್ತಿತ್ತು. ಆಕೆ ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಒಟ್ಟೇ ಮನುಷ್ಯಪ್ರಾಣಿಗಳಿಗೆ ಅಂಜುತ್ತಿದ್ದಳು. ತನ್ನ ಒಡತಿಯ ನಾಮಮಾತ್ರದಿಂದಲೇ ಅವಳ ಮೈಯಲ್ಲಿ ನಡುಕ ಬರುತ್ತಿತ್ತು. ಒಡತಿಯೋ ಅವಳನ್ನು ವಿಶೇಷವಾಗಿ ಕಂಡಿರಲೂ ಇಲ್ಲ.

ಗೆರಸಿಮ್ ಚಾಕರಿಗೆ ಅಲ್ಲಿಗೆ ಬಂದಾಗಲಂತೂ ಅವನ ದೀರ್ಘ ಕಾಯವನ್ನು ಕಂಡು ಆಕೆ ಥರಥರನೆ ನಡುಗಿದಳು. ಕೆಲವು ದಿನ ಅವನಿಂದ ದೂರವಿರುವುದಕ್ಕೆ ಆಕೆ ಬಹಳ ಪ್ರಯಾಸಪಡಬೇಕಾಯಿತು. ಗೆರಸಿಮ್ ಮೊದಲಿಗೆ ಅವಳ ಬಗ್ಗೆ ಏನೂ ತಿಳಿದುಕೊಂಡಿರಲಿಲ್ಲ. ಆದರೆ ಅವಳ ದೀನ ನಡವಳಿಕೆಯಿಂದಾಗಿಯೆ ಇರಬೇಕು— ಅವಳು ಭೆಟ್ಟಿಯಾದಾಗ ನಗುವನು. ಮೆಚ್ಚಿಕೆಯಿಂದ ಅವಳೆಡೆಗೆ ನೋಡುವನು. ಅವಳು ಹೋದತ್ತೆಲ್ಲ ಅವನ ನೋಟವು ಬೆನ್ನು

ಹತ್ತುವಂತಾಯಿತು.

ಒಂದು ಸಾರೆ ಆಕೆಯು ಯಜಮಾನಿಯ ಒಗೆದ ಬೆಲೆಯುಳ್ಳ ಬಟ್ಟೆಯೊಂದನ್ನು ಎರಡೂ ಕೈಬೆರಳುಗಳಿಂದ ಹಿಡಿದುಕೊಂಡು ಅಂಗಳದಲ್ಲಿ ಹಾದು ಹೋಗುತ್ತಿರುವಾಗ, ಯಾರೋ ಬಲವಾಗಿ ಅವಳ ಟೊಂಕವನ್ನು ಹಿಡಿದಂತೆ ಭಾಸವಾಯಿತು. ಬಳಿಯಲ್ಲಿ ಗೆರಸಿಮ್‌ನನ್ನು ನೋಡಿ ಚೀರಿಕೊಂಡಳು. ಮೂಕನಾದರೂ ಆತ 'ಹಿ. ಹಿ,' ಎಂದು ಹಲ್ಲು ತೆಗೆದು ಗೂರಟುತ್ತಿದ್ದನು. ಹುಂಜವೊಂದನ್ನು ಎತ್ತಿ ಹಿಡಿದು, ಅವಳ ಕೈಯಲ್ಲಿ ತುರುಕಿ, ಮೋಜನ್ನು ನೋಡುತ್ತ ತನ್ನದೇ ರೀತಿಯಲ್ಲಿ ಇನ್ನಷ್ಟು ನಕ್ಕನು.

ಅಂದಿನಿಂದ ದಿನವೂ ಅವಳಿಗೆ ಒಂದಿಲ್ಲೊಂದು ಕಿರುಕುಳವನ್ನು ಕೊಡುವುದು ಅವನ ಕೆಲಸವಾಯಿತು. ಅವಳ ಎದುರಿಗೇ ಕಸ ಗುಡಿಸಿ ಧೂಳನ್ನೆಬ್ಬಿಸುವನು. ಅವಳು ಹೋದಲ್ಲೆಲ್ಲ ಹಿಂಬಾಲಿಸುವನು. ಕೈಗಳನ್ನು ಅಲ್ಲಾಡಿಸಿ ಚೇಷ್ಟೆ ಮಾಡುವನು. ಮೂಕರಿಗೆ ವಿಶಿಷ್ಟವಾದ ರೀತಿಯಲ್ಲಿ ಅಸ್ಪಷ್ಟ ಧ್ವನಿಯನ್ನು ಹೊರಡಿಸುವನು. ಇದಕ್ಕೆ ಮುಂದೇನು ಮಾಡಬೇಕೆಂಬುದು ತಿಳಿಯದೇ ಟಟಿಯಾನಾ ದಿಕ್ಕುಗೆಟ್ಟಳು. ಉಳಿದ ಚಾಕರ ವರ್ಗಕ್ಕೆಲ್ಲ ಮೂಕನ ಈ ತುಂಟ ಚೇಷ್ಟೆಯು ವಿದಿತವಾಯಿತು. ಅವರ ಕೊಂಕುನೋಟ, ಅಣಕದ ನಗೆ, ಹಂಗಿಸುವ ಮಾತುಗಳಿಗೆ ಗುರಿಯಾದವರೆಂದರೆ ಟಟಿಯಾನಾ ಒಬ್ಬಳೇ. ಗೆರಸಿಮ್‌ನಿಗೆ ಮಾತ್ರ ಚೇಷ್ಟೆ ಮಾಡುತ್ತಿರಲಿಲ್ಲ. ಅದರಿಂದಾಗಿ ಹತ್ತಿರ ಗೆರಸಿಮ್ ಇದ್ದಾಗ ಟಟಿಯಾನಾ ಕೂಡ ಸುರಕ್ಷಿತವಾಗುಳಿಯುತ್ತಿದ್ದಳು. ಅವಳಿಗೆ ಬೇಕಿತ್ತೋ ಇಲ್ಲವೊ, ಅಂತೂ ಅಪ್ರತ್ಯಕ್ಷವಾಗಿ ಅವನ ರಕ್ಷಣೆಯಲ್ಲಿ ಆಕೆ ಬಿದ್ದಂತಾಯಿತು. ಇತರ ಕುರುಡ-ಮೂಕರಂತೆ ಅವನೂ ಚುರುಕಾಗಿದ್ದನು. ತನ್ನ ಹೆಸರಿನಲ್ಲಿ ಟಟಿಯಾನಾಳಿಗೆ ಪರಿವಾರದವರು ಚೇಷ್ಟೆ ಮಾಡುವರೆಂಬುದು ಅವನಿಗೆ ಚೆನ್ನಾಗಿ ತಿಳಿದಿತ್ತು.

ಒಂದು ಸಲ ಹಿರಿಯ ದಾಸಿಯೊಬ್ಬಳು ಊಟದ ಮನೆಯಲ್ಲಿ ಟಟಿಯಾನಾಳನ್ನು ಕೂಡ್ರಿಸಿಕೊಂಡು ಒಂದೇ ಸವನೆ ಹಂಗಿಸತೊಡಗಿದಳು. ಟಟಿಯಾನಾ ಅಸಹಾಯತೆಯ ಪರಮಾವಧಿಯಲ್ಲಿ ಅತ್ತುಬಿಟ್ಟರೂ ಆ ದಾಸಿಯು ಅವಳನ್ನು ಬಿಟ್ಟುಕೊಡಲಿಲ್ಲ. ಅಷ್ಟರಲ್ಲಿ ಗೆರಸಿಮ್ ದೆವ್ವನಂತೆ ಎದುರಿಗೇ ಕಾಣಿಸಿಕೊಂಡನು. ಆ ದಾಸಿಯು ಕುಳಿತಿದ್ದಲ್ಲಿಗೆ ಬಂದು, ತನ್ನ ಬಿಗಿದ ಮುಷ್ಟಿಯನ್ನು ಅವಳ ತಲೆಯ ಮೇಲೆ ಇಟ್ಟು, ಕೆಕ್ಕರಗಣ್ಣಿನಿಂದ ನೋಡತೊಡಗಿದಾಗ, ಆಕೆಯು ಜೀವಭಯದಿಂದ ನೆಲಕ್ಕೆ ಕುಸಿದುಬಿಟ್ಟಳು. ಅಲ್ಲಿಂದ ಅವಳನ್ನು ಬಿಟ್ಟುಕೊಟ್ಟ ತನ್ನ ಪಾಡಿಗೆ ತಾನು ಊಟದಲ್ಲಿ ಮಗ್ನನಾದ ಕೂಡಲೇ ದಾಸಿಯು ಓಡಿದಳು. ಮತ್ತು ಗೆರಸಿಮ್‌ನ ಈ ಹಿಂಸಾಚಾರವು ಒಡತಿಯ ಕಿವಿಯ ಮೇಲೆ ಬೀಳುವಂತೆ ಮಾಡಿದಳು.

ಆ ಸುದ್ದಿಯನ್ನು ಕೇಳಿದ ಕೂಡಲೇ ಮುದುಕಿಯು ಗೆರಸಿಮ್‌ನನ್ನು ಕರೆಸಿ ಕೇಳುವಳೆಂದು ಇತರ ದಾಸಿಯರು ತಿಳಿದಾಗ, ಆಕೆಯು ಜೋರಾಗಿ ಬಿದ್ದುಬಿದ್ದು ನಗತೊಡಗಿದಳು. ಅಷ್ಟೇ ಅಲ್ಲ, ಗೆರಸಿಮ್ ಯಾವ ರೀತಿಯಾಗಿ ಆ ದಾಸಿಯನ್ನು ಹೆದರಿಸಿದನೆಂಬುದನ್ನು ಮತ್ತೊಮ್ಮೆ ಕೇಳಿಕೊಂಡು ಸಂತೋಷಪಟ್ಟಳು. ಗೆರಸಿಮ್‌ನು ನಿಷ್ಠಾವಂತನೂ ನಂಬಿಕೆಗೆ ಅರ್ಹನೂ ಇರುವನೆಂಬುದನ್ನು ಆಕೆ ತಿಳಿದಿದ್ದಳು. ಗೆರಸಿಮ್ ಕೂಡಾ ಅವಳ ಈ ವಿಶ್ವಾಸಭಾವವನ್ನು ಅರಿತಿದ್ದನು; ಮತ್ತು ಟಟಿಯಾನಾಳನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಕೇಳಿಕೊಳ್ಳುವುದರಲ್ಲಿದ್ದನು. ಆದರೆ ಕಾರುಭಾರಿಯು, ಒಂದು ಹೊಸ ಕೋಟನ್ನು ಹೊಲಿಸಿ ಕೊಡುವುದಾಗಿ ಹೇಳಿದ್ದರಿಂದ ಒಳ್ಳೆಯ ಬಟ್ಟೆಯನ್ನು ಹಾಕಿಕೊಂಡು ಒಡತಿಯ ಮುಂದೆ ನಿಲ್ಲಬೇಕೆಂದಿರುವಾಗಲೇ ಆ ಮುದುಕಿಯ ತಲೆಯಲ್ಲಿ ಕೆಪಿಟನ್ನನ ಮದುವೆಯ ವಿಚಾರ ಹೊಕ್ಕುಬಿಟ್ಟಿತು.

ಕಾರುಭಾರಿ ಗೆವ್ರಿಲೋನ ಚಿಂತೆಯ ಕಾರಣ ವನ್ನು ಈಗ ಓದುಗರು ಸುಲಭವಾಗಿ ಊಹಿಸ ಬಹುದು.

ಕೆಪಿಟನ್ ಬಂದ ಕೂಡಲೇ ಅವನ ವಿಚಾರ ಚಕ್ರವು ನಿಂತಿತು. 'ಇಕೋ, ನಾನು ಬಂದಿದ್ದೇನೆ. ನಿನಗೇನು ಬೇಕೋ ಕೇಳಿಕೊಳ್ಳಬಹುದು' ಎಂಬ ಭಂಗಿಯಲ್ಲಿ ಕೆಪಿಟನ್ ತನ್ನೆದುರು ನಿಂತಾಗ ಗೆವ್ರಿಲೋನಿಗೆ ತಾತ್ಸಾರ ಭಾವನೆ ಉಂಟಾಯಿತು.

"ಏ ಭೂಪ, ಒಡತಿಯು—ಊಂ, ಒಡತಿಯು ನಿನಗೆ ಮದುವೆ ಮಾಡಬೇಕೆನ್ನುತ್ತಾಳೆ. ಅಂದ ರಾದರೂ ನೀನು ಹಾದಿಗೆ ಬರುವಿಯೋ ಎಂದು ಅವಳ ಯೋಚನೆ, ತಿಳಿಯಿತೆ?"

"ಹೂಂ. ಮದುವೆಯಾಗುವುದು ಮನುಷ್ಯನ ಒಳ್ಳೆಯದಕ್ಕೇ ಅಲ್ಲವೆ? ಚಿಂತೆಯಿಲ್ಲ" ಎಂದ ಕೆಪಿಟನ್.

"ಆಯಿತಲ್ಲ. ಮತ್ತೆ, ನಿನಗೆ ಒಂದು ಕನ್ಯೆ ಯನ್ನೂ ನೋಡಿದ್ದಾಳೆ."

"ಯಾರೆಂದು ನಾನು ತಿಳಿಯಬಹುದೆ?"

"ಟಟಿಯಾನಾ."

"ಟಟಿಯಾನಾ!"

"ಯಾಕೆ? ಹೀಗೇಕೆ ಮುಖ ಮಾಡಿದೆ? ಅವಳು ನಿನಗೆ ಸೇರುವುದಿಲ್ಲವೆ?"

"ಖಂಡಿತ ಅವಳು ನನಗೆ ಮೆಚ್ಚಿಕೆಯಾಗಿ ದ್ದಾಳೆ. ಆಕೆಯ ಒಳ್ಳೆಯ ಗುಣ, ಗಟ್ಟಿಗತನ ವಿಧೇಯತೆಗಳಿಗೆ ಮೆಚ್ಚದವರಾರು? ಆದರೆ ಗೆವ್ರಿಲೋ, ಆ ನೀಚ ರಾಕ್ಷಸ ಅವಳ ಬೆನ್ನಿಗೆ ತಾಗಿದ್ದಾನಲ್ಲ."

"ಅದು ನನಗೆ ಗೊತ್ತಪ್ಪ. ಆದರೆ—"

"ಆದರೇನು? ಅವನು ನನ್ನನ್ನು ಕೊಂದೇ ಬಿಡುತ್ತಾನೆ. ನೊಣ ಹೊಡೆದಷ್ಟು ಹಗುರಾಗಿ ಆತ ನನ್ನನ್ನು ಸಾಯಹೊಡೆಯಬಲ್ಲ. ಅವನ ಬಿರುಸು ಮುಷ್ಟಿಯ ಹೊಡೆತದ ರುಚಿ ನಿನಗೆ ತಾಗಿಲ್ಲ. ಅವನು ಕೆಪ್ಪ. ತಾನು ಹೊಡೆದದ್ದರ ಸಪ್ಪಳ ತನಗೆ ಕೇಳಿಸುವುದಿಲ್ಲ ಮೇಲಾಗಿ ಆತ ಶುದ್ಧ ತಲೆತಿರುಕ. ಅಲ್ಲ, ಗೆವ್ರಿಲೋ.... ಈ ನನ್ನ ನೊಂದ ಜೀವಕ್ಕೆ ಅದಾವ ದುಃಖ ಪರಂಪರೆ ಬಂದರೂ ಅಡ್ಡಿಯಿಲ್ಲ. ಸಾಕಷ್ಟು ನಾನು ಕಷ್ಟ ವನ್ನು ಸೋಸಿದ್ದೇನೆ"-

"ನಿನ್ನ ರಗಳೆ ಬೇಡ. ಅದೆಲ್ಲ ನನಗೆ ಗೊತ್ತು."

"ಗೆವ್ರಿಲೋ, ಹೊಡೆತಗಳಿಗೆ ನಾನು ಅಂಜು ವೆನೆಂದು ತಿಳಿಯಬೇಡ. ಆದರೆ, ಆದರೆ– ಆ ನರ ರಾಕ್ಷಸನ—"

"ಹೋಗಲಿ. ಅವನನ್ನು ನಾನು ನೋಡಿ ಕೊಳ್ಳುತ್ತೇನೆ. ಆಮೇಲಾದರೂ ಒಪ್ಪುವಿಯಾ?"

"ಓಹೋ, ಇಕೋ ನಿನಗೆ ನನ್ನ ಒಪ್ಪಿಗೆ ಯನ್ನು ಕೊಟ್ಟಿದ್ದೇನೆ" ಎಂದು ನಾಟಕೀಯ ವಾಗಿ ಹೇಳಿ, ಕೆಪಿಟನ್ ಹೊರನಡೆದನು.

ಗೆವ್ರಿಲೋ ಎದ್ದು ಶತಪಥ ಹಾಕುತ್ತ ಯೋಚಿ ಸತೊಡಗಿದನು. "ಬಹುಶಃ ನಾಳೆಗೆ ಒಡತಿಯು ಈ ವಿಷಯವನ್ನು ಮರೆತೂ ಬಿಡಬಹುದು. ಈಗೇಕೆ ಅದರ ಚಿಂತೆ? ಒಂದು ವೇಳೆ ಅಂಥ ಪ್ರಸಂಗ ಬಂದರೆ ಆ ರಾಕ್ಷಸನನ್ನು ಪೋಲೀಸರ ವಶಕ್ಕೆ ಕೊಟ್ಟರಾಯಿತು" ಎಂದು ಸಮಾಧಾನ ಹೇಳಿಕೊಂಡನು.

ಆದರೆ ಮರುದಿನ ಬೆಳಿಗ್ಗೆ ಅವನು ನಿತ್ಯದ ಕ್ರಮದಂತೆ ಮುದುಕಿಯ ಭೆಟ್ಟಿಗೆ ಹೋದಾಗ ಅವಳು ಕೇಳಿದ ಮೊದಲ ಪ್ರಶ್ನೆ ಎಂದರೆ, "ಮದು ವೆಯ ಸಿದ್ಧತೆ ಹೇಗೆ ನಡೆದಿದೆ?" ಎಂದು! ಹಿಂದಿನ ದಿನ, ರಾತ್ರಿ ಪಾಳಿಯ ತನ್ನ ದಾಸಿಯೊ ಡನೆ ಕೂಡ ಆಕೆಯು ಇದೊಂದೇ ವಿಷಯವನ್ನು ಮಾತನಾಡಿದ್ದಳು. ಅಷ್ಟೊಂದು ಅದು ಅವಳ ತಲೆಯಲ್ಲಿ ಹೊಕ್ಕುಬಿಟ್ಟಿತ್ತು.

ಬಡ ಗೆವ್ರಿಲೋ ಅವಳ ಮಾತಿಗೆ ಉತ್ತರ ವಾಗಿ, ಮದುವೆಯ ಸಿದ್ಧತೆಗಳು ಭರದಿಂದ ಸಾಗಿ ವೆಯೆಂದೂ ಕೆಪಿಟನ್ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಲು ಕೆಲ ಹೊತ್ತಿನಲ್ಲಿ ಅಲ್ಲಿಗೆ ಬರು ವನೆಂದೂ ಹೇಳಬೇಕಾಯಿತು.

ಕೂಡಲೇ ಗೆವ್ರಿಲೋ ಪರಿವಾರದವರ ಆಪ್ತ ಸಭೆಯೊಂದನ್ನು ಕರೆದನು. ತನ್ನ ಮದುವೆಯ ಸುದ್ದಿಯನ್ನು ಕೇಳಿ ಟಟಿಯಾನಾ ತನ್ನ ಕೋಣೆಯಲ್ಲಿ ಕುಳಿತು ಗೆರಸಿವ್‌ನ ಹೆದರಿಕೆಯಿಂದ ತುಸು ಅತ್ತಳು, ಸುಮ್ಮನಾದಳು. ಕೆಪಟನ್ ಮಾತ್ರ, ದೇವರು ತನಗೆ ಒಂದೇ ತಲೆಯನ್ನು ಕೊಟ್ಟಿದ್ದಾನೆ, ಎರಡು, ಮೂರು, ಅಲ್ಲ; ಇದ್ದ ಒಂದನ್ನು ತಾನು ಕಳೆದುಕೊಳ್ಳಲಾರೆ ಎಂದು ಎಲ್ಲರಿಗೆ ಹೇಳುತ್ತ ನಡೆದನು. ಇತ್ತ ಗೆರಸಿವ್ ಕುಳಿತಲ್ಲಿಂದ ಇತರ ಸೇವಕವರ್ಗದ ಚಲನವಲನ, ಪಿಸು ಮಾತುಗಳನ್ನು ನೋಡುತ್ತಲೇ ಇದ್ದ. ತನ್ನ ವಿರುದ್ಧ ಏನೋ ನಡೆದಿದೆ ಎಂದಷ್ಟು ಮಾತ್ರ ಅವನಿಗೆ ತಿಳಿಯಬಂದಿತ್ತು.

ಸಭೆಯಲ್ಲಿ ಸುದೀರ್ಘ ವಿಚಾರವಿನಿಮಯ ನಡೆಯಿತು. ಕೊನೆಗೆ ಒಂದು ನಿರ್ಣಯಕ್ಕೆ ಬರಲಾಯಿತು. ಗೆರಸಿವ್ ಸ್ವತಃ ಕುಡಿಯುತ್ತಿರಲಿಲ್ಲ. ಕುಡಿಯುವವರನ್ನು ಕಂಡರೆ ಆಗುತ್ತಿರಲಿಲ್ಲ. ಗೇಟಿನ ಬಳಿಯಲ್ಲಿ ತಾನು ಕುಳಿತಾಗ, ಯಾರಾದರೂ ಕುಡುಕರು ಹಾದು ಹೋಗುತ್ತಿದ್ದರೆ ತಿರಸ್ಕಾರದಿಂದ ಅವರನ್ನೊಮ್ಮೆ ನೋಡಿ, ಮೂಗು ಮುಚ್ಚಿಕೊಂಡು, ಮುಖ ತಿರುಗಿಸುತ್ತಿದ್ದನು. ಈಗ ಟಟಿಯಾನಾ ಒಮ್ಮೆ ಚೆನ್ನಾಗಿ ಕುಡಿದು, ಜೋಲಿ ಹೊಡೆಯುತ್ತ ಗೆರಸಿವ್‌ನ ಬದಿಯಲ್ಲಿ ಹಾದುಹೋಗಬೇಕೆಂದು ತೀರ್ಮಾನವಾಯಿತು. ಟಟಿಯಾನಾ ಒಲ್ಲೆನೆಂದು ಹಲುಬಿದಳು. ದೈನ್ಯದಿಂದ ಹೇಳಿಕೊಂಡಳು. ಕೊನೆಗೆ ಗೆರಸಿವ್‌ನಿಂದ ಪಾರಾಗುವುದಕ್ಕೆ ಅದೊಂದೇ ಉಪಾಯವೆಂದು ತಿಳಿದು ಅನಿವಾರ್ಯವಾಗಿ ಒಪ್ಪಿದಳು. ಅದರಂತೆ ಕುಡಿದು ಹೊರಗಿನಿಂದ ಬಂದಳು.

ಆಗ ಗೆರಸಿವ್ ಒಂದು ಸ್ಟೂಲಿನ ಮೇಲೆ, ಗೇಟಿನ ಬಳಿಯಲ್ಲಿಯೆ ಕುಳಿತುಕೊಂಡಿದ್ದನು. ಎಲ್ಲರೂ ವಿವಿಧ ಸ್ಥಳಗಳಲ್ಲಿ ಅಡಗಿಕೊಂಡು, ಈ ನವೀನ ಪ್ರಯೋಗದ ವೀಕ್ಷಣೆಯಲ್ಲಿ ನಿರತರಾಗಿದ್ದರು—ಅವರ ಎಣಿಕೆಯಂತೆ, ಈ ಹಂಚಿಕೆ ಯಶಸ್ವಿಯಾಯಿತೆಂದೇ ಹೇಳಬೇಕು. ಟಟಿಯಾನಾಳನ್ನು ನೋಡಿದ ಕೂಡಲೆ ಗೆರಸಿವ್ ಆತ್ಮೀಯತೆಯಿಂದ ಕಣ್ಣನ್ನು ಹಿಗ್ಗಿಸಿ, 'ಗಿಗ್ ಗಿಗ್' ಎಂದು ಧ್ವನಿ ಹೊರಡಿಸಿದನು. ಆದರೆ ಅವಳು ಹತ್ತಿರ ಬರುತ್ತಲೂ ಅವನು ತನ್ನ ಜಾಗ ಬಿಟ್ಟು ಎದ್ದು, ಅವಳ ಮುಖಕ್ಕೆ ನೇರವಾಗಿ ನಿಂತು ಕೆಕ್ಕರಗಣ್ಣಿನಿಂದ ನೋಡತೊಡಗಿದನು. ಅಂಜಿಕೆಯಿಂದ ಟಟಿಯನಾ ಕಣ್ಣನ್ನೇ ಮುಚ್ಚಿದಳು. ಆಮೇಲೆ ಅವಳ ಕೈ ಹಿಡಿದು ಎಳತಂದು ಇತರ ಸೇವಕರಿದ್ದಲ್ಲಿ ಕರೆದೊಯ್ದು, ಕೆಪಟನ್ನನ ಹತ್ತಿರದಲ್ಲಿ ಅವಳನ್ನು ಕೆಡವಿ ತನ್ನ ಕೋಣೆಗೆ ಹೊರಟುಹೋದನು.

ಇಡೀ ದಿನ ಅವನು ತನ್ನ ಸ್ಥಳವನ್ನು ಬಿಟ್ಟು ಹೊರಬರಲೇ ಇಲ್ಲ. ಮರುದಿನ ಅವನು ತನ್ನ ನಿತ್ಯದ ಚಾಕರಿಗೆ ಅಣಿಯಾದಾಗ ಇತರರಿಗೆ ಅವನಲ್ಲಿ ವಿಶೇಷ ಬದಲಾವಣೆಯೇನೂ ಕಂಡು ಬರಲಿಲ್ಲ. ಮುಖದ ಮೇಲೆ ಒರಟುತನ ಮಾತ್ರ ಎದ್ದು ಕಾಣುತ್ತಿತ್ತು. ಕೆಪಟನ್, ಟಟಿಯಾನಾ ಇವರೆಡೆಗೆ ಹೊರಳಿ ಕೂಡ ನೋಡಲಿಲ್ಲ.

ಮರುವಾರ ಗೊತ್ತುಪಡಿಸಿದಂತೆ ಅವರ ಮದುವೆಯು ನೆರವೇರಿತು. ಮದುವೆಯ ದಿನ ಗೆರಸಿವ್‌ನ ನಡತೆಯಲ್ಲಿ ಏನೂ ಹೆಚ್ಚು ಕಡಿಮೆ ತೋರಲಿಲ್ಲ. ನದಿಯಿಂದ ಮರಳಿ ಬರುವಾಗ, ನೀರಿನ 'ಬ್ಯಾರೆಲ್' ಮುರಿದಿದ್ದಿತು. ಆ ರಾತ್ರಿ ತನ್ನ ಕುದುರೆಯ ಮೈ ತಿಕ್ಕುವಾಗ ಅದರ ರಭಸಕ್ಕೆ ಕುದುರೆಯು ತತ್ತರಿಸಿತು.

ಇದಾಗಿ ಒಂದು ವರ್ಷ ಕಳೆಯಿತು. ಕೆಪಟನ್ನನ ಕುಡಿತವು ಹೆಚ್ಚಾಗಿ, ಆತನು ಸಂಪೂರ್ಣ ಹಾಳಾದನು ಕೊನೆಗೆ ಅವನನ್ನು ಹೆಂಡತಿ ಸಹಿತವಾಗಿ ಹತ್ತಿರದ ಹಳ್ಳಿಗೆ ಕಳಿಸಬೇಕೆಂದು ನಿರ್ಣಯಿಸಲಾಯಿತು. ಮೊದಲಿಗೆ, 'ತಾನೆಲ್ಲಿಗೆ ಬೇಕಾದರೂ ಹೋಗಬಲ್ಲೆ, ಎಲ್ಲಿ ಇದ್ದರೂ ತಾನು ನಿರ್ಲಿಪ್ತನೇ' ಎಂದು ಬಡಾಯಿ ಕೊಚ್ಚಿದ ಕೆಪ-

ಟನ್ನನು ಆ ನಂತರ, 'ಹಳ್ಳಿಗಾಡಿಗೆ ಹೋಗಿ ಹಾಳು ಜೀವನ ನಡೆಸುವ ಹೊತ್ತು ಬಂತಲ್ಲ' ಎಂದು ಗೋಗರೆದನು. ಹೊರಡುವ ಕಾಲಕ್ಕೆ ಕೈಯೆತ್ತಿ ತನ್ನ ಟೊಪ್ಪಿಗೆಯನ್ನು ತಲೆಯ ಮೇಲೆ ಇರಿಸಿಕೊಳ್ಳಲಾರದಷ್ಟು ನಿಶ್ಶಕ್ತನಾಗಿದ್ದಾಗ ಬೇರೆ ಒಬ್ಬರು ಬಂದು ನೆರವಾಗಬೇಕಾಯಿತು.

ಎಲ್ಲ ಸಿದ್ಧತೆಯಾಗಿ, ಇನ್ನೇನು ಗಾಡಿಯು ಹೊರಡಬೇಕೆನ್ನುವಷ್ಟರಲ್ಲಿ ಗೆರಸಿಮ್ ಓಡುತ್ತ ಬಂದು, ಟಟಿಯಾನಾಳಿಗಾಗಿ ಒಂದು ವರ್ಷದ ಹಿಂದೆಯೇ ಕೊಂಡು ಇಟ್ಟಿದ್ದ ಕೆಂಪು ವರ್ಣದ ಕರವಸ್ತ್ರವನ್ನು ಅವಳ ಕೈಗಿತ್ತನು. ಇದುವರೆಗೆ ತನ್ನ ಬಾಳಿನ ದಾರುಣತೆಯನ್ನು ಸಹಿಸಿಕೊಂಡಿದ್ದ ಟಟಿಯಾನಾ ಈಗ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಆ ಮೇಲೆ ಗಾಡಿಯನ್ನು ಹತ್ತುವ ಮುಂಚೆ ಗೆರಸಿಮ್‌ನ ಹಣೆಗೆ ಮುತ್ತಿಟ್ಟಳು. ಗೆರಸಿಮ್ ನಗರದ ಹೊರದಾರಿಯ ತನಕವೂ ಅವಳನ್ನು ಹಿಂಬಾಲಿಸಬೇಕೆಂದು ಯೋಚಿಸಿ ಗಾಡಿಯ ಸಂಗಡವೇ ನಡೆದನು ಆದರೆ ನಡುದಾರಿಯಲ್ಲಿಯೆ ತಡೆದು ನಿಂತು, ನದಿಯ ಕಡೆಗೆ ಸಾಗಿದನು.

ಸಂಜೆಯ ಸಮಯವದು. ಹೊಳೆಯ ದಂಡೆಗೆ ಆತ ಬಂದಾಗ, ಅಲ್ಲಿಯೆ ನೀರಲ್ಲಿ ಯಾವುದೊ ಒಂದು ಪ್ರಾಣಿ, ಒದ್ದಾಡುತ್ತಿದ್ದಂತೆ ಕಂಡಿತು. ಬಾಗಿ ನೋಡಿದಾಗ ಬಿಳಿಯ ನಾಯಿ ಕುನ್ನಿಯೊಂದು, ಥರಥರ ನಡುಗುತ್ತ, ನೀರ ಹೊರಗೆ ಬರುವುದಕ್ಕೆ ಒಂದೇ ಸವನೆ ಧಾವಿಸುತ್ತಿರುವಾಗ ಮತ್ತೆ ನೀರಲ್ಲಿಯೆ ಎಡವಿ ಬೀಳುತ್ತಲಿತ್ತು. ಗೆರಸಿಮನಿಗೆ ಕರುಣೆ ಹುಟ್ಟಿ, ಅದನ್ನು ಮೇಲೆತ್ತಿಕೊಂಡನು, ಮತ್ತು ಅದರ ಮೈಮೇಲಿನ ನೀರನ್ನು ಒರೆಸಿ, ತನ್ನ ಓವರ್ಕೋಟಿನ ಕಿಸೆಯಲ್ಲಿ ತುರುಕಿಕೊಂಡು ಬಂಗಲೆಯ ಕಡೆಗೆ ಸಾಗಿದನು.

ತನ್ನ ಕೋಣೆಯನ್ನು ಸೇರಿದ ಕೂಡಲೇ ಅದನ್ನು ತನ್ನ ಹಾಸಿಗೆಯ ಮೇಲೆ ಕೂಡ್ರಿಸಿ, ತನ್ನ ಕೋಟನ್ನು ಹೊದಿಸಿದನು. ಲಾಯಕ್ಕೆ ಹೋಗಿ ಒಣಗಿದ ಮೆದೆ ಹುಲ್ಲನ್ನು ತಂದನು. ಅಲ್ಲಿಂದ ಅಡಿಗೆಯ ಮನೆಗೆ ಹೋಗಿ, ಬಟ್ಟಲಿನಲ್ಲಿ ತುಸು ಹಾಲು ಹಾಕಿಕೊಂಡು ಬಂದನು.

ಕುನ್ನಿಯು ಮಲಗಿದಲ್ಲಿಯೆ ಆ ಹಾಲಿನ ಬಟ್ಟಲವನ್ನು ಇಟ್ಟಾಗ ಅದು ಕುಡಿಯಲೊಲ್ಲದು. ಅದು ಹುಟ್ಟಿಬಂದು ಮೂರು ವಾರಗಳು ಕೂಡಾ ಕಳೆದಿರಲಿಲ್ಲ. ಬಟ್ಟಲಲ್ಲಿಯ ಹಾಲನ್ನು ಕುಡಿಯಲು ಬರುತ್ತಿರಲಿಲ್ಲ. ಮೈಯನ್ನು ನಡುಗಿಸುತ್ತ ಅದು ಹಿಂದೆ ಸರಿಯಿತು. ಆಗ ಗೆರಸಿಮ್ ಅದರ ತಲೆಯನ್ನು ಏದುವಾಗಿ ಹಿಡಿದು, ಮೂತಿಯನ್ನು ಬಟ್ಟಲಿನಲ್ಲಿ ದೂಡಿದನು. ಕೂಡಲೇ ಆ ಮರಿಯು ಲೊಚಲೊಚನೆ ಹಾಲು ಕುಡಿಯತೊಡಗಿತು. ಅದನ್ನು ನೋಡುತ್ತ ಕುಳಿತಿದ್ದ ಗೆರಸಿಮನಿಗೆ ಆನಂದದ ನಗೆ ಉಕ್ಕಿ ಬಂತು. ಇಡೀ ರಾತ್ರಿಯೆಲ್ಲ ಅದರ ಆರೈಕೆಯಲ್ಲಿ ನಿರತನಾಗಿ, ಅದರ ಬಳಿಯಲ್ಲಿಯೆ ತಾನೂ ಸುಖವಾಗಿ ನಿದ್ದೆಹೋದನು.

ಯಾವ ತಾಯಿಗೂ ಕಡಿಮೆಯೆನಿಸದಷ್ಟು ಗೆರಸಿಮ್ ಆ ತಬ್ಬಲಿ ಮರಿಯ ಆರೈಕೆ ಮಾಡಿದನು. ಮೊದಲಿಗೆ ಅಶಕ್ತವಾಗಿಯೂ ಕುರುಕಾಗಿಯೂ ಕಾಣುತ್ತಿದ್ದ ಆ ಮರಿಯು ೭-೮ ತಿಂಗಳುಗಳ ಅವಧಿಯಲ್ಲಿ, ಸ್ಪ್ಯಾನಿಶ ಜಾತಿಯ ಚುರುಕು ನಾಯಿಯಾಗಿ ಬೆಳೆಯಿತು. ಆ ನಾಯಿಯು ಸ್ವಾಭಾವಿಕವಾಗಿಯೆ ಗೆರಸಿಮ್‌ನಿಗೆ ಬಹಳವಾಗಿ ಅಂಟಿಕೊಂಡಿತ್ತು. ಅವನನ್ನು ಬಿಟ್ಟು ಸ್ವಲ್ಪವೂ ಅಗಲುತ್ತಿರಲಿಲ್ಲ. ಬಾಲವನ್ನು ಅಲ್ಲಾಡಿಸುತ್ತ ಅವನ ಹಿಂದೆಯೆ ನಡೆದಾಡುತ್ತಿತ್ತು. ಮೂಕನಾಗಿದ್ದ ಅವನು ತನಗೆ ಕರೆಯಲು ಅನುಕೂಲವಾಗುವಂತೆ, 'ಮುಮೂ' ಎಂದು ಅದಕ್ಕೆ ಹೆಸರಿಟ್ಟನು.

ತೆಳ್ಳನೆಯ ಮೈಕಟ್ಟಿನ, ತುಂಬು ಬಾಲದ, ಉದ್ದನೆಯ ಕಿವಿಗಳ ಹಾಗೂ ಹೊಳಪಿನ ದೊಡ್ಡ ಕಣ್ಣುಗಳುಳ್ಳ ಆ ನಾಯಿಯನ್ನು ಇತರ ಸೇವ

ಕರೂ ಮೆಚ್ಚಿದರು. ಅದನ್ನು ತಾವೂ 'ಮುಮೂ' ಎಂದು ಕರೆಯತೊಡಗಿದರು. ಅದು ಅತ್ಯಂತ ತಿಳಿವಳಿಕೆಯ ಪ್ರಾಣಿಯಾಗಿದ್ದಿತು. ಕರೆದವರಲ್ಲಿಗೆ ಹೋಗುತ್ತಿದ್ದಿತಾದರೂ ಗೆರಸಿಮನನ್ನು ಬಿಟ್ಟು ಅದು ಇತರರನ್ನು ಅತಿಯಾಗಿ ನೆಚ್ಚಿಕೊಳ್ಳಲಿಲ್ಲ. ಅದರ ಮೇಲಿನ ಗೆರಸಿಮನ ಪ್ರೀತಿಗಂತೂ ಎಣೆಯಿರಲಿಲ್ಲ. ತನ್ನ ಇತರ ವಸ್ತುಗಳಂತೆ, ಮುಮೂನನ್ನೂ ಇತರರು ಹಿಡಿದಾಡುವುದು ಅವನಿಗೆ ಸೇರುತ್ತಿರಲಿಲ್ಲ.

ಪ್ರತಿದಿನ ಬೆಳಿಗ್ಗೆ ಮುಮೂ ಅವನ ಕೋಟನ್ನು ಹಿಡಿದೆಳೆದು ಎಬ್ಬಿಸುತ್ತಿತ್ತು. ತನ್ನ ಕೇವಲ 'ದೋಸ್ತ'ನಂತಿರುವ ನೀರಿನ ಗಾಡಿಯ ಕುದುರೆಯನ್ನು ಹಿಂಬಾಲಿಸಿ, ಅದನ್ನು ಗಾಡಿಗೆ ಹೂಡುವಾಗ ಅದರ ಹತ್ತಿರವೇ ಸುಳಿದಾಡುತ್ತ, ನದಿಗೆ ಹೋಗುತ್ತಿತ್ತು. ಗೆರಸಿಮ್‌ನ ಅಂಗಳ ಕಸಬರಿಗೆಯನ್ನು ಮೊದಲುಮಾಡಿಕೊಂಡು ಎಲ್ಲವನ್ನು ಕಾಯುತ್ತಿತ್ತು. ಅವನ ಕೋಣೆಯ ಬಳಿಯಲ್ಲಿ ಇನ್ನೊಬ್ಬರನ್ನು ಹಾಯುವುದಕ್ಕೂ ಬಿಡುತ್ತಿರಲಿಲ್ಲ. ಮುಮೂವಿಗಾಗಿಯೆ ಗೆರಸಿಮ್‌ನು ತನ್ನ ಬಾಗಿಲಿಗೆ ಒಂದು ಸಣ್ಣ ಕಿಂಡಿಯನ್ನು ಮಾಡಿದ್ದನು.

ದಿನದ ಕೆಲಸವೆಲ್ಲ ಮುಗಿಯುತ್ತಲೂ ಗೆರ-ಸಿಮ್‌ನೊಡನೆ ನಾಯಿಯು ಕೋಣೆಯೊಳಗೆ ಬಂತೆಂದರೆ ತಾನಿನ್ನು ಸ್ವತಂತ್ರ, ಇಲ್ಲಿ ಬೇಕಾದ ಹಾಗೆ ವರ್ತಿಸಬಹುದೆಂಬ ಭಾವನೆ ಅದಕ್ಕುಂಟಾಗುತ್ತಿತ್ತು. ಕೂಡಲೇ ಮಂಚದ ಮೇಲೆ ಜಿಗಿಯುತ್ತಿತ್ತು. ರಾತ್ರಿಗೆ ಅದಕ್ಕೆ ಯಾವಾಗಲೂ ಎಚ್ಚರವಿರುತ್ತಿತ್ತು. ಆಗ ಬೇಸರ ಬಂತೆಂದು, ಹಿಂಗಾಲ ಮೇಲೆ ಕುಳಿತು, ಮೂತಿಯನ್ನೆತ್ತಿ, ನಕ್ಷತ್ರಗಳನ್ನು ನೋಡುತ್ತ ಬೊಗಳುವ ಮೂಢ ನಾಯಿ ಅದಾಗಿರಲಿಲ್ಲ. ಬೇಲಿಯ ಹತ್ತಿರ ಯಾರಾದರೂ ಸುಳಿದಾಡಿದರೆ, ಇಲ್ಲವೆ ಸಂಶಯಾಸ್ಪದ ರೀತಿಯಲ್ಲಿ ಎಲ್ಲಿಯಾದರೂ ಸದ್ದು ಕೇಳಬಂತೆಂದರೆ ಮಾತ್ರ ಮುಮೂ ಒದರುತಿತ್ತು. ಅದು ಅತ್ಯಂತ ಸೂಕ್ಷ್ಮ ನಡತೆಯ ಕಾವಲು ನಾಯಿಯಾಗಿತ್ತು, ಎಂಬುದರಲ್ಲಿ ಸಂಶಯವಿರಲಿಲ್ಲ.

ಆ ಮನೆಗೆ ಇನ್ನೊಂದು ಕಾವಲು ನಾಯಿ ಇತ್ತೇನೊ ನಿಜ. ಆದರೆ ರಾತ್ರಿಯ ಹೊತ್ತು ಆ ವಯಸ್ಸಾದ ನಾಯಿಯನ್ನು ಕಟ್ಟಿಹಾಕುತ್ತಿದ್ದುದರಿಂದ ಅಂಥ ಸ್ಥಿತಿಯೇ ಅದಕ್ಕೆ ಸಾಕಷ್ಟು ರೂಢಿಯಾಗಿತ್ತು. ಕಟ್ಟಿದ ಸರಪಳಿಯಿಂದ ಬಿಡುಗಡೆಯಾಗಬೇಕೆಂದು ಬಯಸದೇ ಮಲಗಿದಲ್ಲಿಂದಲೇ ಆಗಾಗ ಗುರುಗುಟ್ಟುತ್ತ, ಥಟ್ಟನೆ ತನ್ನ ನಿರುಪಯುಕ್ತತೆಯ ಅರಿವು ತನಗೇ ಆದವರಂತೆ, ಸದ್ದನ್ನು ನಿಲ್ಲಿಸಿ ಬಿದ್ದಿರುತ್ತಿತ್ತು. ಮುಮೂ ಬಂಗಲೆಯ ಒಳಗೆ ಒಮ್ಮೆಯೂ ಕಾಲು ಇಟ್ಟಿರಲಿಲ್ಲ. ಗೆರಸಿಮ್ ಕಟ್ಟಿಗೆಯನ್ನು ಹೊತ್ತುಕೊಂಡು ಒಳಗೆ ಹೋದನೆಂದರೆ, ತಾನು ಹೊರಗೆಯೆ ಕುಳಿತುಕೊಂಡು ಒಳಗಿನಿಂದ ತುಸು ಸದ್ದು ಕೇಳಿದರೂ ಕಿವಿ ನಿಮಿರಿಸಿ ಆಲಿಸುತ್ತಿತ್ತು.

ಮತ್ತೊಂದು ವರ್ಷ ಕಳೆಯಿತು. ಗೆರಸಿಮ್ ತನ್ನ ಅಂಗಳದಾಳಿನ ಚಾಕರಿಯಲ್ಲಿ ಸುಖವಾಗಿರುವಾಗ ವಿಶೇಷ ಘಟನೆಯೊಂದು ನಡೆಯಿತು. ಒಂದು ದಿನ ಮನೆಯ ಒಡತಿಯು ತನ್ನ ದಾಸಿಯರಿಂದ ಕೂಡಿಕೊಂಡು ಹರಟೆಯಲ್ಲಿ ಮಗ್ನಳಾಗಿ ಅತ್ತಿಂದಿತ್ತ ಓಡಾಡುತ್ತಿದ್ದಳು. ಅದೇಕೊ ಅಂದು ಅತ್ಯಂತ ಉಲ್ಲಸಿತ ಚಿತ್ತವುಳ್ಳವಳಾಗಿದ್ದರಿಂದ ಬಾರಿಬಾರಿಗೂ ನಗುತ್ತಿದ್ದಳು. ದಾಸಿಯರೂ ಆ ನಗುವಿನ ಲಹರಿಯಲ್ಲಿ ನಿರ್ವಾಹವಿಲ್ಲದೆ ದನಿಗೂಡಿಸುತ್ತಿದ್ದರು. ಯಜಮಾನಿಯ ಈ ಸಂತೋಷದಲ್ಲಿ ಮನಸ್ವೀ ಭಾಗವಹಿಸಲು ಅವರು ಸಿದ್ಧರಿರಲಿಲ್ಲ. ಏಕೆಂದರೆ ಮತ್ತೆ ಯಾವ ಗಳಿಗೆಗೆ ಅವಳಿಗೆ ಸಿಟ್ಟು-ಸೆಡವು ಬರುವುದೆಂಬುದನ್ನು ಹೇಳುವಂತಿರಲಿಲ್ಲ. ಅಲ್ಲದೆ, ಆ ಮುದಿಕೆಯು ಪ್ರತಿಯೊಬ್ಬರೂ ತನ್ನ ವಿಷಯದಲ್ಲಿ ಸಹಾನುಭೂತಿ ಸಮಾಧಾನಗಳನ್ನು ತೋರಿಸ

ಬೇಕೆಂದು ಅಪೇಕ್ಷಿಸುತ್ತಿದ್ದಳು. ಇತರರಲ್ಲಿ ಸ್ವಲ್ಪಾದರೂ ಅನಾದರ—ಅಲಕ್ಷ್ಯತನ ಕಂಡು ಬಂತೆಂದರೆ ಕೀಸರಿಡಿಸುತ್ತಿದ್ದಳು.

ಯಜಮಾನಿಯು ಇಂಥ ಸುಪ್ರಸನ್ನ ಮನಸ್ಸಿನಿಂದ ತನ್ನ ಕೋಣೆಯಲ್ಲಿ ನಡದಾಡುತ್ತಿರುವಾಗ ಸಹಜವಾಗಿ ಕಿಟಕಿಯ ಬಳಿ ಬಂದು ಹೊರಗೆ ಹಣಿಕಿ ಹಾಕಿದಳು. ಆಗ ತೋಟದಲ್ಲಿ ಎಲುಬಿನ ಚೂರನ್ನು ಕಚ್ಚಿಕೊಂಡು ತನ್ನಷ್ಟಕ್ಕೆ ಮಗ್ನವಾಗಿದ್ದ ಮುಮೂ ಅವಳ ಕಣ್ಣಿಗೆ ಬಿದ್ದಿತು.

"ಓಹೋ ! ಯಾರದೀ ನಾಯಿ ?" ಎಂಬ ಉದ್ಗಾರವನ್ನು ತೆಗೆದಳಾಕೆ.

ಜೊತೆಗಾತಿ ದಾಸಿಯು ಈ ಪ್ರಶ್ನೆಯಿಂದ ಒಡತಿಯ ಭಾವನೆಯೇನೆಂಬುದನ್ನು ತಿಳಿಯದೇ ಪೇಚಿನಲ್ಲಿ ಬಿದ್ದಳು.

"ನ—ನನಗೆ ಗೊತ್ತಿಲ್ಲ. ಅಂ. . .ನಮ್ಮ ಅಂಗಳದಾಳಿನದೆಂದು ತೋರುತ್ತಿದೆ" ಎಂದು ತೊದಲಿದಳು.

"ಹೌದು. ಬಹಳೇ ಸೊಗಸಾಗಿದೆ! ಮುದ್ದು ಮರಿ! ಅದನ್ನಿಲ್ಲಿ ಕರತರಲು ಹೇಳು. ಹೂಂ? ಎಷ್ಟು ದಿನವಾಯಿತು ಅದನ್ನವನು ಸಾಕಿ? ನನಗೆ ಗೊತ್ತೇ ಇಲ್ಲವಲ್ಲ. ನಾನದನ್ನು ನೋಡಿಯೇ ಇಲ್ಲ. ಅದನ್ನಿಲ್ಲಿ ಕರತನ್ನಿರಿ."

ಜೊತೆಗಾತಿಯು ದಡಬಡನೆ ಕೆಳಗಿಳಿಯುತ್ತ "ಕೂಡಲೇ ಮುಮೂನನ್ನು ಇಲ್ಲಿ ಮೇಲೆ ತೆಗೆದುಕೊಂಡು ಬಾ" ಎಂದು ಹೇಳಿದಳು.

"ಮುಮೂ ಎಂದು ಕರೆಯುತ್ತಾರಲ್ಲವೆ ಅದಕ್ಕೆ ? ಚೆನ್ನಾಗಿದೆ ಹೆಸರು."

"ಹೌದು ಮೆಡಂ. ಹೂಂ. ಬೇಗ, ಸ್ಟೀಪನ್ !" ಎಂದಳು ಜೊತೆಗಾತಿ.

ಬಾಗಿಲಿನಾಳು ಸ್ಟೀಪನ್ ತೋಟದತ್ತ ಧಾವಿಸಿ ಆ ನಾಯಿಯ ಮೇಲೆ ಮುಗಿಬಿದ್ದನು. ಕೂಡಲೇ ಅದು ಸಾಹಸಪಟ್ಟು ಅವನ ಹಿಡಿತದಿಂದ ತಪ್ಪಿಸಿಕೊಂಡು ಓಡತೊಡಗಿತು. ಸ್ಟೀಪನ್ನನು ಅದರ ಬೆನ್ನು ಹತ್ತಿದನು. ಕೊನೆಗೆ ನಾಯಿಯು ಬ್ಯಾರೆಲ್ಲನ್ನೇ ಎತ್ತಿ ನೀರನ್ನು ಸುರುವುತ್ತಿದ್ದ ಗೆರಸಿಮ್ ನಲ್ಲಿಗೆ ಬಂದು ಅವನ ಕಾಲುಗಳಿಗೆ ಅಂಟಿಕೊಂಡು ನಿಂತಿತು. ಸ್ಟೀಪನ್ ಮತ್ತೂ ಒಮ್ಮೆ ಅದನ್ನು ಹಿಡಿಯಲೆಳಿಸಿದಾಗ, ಅದು ಸಿಕ್ಕಲಿಲ್ಲ. ಗೆರಸಿಮ್ ನಗುತ್ತ ಸುಮ್ಮನೇ ನಿಂತಿದ್ದನು. ಆಗ ಸ್ಟೀಪನ್, ಒಡತಿಯು ನೋಡಬೇಕೆನ್ನುತ್ತಾಳೆ ಎಂಬ ವಿಚಾರವನ್ನು ಕೈಮಾಡಿ ಸನ್ನೆಯಿಂದ ತಿಳಿಸಿದನು. ಆಗ ಗೆರಸಿಮ್ ತಾನೇ ಅದನ್ನು ಕರೆದು, ಎತ್ತಿ ಸ್ಟೀಪನ್ನನ ಕೈಯಲ್ಲಿ ಕೊಟ್ಟನು.

ಸ್ಟೀಪನ್ ಅದನ್ನು ತೆಗೆದುಕೊಂಡು ಒಡತಿಯ ಕೋಣೆಯಲ್ಲಿ ಹಾಸಿ ಇಟ್ಟ ನೆಲದ ಮೇಲೆ ಒಂದು ಬದಿಯಲ್ಲಿ ಕೂಡ್ರಿಸಿದನು. ಒಡತಿಯು 'ಚ್ಚು, ಚ್ಚು' ಎಂದು ಹೇಳುತ್ತ ಮಿದುವಾಗಿ ಅದನ್ನು ಕರೆದಳು. ಇಂಥ ವಾತಾವರಣದಲ್ಲಿ, ಅಪರಿಚಿತರ ಮಧ್ಯದಲ್ಲಿ ಅದೆಂದೂ ಕಾಲಿರಿಸಿರಲಿಲ್ಲ. ಅದು ಹೊರಗೆ ಹೋಗಲು ಧಾವಿಸಿತು. ಆದರೆ ಸ್ಟೀಪನ್ ಬಾಗಿಲಲ್ಲಿಯೆ ನಿಂತಿದ್ದನು. ಕೊನೆಗೆ ಮೆಲ್ಲಗೆ ನಡಗುತ್ತ ಅಲ್ಲಿಯ ಗೋಡೆಗೆ ಆತು ಕುಳಿತುಕೊಂಡಿತು.

ಯಜಮಾನಿಯು ಮತ್ತೆ ಮತ್ತೆ ಅದನ್ನು ವಿನಯದಿಂದ ಕರೆದಳು, ಕೈಮಾಡಿದಳು. "ಬಾ! ಮುಮೂ. ನಿನ್ನ ಒಡತಿಯು ಹತ್ತಿರ ಬರಲೊಲ್ಲೆಯಾ ? ಬಾ, ಚ್ಚು ಚ್ಚು, ಚ್ಚು. ಹೆದರಬೇಡ ಬಾ" ಎಂದಳು.

ಇತರ ಸೇವಕಿಯರು "ಹೋಗು ಮುಮೂ. ಬೇಗ ಹೋಗು !" ಎಂದು ಹೇಳಿದರು.

ಭಯದಿಂದ ದಿಕ್ಕೆಟ್ಟ ಮುಮೂ ಇವರೆಲ್ಲರು ಕರೆದಂತೆಲ್ಲ ಗೋಡೆಗೆ ಇನ್ನಷ್ಟು ಮುದುಡಿಕೊಂಡಿತು. . . .

"ಹೋಗಿರಿ ಅದಕ್ಕೇನಾದರೂ ತಿನ್ನಲಿಕ್ಕೆ ತನ್ನಿರಿ. ಒಳ್ಳೇ ನಾಯಿಯಿದು. ತನ್ನ ಒಡತಿಯ ಹತ್ತಿರ ಬರಲಿಕ್ಕೆ ಒಲ್ಲೆನ್ನುತ್ತದಲ್ಲ" ಎಂದು ಯಜಮಾನಿಯು ಶಾಂತಿಯುಕ್ತ ಅಸಮಾಧಾನವನ್ನು ವ್ಯಕ್ತಪಡಿಸಿದಳು.

ಸ್ಟೇಪನ್ ಒಂದು ಬಸಿಯಲ್ಲಿ ಹಾಲು ತಂದು ಅದರ ಮುಂದೆ ಇಟ್ಟಾಗಲೂ, ಮುಮೂ ಅದನ್ನು ಮುಟ್ಟಲಿಲ್ಲ. ಮುಖ ತಿರುಗಿಸಿ ಅಸಹಾಯತೆಯಿಂದ ಬಾಗಿಲ ಕಡೆಗೆ ನೋಡತೊಡಗಿತು.

"ಥೂ, ಖೋಡಿ ನಾಯಿ, ಹಾಗೆಲ್ಲ ಮಾಡಬಾರದು" ಎನ್ನುತ್ತ ಒಡತಿಯು ಅದರ ಹತ್ತಿರ ಬಂದು, ಅದರ ಬೆನ್ನ ಮೇಲೆ ಕೈಯಾಡಿಸ ಹೋದಳು. ಮುಮೂ ಥಟ್ಟನೆ ಮುಖವನ್ನು ಎತ್ತಿ ಹಲ್ಲು ತೆಗೆಯುತ್ತ, ಹೊರಳಿ ನಿಂತಿತು. ಮುದುಕಿಯು ಗಾಬರಿಯಿಂದ ತನ್ನ ಕೈಯನ್ನು ಹಿಂತೆಗೆದುಕೊಂಡಳು.

"ಅಯ್ಯೋ! ಏನಾಯಿತು? ಏನಾಯಿತು? ಕಡಿದೇ ಬಿಟ್ಟಿತೆ? ಹೊಲಸು ನಾಯಿ! (ಮುಮೂ ಜನ್ಮದಲ್ಲಿ ಯಾರಿಗೂ ಕಡಿದದ್ದಿಲ್ಲ) ಅಯ್ಯೋ! ಇನ್ನೇನು ಗತಿ?" ಎಂದು ಸೇವಕಿಯರು ಗಾಬರಿ ಮಾಡಿದರು.

ಇತ್ತ ಮುಮೂ ಸಣ್ಣದನಿಯಲ್ಲಿ ಗೊಣಗ ತೊಡಗಿತ್ತು. ಮುದುಕಿಯು ಭಯದಿಂದ ಬಿರಬಿರನೆ ಅದರ ಕಡೆ ನೋಡುತ್ತ "ಒಯ್ಯಿರತ್ತ ಅದನ್ನು! ಸುಡುಗಾಡು ಸೊಕ್ಕಿನ ಪ್ರಾಣಿ! ಹ..." ಎಂದು ನುಡಿದು ಮೆಲ್ಲಗೆ ಹೊರಳಿ ತನ್ನ ಮಲಗುವ ಕೋಣೆಗೆ ಹೊರಟಳು. ದಾಸಿಯರು ಒಬ್ಬರನ್ನೊಬ್ಬರು ಪ್ರಶ್ನಾರ್ಥಕವಾಗಿ ನೋಡುತ್ತ, ಕೊನೆಗೆ ಒಡತಿಯನ್ನು ಹಿಂಬಾಲಿಸಿದರು. ಆಗ "ಯಾಕೆ? ಯಾಕೆ ಬರುತ್ತೀರಿ? ನಾನೇನು ನಿಮಗೆ ಬಾ ಎಂದೆನೇ?" ಎಂದು ಹರಿಹಾಯ್ದಳು.

ಇತ್ತ ಸ್ಟೇಪನ್ನ ಮುಮೂನನ್ನು ಎತ್ತಿ ಅಲ್ಲಿಯೆ ಕಾದು ನಿಂತಿದ್ದ ಗೆರಸಿಮ್‌ನತ್ತ ಹೊರಗೆ ಒಗೆದನು. ಅರ್ಧ ತಾಸಿನ ವರೆಗೆ ಮನೆಯಲ್ಲೆಲ್ಲ ಮಸಣ ಶಾಂತಿ ಅಡಗಿತ್ತು. ಮುದುಕಿಯು ಮುಖವನ್ನು ದಪ್ಪಗೆ ಕಪ್ಪಗೆ ಮಾಡಿಕೊಂಡು ಸೋಫಾದಲ್ಲಿ ಕುಳಿತಿದ್ದಳು. ಒಮ್ಮೊಮ್ಮೆ ಕ್ಷುಲ್ಲಕ ವಿಷಯಗಳೂ ಎಷ್ಟೊಂದು ದೀರ್ಘ ಪರಿಣಾಮವನ್ನು ಮಾಡುತ್ತವೆ!

ಇಡೀ ದಿನ ಮುದುಕಿಯು ಒಂದು ನಮೂನೆಯಾಗಿದ್ದಳು. ವಿಶೇಷ ಮಾತಿಲ್ಲ. ಇಸ್ಪೇಟನ್ನು ಆಡಲಿಲ್ಲ. ಮಲಗಿದ ಮೇಲೆ ನೆಟ್ಟಗೆ ನಿದ್ರೆ ಹತ್ತಲಿಲ್ಲ. ತನಗೆ ಕೊಟ್ಟ ಯೂ ಡಿ ಕೋಲನ್ ಸರಿಯಾಗಿ ಇರಲಿಲ್ಲ ಎಂದು ಗೊಣಗಿದಳು. ತಲೆದಿಂಬಿನ ಅರಿವೆಗೆ ಸಾಬೂನಿನ ವಾಸನೆ ಬರುತ್ತದೆಂದು ಅವಳಿಗೆ ಅನಿಸಿದ್ದರಿಂದ, ರಾತ್ರಿಪಾಳಿಯ ದಾಸಿಯು ಅವಳ ಹಾಸಿಗೆಯನ್ನೆಲ್ಲ ಮೂಸಿ ನೋಡಬೇಕಾಯಿತು.

ಬೆಳಗಾದ ಮೇಲೆ ಆಕೆಯು ದಿನಕ್ಕಿಂತ ಮುಂಚೆಯೇ ಗೆವ್ರಿಲೋನನ್ನು ಬರಮಾಡಿಕೊಂಡಳು. ಏನೋ ಬಿಗಡಾಯಿಸಿದೆ ಎಂಬುದನ್ನು ಅರಿತುಕೊಂಡೇ ಆತ ಒಳಗೆ ಕಾಲಿಟ್ಟನು.

"ಗೆವ್ರಿಲೋ, ನಿನ್ನೆ ರಾತ್ರಿಯೆಲ್ಲ ಅದಾವ ನಾಯಿ ಒದರಿತಪ್ಪ? ನನಗೆ ನಿದ್ರೆಯನ್ನೇ ಮಾಡಗೊಡಲಿಲ್ಲ, ನೋಡು" ಎಂದಳು.

"ನಾಯಿ? ಯಾವ ನಾಯಿ? ಆ ಮೂಕ ಗೆರಸಿಮ್‌ನ ನಾಯಿಯೇನು?"

"ಮೂಕನದೊ, ಇನ್ನಾರದೋ ನನಗೆ ಗೊತ್ತಿಲ್ಲಪ್ಪ. ನನಗೆ ಅದರ ಒದರುವಿಕೆಯಿಂದ ಎಷ್ಟೊ ನಿದ್ದೆ ಹತ್ತಲಿಲ್ಲವೆಂದು ನನ್ನ ಮುಖ ನೋಡಿದರೆ ಕಾಣಿಸುವುದಷ್ಟೆ. ಅಲ್ಲ, ನೀವೆಲ್ಲ ಇರುವಾಗ ಇಷ್ಟೊಂದು ನಾಯಿಗಳೇಕೆ ಇರಬೇಕೆಂದು ನನಗೆ ತಿಳಿಯುವುದಿಲ್ಲ. ನಮ್ಮಲ್ಲಿ ಈಗಾಗಲೇ ಒಂದು ಕಾವಲು ನಾಯಿ ಇದೆಯಷ್ಟೆ."

"ಹಾದು ಹಾದು."

"ಸರಿ ಮತ್ತೆ, ಇನ್ನೊಂದು ನಾಯಿಯೇಕೆ ಬೇಕು? ಸುಮ್ಮನೆ ಹುಡದಿಗೆ ಕಾರಣವಲ್ಲವೆ? ನಿನಗೆ ಹೇಳುವವರು ಯಾರೂ ಇಲ್ಲವಾಗಿದೆ ಎಂದೇ ಅನ್ನಬೇಕಾಗುತ್ತದೆ. ಇಷ್ಟಕ್ಕೂ ಆ ಮೂಕನಿಗೇಕೆ ಬೇಕು ನಾಯಿಯ ಉಸಾಬರಿ? ಯಾರು ಹೇಳಿದರು ಅವನಿಗೆ ನನ್ನ ಜಾಗದಲ್ಲಿ ನಾಯೀ ಸಾಕುವುದಕ್ಕೆ? ಯಾರು ಅವನಿಗೆ ಪರವಾನಿಗೆ ಕೊಟ್ಟರಂತೆ? ನಿನ್ನೆ ನಾನು ಕಿಟಕಿಯಲ್ಲಿ ಸಹಜವಾಗಿ ಹಣಿಕಿಹಾಕಿದಾಗ, ಹಾಳು ಎಲುಬನ್ನು ಹಿಡಿದುಕೊಂಡು, ತೋಟದಲ್ಲಿ ಹೊಲಸು ಮಾಡುತ್ತಿತ್ತು—ಅದೂ ನಮ್ಮ ಗುಲಾಬಿ ಗಿಡದ

ಹತ್ತಿರ !"

ಯಜಮಾನಿಯು ಉಸಿರಿಗಾಗಿ ಒಂದು ಕ್ಷಣ ತಡೆದು ಅಪ್ಪಣೆ ಮಾಡಿದಳು :

"ಆ ನಾಯಿ ನಮ್ಮಲ್ಲಿ ಬೇಡ! ಗೊತ್ತಾಯಿತೆ?"

"ಆಗಲಿ ಮೆಡಂ."

"ಇವತ್ತೇ ಅದನ್ನು ಹೊರಗೆ ಹಾಕಬೇಕು, ಏನು ? ಈಗ ಹೋಗು. ಆಮೇಲೆ ಏನಾಯಿತೆಂದು ಬಂದು ಹೇಳು."

ಹೊರಗೆ ಬಂದ ಗೆವ್ರಿಲೋ, ಸ್ಟೀಪನ್ನನಿಗಾಗಿ ಹುಡುಕಿದನು. ಸ್ಟೀಪನ್ ದೊಡ್ಡ ಕಿಡಿಕಿಯೊಂದರ ಮಾಡದಲ್ಲಿ, ಗಾಯಗೊಂಡು ಯುದ್ಧರಂಗದಲ್ಲಿ ಬಿದ್ದ ವೀರನೋಪಾದಿಯಾಗಿ, ತನ್ನ ಕೋಟನ್ನೇ ಕಂಬಳಿಯನ್ನಾಗಿ ಮಾಡಿಕೊಂಡು, ಬರಿಗಾಲನ್ನು ಹೊರಚಾಚಿ ಮಲಗಿದ್ದನು. ಗೆವ್ರಿಲೋ ಅವನನ್ನು ಅಲುಗಾಡಿಸಿ ಎಬ್ಬಿಸಿ, ಅವನ ಕಿವಿಯಲ್ಲಿ ಪಿಸುಗುಟ್ಟಿದನು. ಸ್ಟೀಪನ್ನನ ಕಣ್ಣುಗಳು ಅರಳಿದವು. ಆಕಳಿಸುತ್ತಲೇ 'ಹೂಂ' ಎಂದು ಗೋಣು ಹಾಕಿದನು. ಕೂಡಲೇ ಕೋಟು ಬೂಟುಗಳನ್ನು ಸಿಕ್ಕಿಸಿಕೊಂಡು ಹೊರಬಂದನು. ಐದೇ ನಿಮಿಷಗಳ ತರುವಾಯ ಗೆರಸಿಮ್ ದೊಡ್ಡ ಕಟ್ಟಿಗೆಯ ಹೊರೆಯನ್ನು ಹೊತ್ತುಕೊಂಡು ಒಳನಡೆದನು. ಯಥಾಪ್ರಕಾರ ಮುಮೂ ಬಾಗಿಲಲ್ಲಿಯೇ ಒಡೆಯನಿಗಾಗಿ ಕಾಯ್ದು ನಿಂತಿತ್ತು.

ಇದೇ ಸಮಯವನ್ನು ನಿರೀಕ್ಷಿಸುತ್ತಿದ್ದ ಸ್ಟೀಪನ್ ಬಾವುಗವು ಕೋಳಿಯೊಂದರ ಮೇಲೆ ಎರಗುವಂತೆ ನಾಯಿಯ ಮೇಲೆ ಎರಗಿದವನೇ ಅದನ್ನು ಕಂಕುಳಲ್ಲಿ ಬಲವಾಗಿ ಅವುಕಿಕೊಂಡು ರಸ್ತೆಗೆ ಓಡಿದನು. ಆಗಿಂದಾಗ ಒಂದು ಕುದುರೆ ಗಾಡಿಯನ್ನು ಹಿಡಿದು ಅದರಲ್ಲಿ ಹತ್ತಿ ಪೇಟೆಗೆ ಓಡಿದನು. ಧಡಪಡಿಸುತ್ತ ಹೇಗೊ ಒಬ್ಬ ಗಿರಾಕಿಯನ್ನು ಹಿಡಿದು ಅರ್ಧ ರೂಬಲ್ಲಿಗೆ ಅದನ್ನು ಮಾರಾಟ ಮಾಡಿದನು. ಅಷ್ಟು ಅಲ್ಪ ಬೆಲೆಗೆ ಅದನ್ನು ಮಾರುವಾಗ ಒಂದು ವಾರದ ವರೆಗ ಇದನ್ನು ಎಲ್ಲಿಯೂ ಹೊರಗೆ ಬಿಡಕೂಡದೆಂದು ಗಿರಾಕಿಗೆ ಕರಾರು ಹಾಕಿದನು. ಬರುವಾಗ ಅದೇ ಹಣವನ್ನು ಕುದುರೆ ಗಾಡಿಯವನಿಗೆ ಕೊಟ್ಟು ನಡುದಾರಿಯಲ್ಲಿ ಇಳಿದು ಹೊರ ಬಾಗಿಲಿನಿಂದ ಬರದೆ ಬಂಗಲೆಯ ಮಗ್ಗುಲಿಗಿರುವ ಸಂದಿಯಲ್ಲಿ ಹಾಯ್ದು ಹಿತ್ತಲಿನ ಬೇಲಿಯನ್ನು ಜಿಗಿದು ಒಳಬಂದನು.

ಆದರೆ ಗೆರಸಿಮ್‌ನಿಗಾಗಿ ಅವನಿಷ್ಟು ಹೆದರಬೇಕಾದುದೇ ಇರಲಿಲ್ಲ. ಗೆರಸಿಮ್ ತನ್ನ ಅಂಗಳದಲ್ಲಿ ಇರಲಿಲ್ಲ. ಕಟ್ಟಿಗೆಯನ್ನು ಇಳಿಸಿ ಹೊರಬಂದ ಕೂಡಲೇ ಮುಮೂ ಅಲ್ಲಿ ಇಲ್ಲದ್ದು ಕಂಡುಬಂದಿತು. ಮುಮೂ ಆ ಜಾಗದಲ್ಲಿ ನಿಂತು ಕಾಯದ ಒಂದೂ ದಿನ ಇರಲಿಲ್ಲ. ಇಡೀ ಕಂಪೌಂಡಿನಲ್ಲಿ ತನ್ನದೇ ಆದ ರೀತಿಯಲ್ಲಿ ಅದರ ಹೆಸರುಗೊಂಡು ಕರೆಯುತ್ತ ಹುಡುಕಿದನು. ರಸ್ತೆಗೆ ಓಡಿದನು. ಅದರ ಪತ್ತೆಯೇ ಇಲ್ಲ ! ಗಾಬರಿಯ ಸನ್ನೆಗಳಿಂದ ಎಲ್ಲ ಸೇವಕರನ್ನೂ ಕೇಳಿ ನೋಡಿದನು. ಅವರಲ್ಲಿ ಅನೇಕರಿಗೆ ನಿಜ ಸಂಗತಿ ಗೊತ್ತು ಇರಲಿಲ್ಲ. ಗೊತ್ತಿದ್ದವರು ಭುಜವನ್ನು ಹಾರಿಸಿ ಮೂಕವಾಗಿಯೆ ನಕಾರಾತ್ಮಕ ಉತ್ತರವನ್ನು ಕೊಟ್ಟರು. ಅಲ್ಲಿಂದ ಗೆರಸಿಮ್ ಮನೆ ಬಿಟ್ಟು ಹೊರನಡೆದನು.

ಅವನು ಹಿಂತಿರುಗಿದಾಗ ಕತ್ತಲೆ ಬೀಳುತ್ತಲಿತ್ತು. ಅರ್ಧ ಮಾಸ್ಕೊ ನಗರವನ್ನು ಸುತ್ತಾಡಿ ಬಂದಿದ್ದ ಆತನ ಮುಖವು ಬಾಡಿತ್ತು. ಬಟ್ಟೆಗಳೆಲ್ಲ ಧೂಳಿಮಯವಾಗಿದ್ದವು. ಅಂಗಳದಲ್ಲಿ ನಿಂತು ಒಡತಿಯ ಕಿಡಿಕಿಯತ್ತ ಒಮ್ಮೆ ನೋಡಿ, ಆಮೇಲೆ "ಮುಮೂ" ಎಂದು ಕರೆದನು. ಸೇವಕರೆಲ್ಲರೂ ಅವನು ಮರಳಿ ಬಂದದ್ದನ್ನು ನೋಡಿದರು. ಆದರೆ ಯಾರೂ ನೋಡಿ ನಗಲಿಲ್ಲ. ಮಾತನಾಡಿಸಲಿಲ್ಲ.

ಮರುದಿನ ಗೆರಸಿಮ್ ತನ್ನ ಕೋಣೆಯನ್ನು ಬಿಟ್ಟು ಹೊರಬರಲಿಲ್ಲ. ಇತ್ತ ಮುದುಕಿಯು ಗೆವ್ರಿಲೋನನ್ನು ಕರೆದು ತನ್ನ ಆಜ್ಞೆಯು ನೆರವೇರಿತೋ ಎಂದು ಕೇಳಿದಳು. ಗೆವ್ರಿಲೋ ಅಭಿಮಾನದಿಂದ ಹೌದೆಂದನು. ಅದರ ಮರುದಿನ ಗೆರಸಿಮ್ ತನ್ನ ಕೆಲಸಕ್ಕೆ ಅಣಿಯಾದನು. ಮಧ್ಯಾಹ್ನದ ವೇಳೆಗೆ ಊಟದ ಮನೆಗೆ ಬಂದು

ತನ್ನ ಊಟವನ್ನು ಮುಗಿಸಿದನು. ಇತರರೊಡನೆ ಎಳ್ಳಷ್ಟೂ ಬೆರೆಯದೆ ಹೊರಬಂದನು. ಮೂಕರಾದವರ ಮುಖವು ಮೊದಲೇ ನಿಸ್ತೇಜವಿರುತ್ತದೆ. ಅಂದಂತೂ ಕಲ್ಲಿನಂತೆ ಅವನ ಮುಖವು ಬಿಗಿದುಕೊಂಡಿತ್ತು.

ಊಟವು ಮುಗಿದಮೇಲೆ ಅವನು ಮತ್ತೆ ಮನೆಬಿಟ್ಟು ಹೊರಟನು. ಆದರೆ ಬೇಗ ಹಿಂತಿರುಗಿ ಬಂದನು. ಬಂದವನೇ ಹುಲ್ಲಿನ ಬಣವೆಯ ಬದಿಗೆ ಒರಗಿ ನಿರಭ್ರವಾದ ಆಕಾಶದಲ್ಲಿಯ ಚಂದಿರನನ್ನು ನೋಡುತ್ತ ಕುಳಿತನು. ಆಗಾಗ ನಿಟ್ಟುಸಿರನ್ನು ಬಿಡುತ್ತ ಹೊರಳಾಡುತ್ತಿರುವಾಗ ತನ್ನ ಕೋಟಿನ ಚುಂಗನ್ನು ಹಿಡಿದು ಎಳೆದಂತಾಯಿತು. ಧಿಗ್ಗನೆ ಎದ್ದು ಕುಳಿತು ನೋಡುತ್ತಾನೆ-ಮುಮೂ! ತಕತಕನೆ ಕುಣಿಯುತ್ತ ಬಾಲವನ್ನು ಅಲ್ಲಾಡಿಸುತ್ತ ನಿಂತಿದ್ದಿತು. ಅದರ ಕೊರಳಿಗೆ ಕಟ್ಟಿದ್ದ ಉದ್ದನೆಯ ಹಗ್ಗವು ನೆಲದ ಮೇಲೆ ಬಿದ್ದಿತ್ತು. ಅದನ್ನು ಕಂಡು ಗೆರಸಿಮ್‌ನ ಹೃದಯದ ಅಂತರಾಳದಿಂದ ಸಂತೋಷವು ಉಕ್ಕಿಬಂದಿತು. ಮುಮೂವನ್ನು ತನ್ನ ಎರಡೂ ಕೈಗಳಿಂದ ಬಾಚಿ ತಬ್ಬಿಕೊಂಡನು. ಅದು ಅಚ್ಚೆಯಿಂದ ಅವನ ಗಲ್ಲ ಕುತ್ತಿಗೆ ಗಡ್ಡ ಮೀಸೆಗಳ ಮೇಲೆ ತನ್ನ ಮೂತಿಯನ್ನು ಆಡಿಸಿತು.

ಅಲ್ಲಿಂದ ಗೆರಸಿಮ್ ಮೆಲ್ಲನೆ ಎದ್ದು ಹೊರಟನು. ದಾರಿಯಲ್ಲಿ ಯಾರೂ ತನ್ನನ್ನು ನೋಡುತ್ತಿಲ್ಲವೆಂದು ಖಾತ್ರಿ ಮಾಡಿಕೊಂಡು, ತನ್ನ ಕೋಣೆಯನ್ನು ಸೇರಿದನು.

ತನ್ನ ನಾಯಿಯು ತಪ್ಪಿಸಿಕೊಂಡು ಹೋಗಿಲ್ಲವೆಂದೂ ಒಡತಿಯ ಅಪ್ಪಣೆಯ ಮೇರೆಗೆ ಅದನ್ನು ಎಸೆದು ಬರಲಾಗಿತ್ತೆಂದೂ ಅವನು ಈಗಾಗಲೇ ಊಹಿಸಿದ್ದನು. ಮುಮೂ ಒಡತಿಯ ಬಳಿಗೆ ಹೋಗದೆ ಅವಳನ್ನು ಕಚ್ಚಲು ಹೋಗಿತ್ತೆಂಬುದನ್ನು ಸೇವಕರೂ ಹಾವಭಾವಗಳಿಂದ ಅವನಿಗೆ ತಿಳಿಸಿದ್ದರು. ಗೆರಸಿಮ್ ಈಗ ಅದನ್ನು ರಕ್ಷಿಸುವ ನಿರ್ಧಾರ ಮಾಡಿದನು.

ಮೊದಲು ಅದಕ್ಕೆ ತಿನ್ನಲು ಬ್ರೆಡ್ಡನ್ನು ಕೊಟ್ಟನು. ಅದಕ್ಕೆ ಜೊಂಪು ಹತ್ತಿದಮೇಲೆ ನಾಯಿಯನ್ನು ಹೇಗೆ ಬಚ್ಚಿಡಬೇಕೆಂಬ ಬಗ್ಗೆ ಯೋಚಿಸತೊಡಗಿದನು. ಕೊನೆಗೆ ಹಗಲೆಲ್ಲ ಅದನ್ನು ಕೋಣೆಯಲ್ಲಿ ಬಚ್ಚಿಡುವುದೆಂತಲೂ ಕತ್ತಲೆಯಾದ ಮೇಲೆ ಅದನ್ನು ಹೊರಗೆ ತಿರುಗಾಡಿಸಿಕೊಂಡು ಬರುವುದೆಂತಲೂ ಗೊತ್ತುಮಾಡಿಕೊಂಡನು. ಬಾಗಿಲಿಗೆ ಇರುವ ಕಿಂಡಿಯನ್ನು ತನ್ನ ಕೋಟಿನಿಂದ ಮುಚ್ಚಿದನು. ಮರುದಿನ ಬೆಳಿಗ್ಗೆ ಏನೂ ವಿಶೇಷ ಆಗಿಲ್ಲೆಂಬಂತೆ, ಆದರೆ ಒಳಗೊಳಗೇ ತನ್ನ ಗುಟ್ಟನ್ನು ಸವಿಯುತ್ತ ಓಡಾಡಿದನು. ಕೆಲಸದಲ್ಲಿ ನಿರತನಾದನು.

ಆದರೆ ಮುಮೂ ತನ್ನ ಬೊಗಳುವಿಕೆಯಿಂದ ಈ ಗುಟ್ಟನ್ನು ಬಹಿರಂಗಗೊಳಿಸುವುದೆಂಬ ಕಲ್ಪನೆಯು ಹುಟ್ಟುಗಿವುಡನಾದ ಆತನಿಗೆ ಅಷ್ಟೊಂದು ಬರಲಿಲ್ಲ. ಬೆಳಗು ಹರಿದ ಒಂದೇ ತಾಸಿನಲ್ಲಿ, ಗೆರಸಿಮ್‌ನ ನಾಯಿಯು ಮರಳಿ ಬಂದಿದೆಯೆಂದೂ ಅದನ್ನು ಅವನು ತನ್ನ ಕೋಣೆಯಲ್ಲಿ ಕೀಲಿಹಾಕಿ ಇಟ್ಟರುವನೆಂತಲೂ ಎಲ್ಲರಿಗೂ ತಿಳಿದುಹೋಯಿತು. ಆದರೆ ಗೆರಸಿಮ್ ಹಾಗೂ ಅವನ ನಾಯಿಯ ಬಗ್ಗೆ ಸಹಾನುಭೂತಿಯಿಂದಲೋ ಗೆರಸಿಮ್‌ನ ಹೆದರಿಕೆಯಿಂದಲೋ ಯಾರೂ ಬಾಯಿ ಬಿಡಲಿಲ್ಲ. ಗೆವ್ರಿಲೋನಿಗೆ ಮಾತ್ರ ತುಸು ವಿವಂಚನೆಯಾಯಿತು.

"ಎಲ್ಲಿಯ ವರೆಗೆ ಒಡತಿಗೆ ಗೊತ್ತಾಗುವುದಿಲ್ಲವೋ ಅಲ್ಲಿಯ ವರೆಗೆ ಚಿಂತೆಯಿಲ್ಲ" ಎಂಬ ಸಮಾಧಾನ ತಂದುಕೊಂಡನು.

ಆ ದಿನದ ಕೆಲಸದಲ್ಲಿ ಗೆರಸಿಮ್‌ನ ಉತ್ಸಾಹ ತೀರ ಒಡೆದು ಕಾಣುತ್ತಿತ್ತು. ಅದು ಒಡತಿಯ ಗಮನಕ್ಕೂ ಬರುವಷ್ಟು ತೀವ್ರತರವಾಗಿದ್ದಿತು. ಗೆರಸಿಮ್ ಒಂದೆರಡು ಬಾರಿ ತನ್ನ ಕೋಣೆಯೊಳಗೆ ಹೋಗಿ, ಅದರ ಯೋಗಕ್ಷೇಮವನ್ನು ವಿಚಾರಿಸಿದ. ರಾತ್ರಿಯಾಗುತ್ತಲೂ ಎಂದಿನಂತೆ ಹುಲ್ಲಿನ ಬಣವೆಯ ಹತ್ತಿರ ಅಡ್ಡಾಡಹೋಗದೇ ಕೋಣೆಯಲ್ಲಿಯೇ ಮುಮೂನ ಹತ್ತಿರ ಮಲಗಿಕೊಂಡನು.

ಮಧ್ಯರಾತ್ರಿಯ ಹೊತ್ತಾಗಿರಬಹುದು. ಆಗ

ತನ್ನ ನಾಯಿಯನ್ನು ಕರೆದುಕೊಂಡು ತಿರುಗಾಡಲಿಕ್ಕೆ ಹೊರಟನು. ತುಂಬ ಹೊತ್ತಿನ ಅನಂತರ ಮರಳಿ ಬಂದನು. ಆದರೆ ಮಗ್ಗಲು ಸಂದಿಯಿಂದ ಬೇಲಿಯ ಹತ್ತಿರ ಸರಸರ ಸದ್ದು ಕೇಳಿಸುತ್ತಲೂ ಮುಮೂ ಕಿವಿ ನಿಮಿರಿಸಿ ಆ ಕಡೆಗೆ ಲಕ್ಷ್ಯಗೊಟ್ಟಿತು. ಕೂಡಲೇ ಅದಕ್ಕೆ ತನ್ನ ಕರ್ತವ್ಯದ ಅರಿವಾಗಿ ದನಿಯನ್ನು ಏರಿಸಿ ಬೊಗಳತೊಡಗಿತು. ಅಲ್ಲಿ ಮನುಷ್ಯರು ಬಂದದ್ದು ನಿಜ. ಕುಡುಕನೊಬ್ಬನು ಬೇಲಿಯ ಬುಡದಲ್ಲಿ ಆ ರಾತ್ರಿಯನ್ನು ಕಳೆಯುವ ಎತ್ತುಗಡೆಯಲ್ಲಿದ್ದನು ಆದರೆ ಹೊಟ್ಟೆಯಲ್ಲಿನ ಗ್ಯಾಸಿನಿಂದ ನರಳುತ್ತಿದ್ದ ಯಜಮಾನಿಗೆ ಅದೇ ವೇಳೆಗೆ ಜಂಪು ಹತ್ತುವುದರಲ್ಲಿರಬೇಕೆ? (ರಾತ್ರಿಯೂಟ ಭಾರವಾಯಿತೆಂದರೆ ಆಗಾಗ ಅವಳಿಗೆ ಹೀಗಾಗುತ್ತಿದ್ದುದುಂಟು.)

ನಾಯಿಯ ಬೊಗಳುವಿಕೆಯು ಅವಳನ್ನು ಎಚ್ಚರಿಸಿ ಎಬ್ಬಿಸಿ ಕೂಡ್ರಿಸಿತು. "ಅಯ್ಯೋ! ಅಯ್ಯೋ! ಎಲ್ಲಿದ್ದೀರ್ರೀ? ನಾ ಸತ್ತೆ. ನಾ ಸತ್ತೆ! ಅವ್ವಾ" ಎಂದು ಗೋಳಿಡತೊಡಗಿದಳು. ಅವಳ ದನಿ ಕೇಳಿ ೨-೩ ಜನ ದಾಸಿಯರು ಗಡಬಡಿಸಿ ಎದ್ದು ಬಂದರು. "ನಾಯಿ! ಅಬ್ಬಾ! ಡಾಕ್ಟರನ್ನು ಕರೆಯಿರಿ. ನಾ ಬದುಕಲಾರೆ. ಆ ಹಾಳು ನಾಯಿ ಮತ್ತೆ ಬಂದಿದೆ! ನನ್ನನ್ನು ಕೊಲ್ಲಬೇಕೆಂದೇ ಮಾಡಿದ್ದಾರೆ. ಹೌದು. ಅಯ್ಯಯ್ಯೋ. ಡಾಕ್ಟರ್ . . ."

ಮುದುಕಿಯು ಉಸಿರನ್ನು ಮೇಲೆ ಕೆಳಗೆ ಮಾಡುತ್ತ ಎಚ್ಚರದಪ್ಪುವ ಲಕ್ಷಣವನ್ನು ತೋರಿಸುತ್ತ, ದಾಸಿಯರಿಟ್ಟ ತಲೆದಿಂಬಿಗೆ ಆತು ಒರಗಿದಳು. ಮನೆಯ ಪರಿವಾರದಲ್ಲಿ ಡಾಕ್ಟರನೂ ಒಬ್ಬನಿದ್ದ. ಕರೆಸಿದಾಗ ಬಂದು ಒಡತಿಯ ನಾಡಿಯನ್ನು ನೋಡುವುದು, ಮುದುಕಿಯ ಬೊಬ್ಬೆ

ಹೆಚ್ಚಾದರೆ ನಿದ್ರೆಯ ಔಷಧ ಕೊಡುವುದು ಇದು ಅವನ ನಿತ್ಯದ ಕೆಲಸವಾಗಿದ್ದಿತು. ಡಾಕ್ಟರನು ಓಡುತ್ತಲೇ ಬಂದನು. ಗಂಭೀರವಾಗಿ ನಾಡಿಯನ್ನು ಹಿಡಿದು ಪರೀಕ್ಷಿಸಿದನು. ಅವಳು ಕಣ್ಣು ತೆರೆಯುತ್ತಲೂ ಬೆಳ್ಳಿಯ ಬಟ್ಟಲಿನಲ್ಲಿ ಅಳತೆ ಮಾಡಿದ ನೀರೊಳಗೆ 'ಲಾರೆಲ್' ಹನಿಗಳನ್ನು ಹಾಕಿ ಕುಡಿಯಲು ಕೊಟ್ಟನು. ಯಜಮಾನಿಯು ಔಷಧವನ್ನು ಸೇವಿಸಿದಳು. ನಾಯಿಯ ಹೆಸರಿನಲ್ಲಿ ತನ್ನ ಅಸ್ವಸ್ಥತೆಯ ಬಗ್ಗೆ, ಗೆವ್ರಿಲೋನ ಅಲಕ್ಷ್ಯದ ಬಗ್ಗೆ ಎಳೆದೆಳೆದು ಹೇಳತೊಡಗಿದಳು. ತಾನು ಏಕಾಕಿಯಾದೆನೆಂದೂ ತನಗಾಗಿ ಹಾರ್ದಿಕವಾಗಿ ಮರುಗುವವರು ಯಾರೂ ಇಲ್ಲವೆಂದೂ ಪ್ರತಿಯೊಬ್ಬರು ತಾನು ಸಾಯುವ ಗಳಿಗೆಯನ್ನೇ ಕಾಯುತ್ತಾರೆಂದೂ ಗೋಗರೆದಳು.

ಇತ್ತ ದುರ್ದೈವವೆಂಬಂತೆ ಮುಮೂ ಬೊಗಳುತ್ತಲೇ ಇತ್ತು. ಗೆರಸಿಮ್ ಅದನ್ನು ಬೇಲಿಯಿಂದ ಈಚೆಗೆ ಕರೆದೊಯ್ಯಲು ಯತ್ನಿಸುತ್ತಿದ್ದನು. ಮುದುಕಿಯು "ನಾಯಿ! ಅಯ್ಯೋ ನಾಯಿ! ಹಾಳಾದ್ದು, ಮತ್ತೆ ಬಂದಿದೆ" ಎಂದು ಅವಳು ಅಳುತ್ತಲೇ ಇದ್ದಳು. ಆಗ ಡಾಕ್ಟರನು ಬಳಿಯಲ್ಲಿದ್ದ ದಾಸಿಯ ಕಿವಿಯಲ್ಲಿ ಏನೋ ಹೇಳಿದನು. ಆಕೆ ಸ್ಟೀಪನ್ನನನ್ನು ಎಬ್ಬಿಸಿದಳು. ಸ್ಟೀಪನ್ ಗೆವ್ರಿಲೋನನ್ನು ಎಬ್ಬಿಸಿ ಪರಿಸ್ಥಿತಿಯನ್ನು ನಿವೇದಿಸಿದನು. ಮುಂದೆ ಎಲ್ಲ ಸೇವಕರು ಎಚ್ಚರಾದರು.

ಗೆರಸಿಮ್‌ಗೆ ನಾಯಿಯು ಬಾಯಿ ತೆಗೆದು ಒದರುತ್ತದೆ ಎಂದಷ್ಟೇ ಗೊತ್ತು. ಆದರೆ ಇಡೀ ಬಂಗಲೆಯಲ್ಲಿ ಪಟಪಟನೆ ದೀಪ ಹತ್ತಿಕೊಂಡ ಮೇಲೆಯೇ ಅದರ ಬೊಗಳುವಿಕೆಯ ಭೀಕರ ಪರಿಣಾಮದ ಅರಿವು ಅವನಿಗಾದದ್ದು. ಕೂಡಲೇ ನಾಯಿಯನ್ನು ಬಗಲಲ್ಲಿ ಎತ್ತಿಕೊಂಡವನೇ ತನ್ನ ಕೋಣೆಗೆ ಓಡಿ ಒಳಚಿಲಕವನ್ನು ಹಾಕಿಕೊಂಡನು.

ತುಸು ಹೊತ್ತಿನ ಮೇಲೆ ೪-೫ ಜನ ಅಲ್ಲಿಗೆ ಬಂದು ಬಾಗಿಲನ್ನು ಬಡಿದು ನೋಡಿದರು. ಅಲ್ಲಿಂದ ಅವಸರದಲ್ಲಿ ಗೆವ್ರಿಲೋನೇ ಒದರಾಡುತ್ತ ಅಲ್ಲಿಗೆ ಬಂದನು. ಬಾಗಿಲು ಚಿಲಕ ಹಾಕಿದ್ದನ್ನು ಕಂಡು ಇಬ್ಬರಿಗೆ ಅಲ್ಲಿಯೇ ಕಾವಲಿರಬೇಕೆಂದು ಆಜ್ಞಾಪಿಸಿ ಬಂಗಲೆಯೊಳಗೆ ಬಂದು, ಒಡತಿಯ ಮುಖ್ಯ ದಾಸಿಯನ್ನು ಕರೆದು, ನಾಯಿಯು ದುರ್ದೈವದಿಂದ ಓಡಿ ಬಂದಿದೆಯೆಂದೂ ಬೆಳಗಾದ ಕೂಡಲೇ ಅದನ್ನು ಕೊಲ್ಲಿಸಿಬಿಡುವುದಾಗಿಯೂ ಒಡತಿಯು ಶಾಂತ ರೀತಿಯಿಂದ ನಿದ್ರೆ ಮಾಡಬಹುದೆಂದೂ ಸಂದೇಶ ಕಳಿಸಿದನು.

ಮರುದಿನ ಬೆಳಿಗ್ಗೆ ಅವಳು ಏಳುವಾಗ ತುಂಬ ಹೊತ್ತಾಗಿದ್ದಿತು. ಗೆವ್ರಿಲೋನು ಮುಚ್ಚಿದ ಬಾಗಿಲ ಮೇಲೆ ದಾಳಿ ಮಾಡುವುದಕ್ಕೆ ಮುಂಚೆ ಒಡತಿಯ ಕೊನೆಗಳಿಗೆಯ ಅಪ್ಪಣೆಗಾಗಿ ಕಾದಿದ್ದನು.

ಒಡತಿಯು ತನ್ನ ಮುಖ್ಯ ದಾಸಿಯನ್ನು ಹಾಸಿಗೆಯ ಬಳಿ ಕರೆದು ಹೇಳಿದಳು. "ಲ್ಯುಬೋವ್.—" ಅವಳ ಮಾತಿನಲ್ಲಿಯ ದೀನ, ದೈನಾಸವು ದಾಸಿಯನ್ನು ಗಲಿಬಿಲಿಗೊಳಿಸಿತು. "ಲ್ಯುಬೋವ್, ನೋಡಿದೆಯಾ. ನನ್ನೀ ಸ್ಥಿತಿಯನ್ನು! ಹೋಗಮ್ಮ ಗೆವ್ರಿಲೋನನ್ನು ತುಸು ಕಂಡು ಬಾ. ಅವನಿಗೆ ಕೇಳು. ತನ್ನ ಒಡತಿಯ ಪ್ರಕೃತಿ—ಯಾಕೆ ಅವಳ ಪ್ರಾಣಕ್ಕಿಂತಲೂ ಒಂದು ಹಾಳು ನಾಯಿ ಅವನ ಪಾಲಿಗೆ ಹೆಚ್ಚು ಬೇಕಾಯಿತೇ ಎಂದು ಸ್ವಲ್ಪ ಕೇಳಿ ನೋಡು. ಗೆವ್ರಿಲೋನ ಕಡೆ ಹೋಗಿ ಬಾ ಮಗೂ. . . . ಅಪ್ಪಾ!" ಎಂದು ನಿಡುಸುಯ್ಯುವಾಗ ಅವಳ ದನಿಯಲ್ಲಿಯ ನಡುಕವು ಇನ್ನೂ ಹೆಚ್ಚಿತು.

ಮುಖ್ಯ ದಾಸಿಯು ಕೂಡಲೇ ಗೆವ್ರಿಲೋನಲ್ಲಿಗೆ ಹೋದಳು. ಅವರು ಏನೇನು ಮಾತಾಡಿದರೆಂಬುದು ಪೂರ್ಣ ತಿಳಿದುಬಂದಿಲ್ಲ. ಆದರೆ ತುಸು ಹೊತ್ತಿನಲ್ಲಿ ಸೇವಕವರ್ಗದ ದೊಡ್ಡ ಪಡೆಯು ಗೆರಸಿಮ್‌ನ ಕೋಣೆಯತ್ತ ಹೊರಟಿತ್ತು. ಗೆವ್ರಿಲೋ ಈ 'ದಂಡ' ಯಾತ್ರೆಯ ನೇತಾರನಾಗಿದ್ದನು.

ಗೆರಸಿಮನ ಕೋಣೆಯ ಮುಂದುಗಡೆ ಒಬ್ಬ ಕಾವಲುಗಾರನೂ ಮತ್ತಿಬ್ಬರೂ ಬಡಿಗೆ ಹಿಡಿದು

ಕೊಂಡು ಬಾಗಿಲನ್ನು ಕಾಯುತ್ತಿದ್ದರು. ಗೆವ್ರಿಲೋ ಬಂದವನೆ ಜೋರಾಗಿ ಬಾಗಿಲನ್ನು ಬಡಿಯುತ್ತ "ಹೂಂ ಬಾಗಿಲು ತಗೀ! ಯಾಕೆ ತಗಿಯುವಿಯೋ ಇಲ್ಲವೋ? ತಗೀ!" ಎಂದು ಕೂಗಿಕೊಳ್ಳತೊಡಗಿದನು.

ನೆರೆದವರಲ್ಲಿ ಒಬ್ಬನು, "ಅಲ್ಲ, ಗೆವ್ರಿಲೋ, ಅವನಿಗೆ ಕಿವಿ ಕೇಳಿಸುವುದಿಲ್ಲ!" ಎನ್ನುತ್ತಲೂ ಉಳಿದವರು ಖೊಳ್ಳನೆ ನಕ್ಕರು.

ತುಸು ಅಂತರದಲ್ಲಿದ್ದ ಸ್ಟೇಪನ್ "ಆ ಬಾಗಿಲಿಗೆ ಒಂದು ಕಿಂಡಿ ಇದೆ. ಅದರಲ್ಲಿ ಕೋಲು ಹಾಕಿ ಅಲ್ಲಾಡಿಸಿರಿ" ಎಂದು ಸೂಚಿಸಿದನು.

ಗೆವ್ರಿಲೋ ಬಾಗಿ ನೋಡಿದನು.

"ಹಾಳಾದ್ದು. ಅದಕ್ಕೆ ತನ್ನ ಕೋಟನ್ನು ಬೇರೆ ತುರುಕಿ ಬಂದು ಮಾಡಿದ್ದಾನೆ" ಎಂದನು. ಸ್ಟೇಪನ್ನನು ಕೋಲಿನಿಂದ ಆ ಕೋಟನ್ನು ದೂಡಿ, ಕೋಲನ್ನು ಒಳಗೆ ಅಲ್ಲಾಡಿಸುತ್ತಲೂ ನಾಯಿಯ ಬೊಗಳುವಿಕೆಯು ಕೇಳಬಂದಿತು. ಅದರ ಧ್ವನಿಗೆ 'ದಾಳಿಗಾರ'ರು ಮತ್ತೊಮ್ಮೆ ನಗೆಯ ಹೊನಲನ್ನು ಎಬ್ಬಿಸಿದರು.

ಸ್ಟೇಪನ್ನನು ಕೋಲನ್ನು ಒಳಗೆ ಸುತ್ತೆಲ್ಲ ತಿರುಗಿಸುತ್ತ "ಹೂಂ. ಹೊರಗೆ ಬಾ! ಬಾ. ಹೊರಗೆ!" ಎಂದು ಒದರತೊಡಗಿದನು.

ಅವನು ಇನ್ನೂ ಕೋಲನ್ನು ತಿರುಗಿಸುತ್ತಿರುವಾಗಲೇ ಥುತ್ತೆಂದು ಬಾಗಿಲು ತೆರೆಯಿತು. ಮೆಟ್ಟಿಲ ಬಳಿಯಿದ್ದವರು ಹೆದರಿ ತುಸು ಹಿಂದೆ ಸರಿದರು. ಗೆರಸಿಮ್ ತನ್ನ ಹೊಸ್ತಿಲ ಮೇಲೆ ನಿಂತುಕೊಂಡು, ಪರಿವಾರದತ್ತ ಕಣ್ಣು ಹಾಯಿಸಿದನು. ರಾಕ್ಷಸನೊಬ್ಬ ಹುಲುಮಾನವರ ಮುಂದೆ ನಿಂತಂತೆ ಕಂಡಿತು.

ಗೆವ್ರಿಲೋನೇ ಧೈರ್ಯವನ್ನು ತಂದುಕೊಂಡು, ಒಂದಡಿ ಮುಂದೆ ಇಟ್ಟು "ಇಂಥ ಹುಚ್ಚುಚ್ಚಾರ ಇಲ್ಲಿ ನಡೆಯುವುದಿಲ್ಲ. ಹಂ. ತಿಳಿಯಿತೇ" ಎಂದು ಹೇಳಿ, ಒಡತಿಯ ಆಜ್ಞೆಯಂತೆ ನಾಯಿಯ ಮರಿಯನ್ನು ಒಪ್ಪಿಸಬೇಕೆಂತಲೂ ತಕರಾರು ಮಾಡಿದರೆ ಅದರ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲವೆಂದೂ ಸನ್ನೆ-ಸೂಕ್ಷ್ಮಗಳಿಂದ ಅವನಿಗೆ ತಿಳಿಸಿ ಹೇಳಿದನು.

ಗೆರಸಿಮ್ ನಾಯಿಯ ಕಡೆ ಕೈಮಾಡಿ, ಆ ಮೇಲೆ ತನ್ನ ಕುತ್ತಿಗೆಯ ಹತ್ತಿರ ತನ್ನ ಕೈಬೆರಳುಗಳನ್ನು ಆಡಿಸಿ, ಗೆವ್ರಿಲೋನನ್ನು ಪ್ರಶ್ನಾರ್ಥಕವಾಗಿ ನೋಡಿದನು.

"ಹಾಂ. ಹಾಂ. ಅದೇ ನಾವೂ ಹೇಳುವುದು!"

ಗೆರಸಿಮ್ ಕೆಳಗೆ ನೋಡಿದನು. ನಿಷ್ಪಾಪಿಯಾದ ಮುಮೂ ಬಾಲವನ್ನು ಅಲ್ಲಾಡಿಸುತ್ತ, ಕಿವಿಯಿಂದ ಎಲ್ಲವನ್ನೂ ಲಕ್ಷ್ಯಗೊಟ್ಟು ಕೇಳುತ್ತ ಅವನ ಕಾಲ ಬಳಿಯಲ್ಲಿ ನಿಂತಿದ್ದಿತು. ಅಲ್ಲಿಂದ ಗೆರಸಿಮ್ ಮುಖವೆತ್ತಿ ಇನ್ನೊಮ್ಮೆ ನಾಯಿಯೆಡೆಗೆ ಬೊಟ್ಟು ಮಾಡಿ, ತನ್ನ ಕುತ್ತಿಗೆಯನ್ನು ಒತ್ತಿ ಹಿಡಿದುಕೊಂಡು, ಆಮೇಲೆ ಅರ್ಥಪೂರ್ಣವಾಗಿ ತನ್ನೆದೆಯನ್ನು ತಟ್ಟಿಕೊಂಡನು. ತಾನೇ ನಾಯಿಯ ಜೀವನವನ್ನು ಕೊನೆಗಾಣಿಸುವೆನೆಂಬ ಅವನ ಸಂಜ್ಞೆಯು ಇತರರಿಗೆ ಅರ್ಥವಾಯಿತು.

"ನೀನು ಮೋಸ ಮಾಡುವಿ" ಎಂದು ಗೆವ್ರಿಲೋ ಮರುಸನ್ನೆ ಮಾಡಿದನು.

ಗೆರಸಿಮ್ ಅವನನ್ನು ಕೂರಾಗಿ ಒಮ್ಮೆ ನೋಡಿ ತಾತ್ಸಾರದ ನಗೆಯನ್ನು ನಕ್ಕನು. ಇನ್ನೊಮ್ಮೆ ತನ್ನ ಎದೆಯನ್ನು ತಟ್ಟಿಕೊಂಡು ಹೇಳಿದವನೆ, ಬಾಗಿಲನ್ನು ಧಡಾರನೆ ಇಕ್ಕಿಕೊಂಡನು.

ನೆರೆದವರಿಗೆ ದಿಗಿಲಾಯಿತು. "ಮುಂದೇನು? ಇವನು ಮತ್ತೆ ಬಾಗಿಲನ್ನಿಕ್ಕಿದನಲ್ಲಾ" ಎಂದನು ಗೆವ್ರಿಲೋ.

"ಗೆವ್ರಿಲೋ, ಅವನನ್ನು ಬಿಟ್ಟುಬಿಡು. ಆಡಿದಂತೆ ಅವನು ಮಾಡುತ್ತಾನೆ. ಇತರರ ಹಾಗಲ್ಲ. ಒಮ್ಮೆ ಮಾತು ಕೊಟ್ಟನೆಂದರೆ ಮುಗಿಯಿತು" ಎಂದನು ಸ್ಟೇಪನ್.

"ಹೌದು. ಹೌದು" ಎಂದು ಇನ್ನು ಕೆಲವರು ದನಿಗೂಡಿಸಿದರು.

"ಒಳ್ಳೇದು. ಹಾಗೇ ಆಗಲಿ, ಆದರೆ ಇಲ್ಲಿ ಯಾರಾದರೂ ಕಾವಲಿರಲೇಬೇಕು. ಹಾಂ. ಯೆರೋಶ್ಕಾ, ಹೇಗೂ ನಿನಗೆ ಕೆಲಸವಿಲ್ಲ. ನೀನು ಇಲ್ಲೇ ಕೂತಿರು. ಏನಾದರೂ ಆದರೆ ಕೂಡಲೇ

ನನಗೆ ಬಂದು ತಿಳಿಸಬೇಕು. ಗೊತ್ತಾಯಿತೆ?"

ಅಲ್ಲಿಯೆ ಒಬ್ಬರಿಂದ ಬಡಿಗೆಯನ್ನು ಇಸಿದುಕೊಂಡು, ಸಪ್ಪೆ ಮೊಗದ ಯೆರೋಶ್ಕಾ ಕೆಳ-ಮೆಟ್ಟಲಿನ ಮೇಲೆ ಕುಳಿತುಕೊಂಡನು. ಜನ ಸಂದಣಿಯು ಕರಗಿತು. ಕೆಲ ಹುಡುಗರು ಮಾತ್ರ ಅಲ್ಲಿ ಉಳಿದರು. ಗೆವ್ರಿಲೋ ಬಂಗಲೆಯ ಕಡೆಗೆ ತಿರುಗಿ, ಅಲ್ಲಿ ಮುಖ್ಯ ದಾಸಿಯ ಮುಖಾಂತರ, ಒಡತಿಗೆ ಅವರ ಆಜ್ಞೆಯಂತೆ ನಡೆಯಲಾಗಿದೆಯೆಂಬ ವಾರ್ತೆಯನ್ನು ಕಳುಹಿದನು. ಏನೇ ಇರಲಿ ಎಂದುಕೊಂಡು ಒಬ್ಬ ಪೋಲೀಸರವನಿಗೂ ಹೇಳಿ ಕಳುಹಿದನು. ಯಜಮಾನಿಯು ತನ್ನ ಸಿಲ್ಕಿನ ಕರವಸ್ತ್ರಕ್ಕೆ ಇನ್ನಷ್ಟು 'ಯೂಡಿಕೋಲನ್ನ'ನ್ನು ಸುರಿದುಕೊಂಡು, ಹಣೆಯನ್ನು ವಸ್ತ್ರದಿಂಪ ತಿಕ್ಕಿಕೊಳ್ಳುತ್ತ ಆ ವಾರ್ತೆಯನ್ನು ಕೇಳಿಕೊಂಡಳು. ತನ್ನ ಚಹವನ್ನು ಕುಡಿದಳು. ನಿದ್ದೆಯ ಔಷಧದ ಅಮಲು ಪೂರ್ಣ ಇಳಿದಿರಲಿಲ್ಲ. ಆಕೆ ಮತ್ತೆ ನಿದ್ದೆ ಹೋದಳು.

ಒಂದು ತಾಸಿನ ನಂತರ ಗೆರಸಿಮ್‌ನ ಬಾಗಿಲು ತೆರೆಯಿತು. ಗೆರಸಿಮ್ ಒಂದು ಹಗ್ಗವನ್ನು ಮುಮೂನ ಕೊರಳಿಗೆ ಕಟ್ಟಿ ಅದರ ಇನ್ನೊಂದು ತುದಿಯನ್ನು ತನ್ನ ಬೆರಳಲ್ಲಿ ಹಿಡಿದುಕೊಂಡು ಹೊರಗೆ ಬಂದನು. ಯೆರೊಶ್ಕಾ ಕೂಡಲೇ ಅವನಿಗೆ ದಾರಿ ಮಾಡಿಕೊಟ್ಟನು.

ಅಲ್ಲಿ ಇಲ್ಲಿ ನಿಂತುಕೊಂಡಿದ್ದ ಹುಡುಗರು, ಗೆರಸಿಮ್ ಗೇಟಿನ ಬಾಗಿಲನ್ನು ತೆಗೆದು ನಾಯಿಯೊಡನೆ ಹೊರಗೆ ಹೋಗುವುದನ್ನು ನೋಡಿದರು. ಗೆರಸಿಮ್ ಹಿಂದೆ ಹೊರಳಿ ಕೂಡಾ ನೋಡಲಿಲ್ಲ. ಗೆವ್ರಿಲೋ ಯೆರೊಶ್ಕಾನನ್ನೇ ಮುಂದೇನು ನಡೆಯುವುದೆಂಬುದನ್ನು ನೋಡಲಿಕ್ಕೆ ಕಳಿಸಿಕೊಟ್ಟನು. ಓಡುತ್ತೋಡುತ್ತ ಗೆರಸಿಮ್‌ನನ್ನು ಹಿಂಬಾಲಿಸಿದ ಯೆರೊಶ್ಕಾ

Printed and published by H. R. Purohit at
the Samyukta Karnatak Press, Koppikar Road, Hubli.

Regd. No. B 7487

KASTURI
September, 1958

A comprehensive Kannada Monthly Digest which circulates throughout the New Mysore State and commands the highest number of readers wherever Kannada is spoken in India. It caters to all tastes and is appreciated by all alike.